# ಇತಿಹಾಸದ ರಶ್ಮಿಗಳು



ಹಟ್ಟಿಯಂಗಡಿ ಲಕ್ಷ್ಮೀನಾರಾಯಣ ಕಾಮತ್

# ಇತಿಹಾಸದ ರಶ್ಮಿಗಳು

ಲೇಖಕರು :

ದಿ। ಹಟ್ಟಿಯಂಗಡಿ ಲಕ್ಷ್ಮೀನಾರಾಯಣ ಕಾಮತ್

ಸಂಪಾದಕರು :

ಪಯ್ಯನ್ನೂರು ರಮೇಶ್ ಪೈ

ಪಿ. ಜಿ. ಕಾಮತ್ ಫೌಂಡೇಶನ್

ಎರಣಾಕುಳಂ

2016

Kannada

**ITIHAASADA RASHMIGALU**

(Essays)

Author :

**Hattiangadi Lakshminarayana Kamath**

Edited by :

**Payyanur Ramesh Pai**

Seva by :

**H.Ranganath Kamath**



First Edition : October 2016

***Published by :***

**P. G. Kamath Foundation**

'Puduma', Parinamam Road,
Kaloor, Ernakulam,
**KOCHI - 682 017 [Kerala State]**
Cell : 9447730866
e-mail: pgkamat.foundation@gmail.com
www.pgkamathfoundation.com

***Typesetting by :***

Sri Ganesh Graphics, Alke,
MANGALURU - 575 003 [Karnataka State]

***Printed at :***

Ayodhya Printers, Elamakkara,
ERNAKULAM - 682 026
Copies 1000
₹ 200

---



Hattiangadi Lakshminarayana Kamath

Date of Birth : 26th April 1883
Date of Death : 12th January 1966

**ಶ್ರೀಮತ್ಪರಮಹಂಸ ಪರಿವ್ರಾಜಕಾಚಾರ್ಯ ಕುಲತಿಲಕ ಯಮನಿಯಮಾ
ಧ್ಯಷ್ಟಾಂಗ ಯೋಗ ಸಂಪನ್ನ ಪದವಾಕ್ಯ ಪ್ರಮಾಣ ಪಾರವಾರ
ಪಾರಂಗತ ಸರ್ವತಂತ್ರ ಸ್ವತಂತ್ರ ಶ್ರೀಮದ್ವೈಷ್ಣವ ಸಿದ್ಧಾಂತ
ಪ್ರತಿಷ್ಠಾಪನಾಚಾರ್ಯ ಶ್ರೀಮದ್ವ್ಯಾಸರಘುಪತಿದೇವ
ದಿವ್ಯ ಶ್ರೀಪಾದ ಪದ್ಮಾರಾಧಕ ಶ್ರೀಮದ್ವರದೇಂದ್ರ ತೀರ್ಥ ಶ್ರೀಪಾದ
ಕರಕಮಲ ಸಂಜಾತ ಶ್ರೀಮತ್‌ಸುಕೃತೀಂದ್ರ ತೀರ್ಥ ಶ್ರೀಪಾದ ವರಕುಮಾರಕ**

**ಪರಮಪೂಜ್ಯ ಶ್ರೀಕಾಶೀಮಠಾಧೀಶ ಶ್ರೀಮತ್ ಸುಧೀಂದ್ರತೀರ್ಥ ಶ್ರೀ ಗುರುವರ್ಯರ ಚರಣಕಮಲಗಳಲ್ಲಿ ಸಾಷ್ಟಾಂಗ ಪ್ರಣಾಮವನ್ನು ಸಲ್ಲಿಸುತ್ತಾ, ಅವರ ಪಟ್ಟ ಶಿಷ್ಯ ಶ್ರೀಮತ್ ಸಮ್ಯಮೀಂದ್ರ ತೀರ್ಥ ಶ್ರೀಗುರುವರ್ಯರ ಚರಣಕಮಲಗಳಲ್ಲಿ ಹಟ್ಟಿಯಂಗಡಿ ರಂಗನಾಥ ರಾಮಕೃಷ್ಣ ಕಾಮತ್ ಗಂಗೊಳ್ಳಿ ಮಾಡುವ ಸಾಷ್ಟಾಂಗ ಪ್ರಣಾಮಗಳು.**

ಶ್ರೀ ದೇವರ ಅನುಗ್ರಹದಿಂದ , ಶ್ರೀಗುರುವರ್ಯರ ಆಶೀರ್ವಾದದಿಂದ ನಾವೆಲ್ಲರೂ ಕ್ಷೇಮದಲ್ಲಿದ್ದೇವೆ.

ನನ್ನ ಅಜ್ಜ ದಿ। ಹಟ್ಟಿಯಂಗಡಿ ಲಕ್ಷ್ಮೀನಾರಾಯಣ ಕಾಮತ್ (ಕೊಗ್ಗ ಕಾಮತ್) ಅವರ ಜೀವಿತ ಕಾಲದಲ್ಲಿ ಸಂಶೋಧನೆ ಮಾಡಿ ಸ್ವತಃ ಕೈಯಿಂದ ಬರೆದ "**ಶ್ರೀ ಕಾಶೀಮಠ ಸಂಸ್ಥಾನ ಮತ್ತು ಬಸ್ರೂರು** " ಬಗ್ಗೆ ವಿಷಯಗಳನ್ನು ಪುಸ್ತಕ ರೂಪದಲ್ಲಿ ಪ್ರಕಟಿಸುವರೇ ನಿಶ್ಚಯಿಸಿರುತ್ತೇನೆ.

ಸದ್ರಿ ಪುಸ್ತಕಕ್ಕೆ ಪರಮಪೂಜ್ಯ ಶ್ರೀಮತ್ ಸಮ್ಯಮೀಂದ್ರ ತೀರ್ಥ ಶ್ರೀಗುರುವರ್ಯರು " ಅನುಗ್ರಹ ಸಂದೇಶ " ವನ್ನು ನೀಡಿ ಆಶೀರ್ವದಿಸಬೇಕಾಗಿ ವಿನಂತಿಸಿಕೊಳ್ಳುತ್ತೇನೆ.

ತತ್ಸಂಬಂಧ ಗುರುಕಾಣಿಕೆ ರೂ. 505/- ನಗದು ಲಗ್ತೀಕರಿಸಿರುತ್ತೇನೆ. ಸ್ವೀಕರಿಸಿ, ನಮ್ಮೆಲ್ಲರನ್ನು ಆಶೀರ್ವದಿಸಬೇಕಾಗಿ ಶ್ರೀ ಗುರುವರ್ಯರ ಚರಣಕಮಲಗಳಲ್ಲಿ ವಿನಂತಿಸಿಕೊಳ್ಳುತ್ತೇನೆ.

ತಾರೀಕು: 10-10-2015

ಹಟ್ಟಿಯಂಗಡಿ ರಂಗನಾಥ ರಾಮಕೃಷ್ಣ ಕಾಮತ್
ಗಂಗೊಳ್ಳಿ




**SHRIMAD SAMYAMINDRA THIRTHA SWAMI**

Pattashishya of

**SHRIMAD SUDHINDRA THIRTHA SWAMI**

Matadhipathi of Shree Kashi Math Samsthan, Varanasi


Sri Pattabhi Ramachandra Temple
Camp: Koteshwara 576 222 Date: 12-10-2015
Ref: 2089

ನಮ್ಮ ಪರಮಪ್ರಿಯ ಶಿಷ್ಯರಾದ ಗಂಗೊಳ್ಳಿ ಹೋಬಳಿಯಲ್ಲಿರುವ ಪಟ್ಟಿಯಂಗಡಿ ರಂಗನಾಥ ರಾಮಕೃಷ್ಣ ಕಾಮತರಿಗೆ ಕೃತಾನೇಕ ಶ್ರೀ ಮನ್ನಾರಾಯಣ ಸ್ಮರಣಪೂರ್ವಕ ಪ್ರೀತಿಯ ಆಶೀರ್ವಾದಗಳು.

ತರುವಾಯ ನೀವು ನಿಮ್ಮ ಪಿತಾಮಹರಾದ ದಿ। ಪಟ್ಟಿಯಂಗಡಿ ಲಕ್ಷ್ಮೀನಾರಾಯಣ ಕಾಮತರು ರಚಿಸಿದ "ಶ್ರೀ ಕಾಶೀಮಠ ಸಂಸ್ಥಾನ ಮತ್ತು ಬಸ್ರೂರು" ಬಗ್ಗೆ ವಿಷಯಗಳನ್ನು ಪುಸ್ತಕ ರೂಪದಲ್ಲಿ ಪ್ರಕಟಿಸುವರೇ, ಆಶೀರ್ವಾದ ಯಾಚಿಸಿ ತಾ. 10-10-2015 ರಂದು ಬರೆಕೊಂಡ ವಿನಂತಿ ಪತ್ರ ಮತ್ತು ಕಾಣಿಕೆ ರೂ 505/= ತಲುಪಿ ಸಂತೋಷವಾಯಿತು.

ಸದ್ರಿ ನಿಮ್ಮ ಪುಸ್ತಕ ಪ್ರಕಟಣೆಯ ಕಾರ್ಯಗಳು ನಿರ್ವಿಘ್ನದಿಂದ ಯಶಸ್ವೀಯಾಗಿ ಜರಗಿ, ನಿಮ್ಮ ಮನೋಭೀಷ್ಟ ಸಿದ್ಧಿಸುವುದಕ್ಕೂ, ನಿಮ್ಮ ಮತ್ತು ನಿಮ್ಮ ಕುಟುಂಬದವರೆಲ್ಲರ ಉತ್ತರೋತ್ತರ ಶ್ರೇಯೋಭಿವೃದ್ಧಿಗೋಸ್ಕರವೂ ಶ್ರೀ ವ್ಯಾಸರಘುಪತಿ ದೇವರ ಸನ್ನಿಧಿಯಲ್ಲಿ ಪ್ರಾರ್ಥಿಸಿ, ಶ್ರೀ ಮುದ್ರಾಗಂಧ ಪ್ರಸಾದಾಕ್ಷತೆಯನ್ನು ಇದರೊಂದಿಗೆ ರವಾನಿಸಿಯದೆ. ಸ್ವೀಕರಿಸಿ ಕೃತಾರ್ಥರಾಗುವುದು.

# GURUPARAMPARA OF SRI KASHI MATH



SHRIMAD VIJAYEENDRA THEERTHA SWAMIJI

ಶ್ರೀಮದ್ ವಿಜಯೀಂದ್ರ ತೀರ್ಥಸ್ವಾಮೀಜಿ



SHRIMAD YADAVENDRA THEERTHA SWAMIJI
( VRINDAVAN AT BHATKAL )

ಶ್ರೀಮದ್ ಯಾದವೇಂದ್ರ ತೀರ್ಥಸ್ವಾಮೀಜಿ



SHRIMAD KESHAVENDRA THEERTHA SWAMIJI
( VRINDAVAN AT BASUR )

ಶ್ರೀಮದ್ ಕೇಶವೇಂದ್ರ ತೀರ್ಥಸ್ವಾಮೀಜಿ



SHRIMAD RAGHAVENDRA THEERTHA SWAMIJI
( VRINDAVAN AT KASHI )

ಶ್ರೀಮದ್ ರಾಘವೇಂದ್ರ ತೀರ್ಥಸ್ವಾಮೀಜಿ

## GURUPARAMPARA OF SRI KASHI MATH




ಶ್ರೀಮದ್ ದೇವೇಂದ್ರ ತೀರ್ಥಸ್ವಾಮೀಜಿ




ಶ್ರೀಮದ್ ಮಾಧವೇಂದ್ರ ತೀರ್ಥಸ್ವಾಮೀಜಿ




ಶ್ರೀಮದ್ ವಿಬುಧೇಂದ್ರ ತೀರ್ಥಸ್ವಾಮೀಜಿ




ಶ್ರೀಮದ್ ಭುವನೇಂದ್ರ ತೀರ್ಥಸ್ವಾಮೀಜಿ

# GURUPARAMPARA OF SRI KASHI MATH




ಶ್ರೀಮದ್ ವರದೇಂದ್ರ ತೀರ್ಥಸ್ವಾಮೀಜಿ




ಶ್ರೀಮದ್ ಸುಕೃತೀಂದ್ರ ತೀರ್ಥಸ್ವಾಮೀಜಿ




ಶ್ರೀಮದ್ ಸುಧೀಂದ್ರ ತೀರ್ಥಸ್ವಾಮೀಜಿ




ಶ್ರೀಮದ್ ಸಂಯಮೀಂದ್ರ ತೀರ್ಥಸ್ವಾಮೀಜಿ



H.H. SRIMAD BHUVANENDRA TIRTHA SWAMIJI

Invitation issued in 1986 for H.H. Srimad Bhuvanendra Tirtha Swamiji's Punyatithi Centenary Celebrations at Basrur (H. Ramakrishna Kamath was the President of the Celebration Committee)

# FATHER AND SONS FROM GANGOLLI



**H. Ramakrishna Kamath**
**1911-1995**



**H. Ranganath Kamath**
**Born : 1935**



**H. Surendranath Kamath**
**Born : 1945**

# ಪರಿವಿಡಿ



## ಅನುಬಂಧ

## PUBLISHER's NOTE

While bringing out this book 'Itihaasada Rashmigalu' written by late Sri. Hattiangady Lakshminarayana Kamath (Gangolli), depicting the history of Sri Kashi Math Samsthan as well as some GSB temples of South Canara region of Karnataka, we feel really gratified. We are delighted and overwhelmed too. Delighted for our first book in Kannada language, truly following the light shown by our guide Late.P.G.Kamath, a multilingual scholar. Overwhelmed for the efforts and enthusiasm taken by a grandson (Sri.H.R.Kamath, 81 years) to realize his dream of publishing the contribution of his industrious grand father Late H.L.Kamath. A great example worthy of emulation.

Although our focus is on publications in Konkani language, we have brought out books in Malayalam and English as well. This is a step to strengthen our resolution of preserving Konkani Culture and Heritage.

We bow before the great soul, the late H.L.Kamath, a great visionary who preserved a glimpse of our history for the posterity.

We record our humble thanks to --

01. H.H.Srimad Samyamindra Tirtha Swamiji, Matadhipati of Sri Kashi Math Samsthan, who provided a Message of Blessings and also kindly consented to formally release the book while camping at Sri Lakshmi VenkateshTemple, Hosdurg, Kanhangad
02. Sri. H.Ranganath Kamath of Gangolli, the eldest grandson of the Author, for providing many valuable materials including the specimen handwriting of the author
03. Sri. H.Surendranath Kamath of Bangalore, the younger grandson of the author, for providing a rare photograph of his grandfather
04. Sri. B.A.Prabhu of Basrur, for providing his memoir revealing the personality of the author

05. Sri. C.V.Kamath, Mangalore, for providing a few books where the authors have acknowledged the help received from H.L.Kamath,

06. Sri. Premnath Kudva, Mangalore, for providing a few group photos figuring H.L.Kamath. These were originally published in the CPC Co. Ltd's "Golden Jubilee Volume 1914-1964"

07. World Konkani Centre, Mangalore, for allowing us to use their library and archives

08. Kodial Khaber Konkani Fortnightly, Mangalore, for facilitating smooth coordination with various contact points

09. Studio XL, Mangalore, for providing copies of photographs taken in 1944, where H.L.Kamath appears with H.H.Swamijis of Kashi Math.These were published in 'Gurudarshanam' Navati commemoration album, 2015

10. GSB Vikas Parishad, Ernakulam, for supplying the images of the portraits of the Guruparampara of Sri Kashi Math Samsthan

11. Sri. V.Vishwanatha Prabhu, Ernakulam, for providing copy of a Souvenir of 1967 as a useful source material

12. Sri. Payyanur Ramesh Pai, Chairman, Konkani Sahitya Akademi – Kerala, for making this posthumous publication a reality

13. M/s. Sri Ganesh Graphics, Mangalore, for the nice typesetting

and

14. M/s. Ayodhya Printers, Ernakulam, for the excellent printing

We are sure this book will be welcomed by all those who love our community, history and heritage.

For P. G. KAMATH FOUNDATION,

**Anand G. Kamath**

# ಮುನ್ನುಡಿ

ಎರಡು ಮೂರು  ವರ್ಷಗಳ ಹಿಂದೆ ತಲಚೇರಿಗೆ ಹೋದಾಗ ಅಲ್ಲಿ ಜಿ.ಎಸ್.ಬಿ. ವಿದ್ಯಾರ್ಥಿಗಳಿಗೆ ವಿದ್ಯಾರ್ಥಿವೇತನ ನೀಡುವ ಪ್ರತಿಷ್ಠಾನದ ಕಾರ್ಯಕರ್ತರಾದ ಶ್ರೀ. ಎಲ್. ದಿನೇಶ್ ರಾವ್ ಅವರ ಪರಿಚಯವಾಯಿತು. ತನ್ನ ಮಾವ ಶ್ರೀ. ಎಚ್. ರಂಗನಾಥ ಕಾಮತರನ್ನು ಅವರು ಪರಿಚಯ ಮಾಡಿಕೊಟ್ಟರು. ಕೆಲವೇ ಕ್ಷಣಗಳಲ್ಲಿ ಕಾಮತರು ಹಿರಿಯರ ಪೀಳಿಗೆಯ ಗೆಳೆಯರಾದರು. 81ರ ಇಳಿಯ ವಯಸ್ಸಿನಲ್ಲೂ ಉತ್ಸಾಹದ ದಿಟ್ಟ ಹೆಜ್ಜೆಗಳು. ಪ್ರೀತಿ ಹಾಗೂ ಭರವಸೆ ತುಂಬಿದ ಕಣ್ಣುಗಳು. ಮಮತೆಯ ಕಿರುನಗೆ. ಸಾಮಾನ್ಯ ಎತ್ತರ. ಅವರ ಕೈಯಲ್ಲಿ ಒಂದು ಚೀಲವಿತ್ತು ; ಅದರಲ್ಲಿ ತನ್ನ ಅಜ್ಜ ದಿವಂಗತ ಹಟ್ಟಿಯಂಗಡಿ ಲಕ್ಷ್ಮೀನಾರಾಯಣ ಕಾಮತರು ಬರೆದ ಇತಿಹಾಸ ಪುಸ್ತಕದ ಹಾಳೆಗಳು. ಅದನ್ನೆತ್ತಿ ತೋರಿಸುತ್ತಾ ಅವರು ಕೇಳಿಕೊಂಡರು : "ಈ ಪುಸ್ತಕವನ್ನು ಪ್ರಕಟಿಸಲಿಕ್ಕೆ ವ್ಯವಸ್ಥೆ ಮಾಡಬೇಕು".

ಅಜ್ಜನವರ ಬಗ್ಗೆ ಮಾತನಾಡುವಾಗ ಶ್ರೀ. ರಂಗನಾಥ ಕಾಮತರಿಗೆ ಒಂದು ನಾಲಿಗೆ ಸಾಲದು. ಅಷ್ಟೊಂದು ಹೆಮ್ಮೆ. ಹೌದು. ತನ್ನ ಅಜ್ಜನ ಮಹತ್ವವನ್ನು ಗುರುತಿಸಿ ಅರಿತು ಹೆಮ್ಮೆ ಪಡುವ ಈ ಮೊಮ್ಮಗ ನಮ್ಮ ಸಮಕಾಲೀನರಲ್ಲಿ ಒಂದು ಅಪರೂಪದ ವ್ಯಕ್ತಿತ್ವವೆಂದು ಅದೇ ಕ್ಷಣದಲ್ಲಿ ಗೊತ್ತಾಯಿತು. "ಕಾಗದಗಳು ಕೊಡಿ, ಓದಿನೋಡಿ ಪ್ರಯತ್ನಮಾಡೋಣ" ಎಂದು ನಾನು ಉತ್ತರ ಕೊಟ್ಟೆ.

ಸಡಿಲವಾಗಿದ್ದ ಹಾಳೆಗಳನ್ನು ಒಂದೊಂದಾಗಿ ಓದಿ ನೋಡಿದೆ. ತನ್ನ ಊರಿನ ಹಾಗೂ ಸಮಾಜದ ವಿಷಯದಲ್ಲಿ ದಿ। ಲಕ್ಷ್ಮೀನಾರಾಯಣ ಕಾಮತರಿಗೆ ಎಷ್ಟೊಂದು ಆಕಾಂಕ್ಷೆ ಇತ್ತು ಎಂಬುದು ಅವರ ಲೇಖನಗಳಲ್ಲಿ ಕಾಣುತ್ತದೆ. ಮಠ ಮಂದಿರಗಳಲ್ಲಿ ಎಲ್ಲಾದರೂ ಹಳೆಯ ದಾಖಲೆಗಳು, ಶಾಸನಗಳು, ಹಸ್ತಪ್ರತಿಗಳು, ಕೈಚೀಟುಗಳು, ಶಿಲಾಲೇಖಗಳು ಇರುವುದಾಗಿ ತಿಳಿದರೆ ಅದನ್ನು ಓದಿ ಅದರ ಮಾಹಿತಿ ಅರಿತು ನೋಂದಾಯಿಸುವ ಹವ್ಯಾಸ ಅವರಿಟ್ಟುಕೊಂಡಿದ್ದರು. ಚರಿತ್ರೆಯನ್ನು ಬರೆದಿಡುವ ಪ್ರಯತ್ನ ಪಡುವವರಿಗೆ ತನ್ನ ಕೈಯಲ್ಲಿರುವ ಸಾಮಗ್ರಿಯನ್ನು ಸಂತಸದಿಂದ ಕೊಟ್ಟು ಸಹಾಯಿಸುವ ವಿಶಾಲ ಮನ ಅವರದ್ದು. ತಪ್ಪು ಕಂಡರೆ ಸರಿ ಏನೆಂದು ಯುಕ್ತಿಪೂರ್ವಕ ಸ್ಥಾಪಿಸುವ ವರ್ತನೆಯಿಂದ ಹಲವರ ಆದರಕ್ಕೆ ಅವರು ಪಾತ್ರರಾದರು. ಅವರು ತಯಾರಿಸಿದ ಲೇಖನಗಳನ್ನು ಪ್ರಶಸ್ತರು ಉಪಯೋಗಿಸಿದ್ದಾರೆ. ಮೂಲ ದಾಖಲೆಯ ನಕಲು ಬರೆದಿಟ್ಟು ಇತಿಹಾಸರಚನೆಗೆ ಅನುಕೂಲವಾದ ಅಮೂಲ್ಯವಸ್ತುಗಳು ಒದಗಿಸಿಕೊಟ್ಟ ಕಾಮತರಿಗೆ ತನ್ನ  ಜೀವಮಾನದಲ್ಲಿ ಆ ಅರಿವಿನ ಸಂಚಯವನ್ನು ಮುದ್ರಿಸಲು ಸಾಧ್ಯವಾಗಲಿಲ್ಲ.

ಶ್ರೀ. ರಂಗನಾಥ ಕಾಮತರು ಅಜ್ಜನವರ ಬಗ್ಗೆ ಬರೆದ ನೆನಪುಗಳು ಇಲ್ಲಿ ಮಂಡಿಸಲಾಗಿದೆ. ಅಲ್ಲದೆ ಕಾಮತರ ಕೋರಿಕೆಯಂತೆ ಅವರ ಸಹಪಾಠಿಯಾಗಿದ್ದ ಶ್ರೀ. ಜಿ.ಎ. ಪ್ರಭು ಅವರು ದಿ| ಕಾಮತರ ಬಗ್ಗೆಯ ತನ್ನ ನೆನಪುಗಳನ್ನೂ ಬರೆದು ಕಳುಹಿಸಿದ್ದಾರೆ. ಇನ್ನೊಬ್ಬ ಮೊಮ್ಮಗನಾದ ಶ್ರೀ. ಎಚ್. ಸುರೇಂದ್ರನಾಥ ಕಾಮತರು ಅಜ್ಜನ ಭಾವಚಿತ್ರವನ್ನು ಹುಡುಕಿ ತಂದು ಕೊಟ್ಟರು. ಅಜ್ಜನವರ ಪ್ರಯತ್ನ ವ್ಯರ್ಥವಾಗದೆ ಇನ್ನೂ ಮುಂದಿನ ಪೀಳಿಗೆಗೆ ಉಪಕರಿಸಬೇಕೆಂಬ ಮೊಮ್ಮಕ್ಕಳ ಉತ್ಕಟವಾದ ಅಭಿಲಾಷೆ ನೋಡಿದಾಗ ಈ ಪುಸ್ತಕದ ಪ್ರಕಟಣೆ ಒಂದು ಅತ್ಯಗತ್ಯವೆಂಬುದು ಮನವರಿಕೆಯಾಯಿತು.

ಶ್ರೀ ಕಾಶೀಮಠ ಸಂಸ್ಥಾನದ ಚರಿತ್ರೆಯನ್ನು ಈಗಾಗಲೇ ಹಲವಾರು ವಿದ್ವಾಂಸರು ಬರೆದಿದ್ದಾರೆ. ದಿ| ಲಕ್ಷ್ಮೀನಾರಾಯಣ ಕಾಮತರ ಪುಸ್ತಕ ಇಂತಹ ಇನ್ನೊಂದು ಚರಿತ್ರೆ ಎಂದು ಹೇಳಲಾಗುವುದಿಲ್ಲ. ಇದರಲ್ಲಿ ಕಾಶೀಮಠದ ಹೊರತು ಗೋಕರ್ಣಮಠ, ಉಡುಪಿ ಶ್ರೀಕೃಷ್ಣ ಮಠ, ಕೈವಲ್ಯ ಮಠ – ಹೀಗೆ ವ್ಯತ್ಯಸ್ತ ಮಠಗಳಿಂದ ಸಂಗ್ರಹಿಸಿದ ಮಾಹಿತಿಗಳು ಕಾಣಸಿಗುತ್ತವೆ. ಬಸರೂರು, ಕುಂದಾಪುರ, ಹೆಮ್ಮಾಡಿ, ಭಟ್ಕಳ, ಗಂಗೊಳ್ಳಿ ಪ್ರದೇಶದ ಹಲವಾರು ದೇವಸ್ಥಾನಗಳ ವಿಷಯ ತಿಳಿಯಲಾಗುತ್ತದೆ. ತಾಮ್ರಶಾಸನಗಳು, ರಾಯಸಪತ್ರಗಳು, ರಹದಾರಿಗಳು, ದಸ್ತೈವೇಜುಗಳು – ಹೀಗೆ ಅನೇಕ ಆಧಾರ ಸಾಮಗ್ರಿಗಳ ವಿಷಯಗಳು ಗೊತ್ತಾಗುತ್ತವೆ. ಆದುದರಿಂದ ಈ ಪುಸ್ತಕಕ್ಕೆ ಇತಿಹಾಸವೆಂದು ಹೇಳದೆ 'ಇತಿಹಾಸದ ರಶ್ಮಿಗಳು' ಎಂದು ಹೆಸರಿಟ್ಟಿದ್ದೇವೆ.

ತುಂಬಾ ಉದ್ದದ ವಾಕ್ಯಗಳು ಹಳೆಯ ಕನ್ನಡಗದ್ಯದಲ್ಲಿ ಹೇರಳ ಕಂಡು ಬರುತ್ತವೆ. ಲಕ್ಷ್ಮೀನಾರಾಯಣ ಕಾಮತರು ಬರೆದಿಟ್ಟ ಈ ಪುಸ್ತಕದಲ್ಲೂ ಅಂತಹ ಸುದೀರ್ಘ ವಾಕ್ಯಗಳು ಧಾರಾಳವಾಗಿ ಸಿಗುತ್ತವೆ. ಸರಿಯಾಗಿ ಅರ್ಥ ಗ್ರಹಿಸಬೇಕಾದರೆ ಅವನ್ನು ಮುರಿದು ನೋಡಿ ಪರಸ್ಪರ ಅನ್ವಯಿಸಬೇಕಾಗುತ್ತದೆ. ಎಲ್ಲಿಂದ ಹೊರಟಿತೋ ಎಲ್ಲಿ ಬಂದು ಮುಟ್ಟಿತೋ ಎಂದು ಕೆಲವೊಮ್ಮೆ ಅತಿಶಯ ಪಡುವುದೂ ಸಹಜ. ಅಂದರೆ ಭಾಷಣದಂತೆ ಬರೆಯುವಾಗಲೂ ಧಾರೆ ಮುರಿಯದಂತೆ ವಿಷಯವನ್ನು ವ್ಯಕ್ತಪಡಿಸುವ ಶೈಲಿ: ಇದು ದಿ| ಕಾಮತರ ಒಂದು ವಿಶೇಷತೆ.

ಮಂಗಳೂರಿನಿಂದ ದಿ| ವಿ.ಎಸ್.ಕುಡ್ವಾ ಅವರು ಸಂಪಾದಕರಾಗಿ ಪ್ರಕಟವಾಗುತ್ತಿದ್ದ 'ಸಾರಸ್ವತ' ಕೊಂಕಣಿ ವಾರಪತ್ರಿಕೆಯಲ್ಲಿ ದಿ| ಕಾಮತರ ಒಂದು ಲೇಖನ ಬಂದದ್ದಾಗಿ ಓದಿದ್ದೆ. ತುಂಬಾ ಪ್ರಯತ್ನಪಟ್ಟರೂಕೂಡಾ ಅವರ ಆ ಲೇಖನಮಾತ್ರ ಕೈಸೇರಲಿಲ್ಲ. ಆದರೆ 'ಸಾರಸ್ವತ'ದ 1945ರ ಎರಡು ಸಂಚಿಕೆಗಳಲ್ಲಾಗಿ ಒಂದೆರಡು ವರದಿಗಳು

ಕಾಣಸಿಕ್ಕಿದುವು. ಅವನ್ನು ಈ ಪುಸ್ತಕದಲ್ಲಿ ಅನುಬಂಧವಾಗಿ ಅಳವಡಿಸಿದ್ದೇವೆ. ಇದರಿಂದ ಶ್ರೀ. ಕಾಮತರ ವ್ಯಕ್ತಿತ್ವವನ್ನು ಇನ್ನಷ್ಟು ಆಪ್ತವಾಗಿ ಗುರುತಿಸಬಹುದು. ಅವರ ಕೈಬರಹದ ಒಂದು ನಮೂನೆಯನ್ನೂ ಇಲ್ಲಿ ಕೊಡಲಾಗಿದೆ.

ದಿ। ಕಾಮತರು ಇಂಗ್ಲೀಷಿನಲ್ಲಿ ಬರೆದಿದ್ದ ಒಂದು ಅಪರೂಪದ ಲೇಖನ ಇದರೆಡೆಯಲ್ಲಿ ಸಿಕ್ಕಿತು. ಓದುಗರಿಗಾಗಿ ಅದನ್ನೂ ಇಲ್ಲಿ ಸೇರಿಸಿದ್ದೇವೆ. ದಿ। ಕಾಮತರ ಸಮಗ್ರಜೀವನದ ದಾಖಲೀಕರಣ ಇನ್ನೂ ಆಗಬೇಕಷ್ಟೆ. ದಿ। ಉಳ್ಳಾಲ ಶ್ರೀನಿವಾಸ್ ಮಲ್ಯ, ಕಮಲಾದೇವಿ ಚಟ್ಟೋಪಾಧ್ಯಾಯ, ಕವಿ ಮುದ್ದಣ ಮುಂತಾದ ಪ್ರಮುಖರು ಗಂಗೊಳ್ಳಿಯಲ್ಲಿ ಅವರ ಆತಿಥ್ಯವನ್ನು ಸ್ವೀಕರಿಸಿದ್ದಾರೆ. ಕೆಲವೊಂದು ವಿಷಯಗಳು ಮತ್ತೂ ಹುಡುಕಬೇಕಾಗುತ್ತದೆ. ಆದರೂ ಈ ಪ್ರಯುಕ್ತ ನಾವು ಒಂದು ಕಿರುಪ್ರಯತ್ನ ನಡೆಸಿದ್ದೇವೆ. ಅನುಬಂಧದಲ್ಲಿ ಅದನ್ನೂ ಓದಬಹುದು.

ಅಜ್ಜನವರು ನಿಧನರಾಗಿ ಐವತ್ತು ವರ್ಷಗಳು ಕಳೆದುವು; ಆದರೂ ಮೊಮ್ಮಕ್ಕಳಿಗೆ ಅಜ್ಜನವರ ಬಗ್ಗೆ ಆದರ ಹಾಗೂ ಅವರು ಮಾಡಿಟ್ಟ ಕೆಲಸದ ಬಗ್ಗೆ ಗೌರವ ಇನ್ನೂ ಹಸುರಾಗಿ ಉಳಿದಿದೆ. ಒಂದು ರೀತಿಯಲ್ಲಿ ನೋಡಿದರೆ ಇದೊಂದು ನಿಜಭಾವನೆಯ ತರ್ಪಣವೇ ಹೌದು.

ಹಿರಿಯರು ನಡೆದು ಬಂದ ದಾರಿ ಹಳೆಯದಾಯಿತು; ಆದರೂ ಕೆಲವೊಮ್ಮೆ ನಮಗೆ ಹಿಂತಿರುಗಿ ನೋಡಬೇಕಾಗುತ್ತದೆ. ಅಲ್ಲಿ ಅಂಧಕಾರ ತೋರುವಾಗ ಪ್ರಕಾಶ ಬೀರುವಂತೆ ಇಂತಹ ಇತಿಹಾಸದ ರಶ್ಮಿಗಳು ನಮಗೆ ನೆಮ್ಮದಿ ನೀಡುತ್ತವೆ. ಇಂತಹ ಮೊಮ್ಮಗನವರು ನಮ್ಮ ಸಮಾಜದಲ್ಲಿ ಈಗಲೂ ಇದ್ದಾರೆ ಎಂಬುದು ಭವಿಷ್ಯದ ಬಗ್ಗೆ ಭರವಸೆ ನೀಡುವ ಒಂದು ಕಾರಣವಾಗುತ್ತದೆ. ಹಿರಿಯರ ಆದರ್ಶ ಅದೇ.

ನಮನಗಳೊಂದಿಗೆ,

– **ಪಯ್ಯನ್ನೂರು ರಮೇಶ್ ಪೈ**

# ನಾನು ಕಂಡಂತೆ ನನ್ನ ಅಜ್ಜ ಕೊಗ್ಗ ಮಾಮನವರು

## (SRI H.L. KAMATH)

ಈ ಜಗತ್ತಿನಲ್ಲಿ ನಮ್ಮ ತಾಯಿ, ತಂದೆ, ಗುರುಗಳು ದೇವರ ಸಮಾನರು. ಹಾಗೆಯೇ ಧರ್ಮಪೀಠಾಧಿಶರು, ನಮ್ಮನ್ನು ರೂಪಿಸಿದ ಹಿರಿಯರೂ ಸಹ, ದೇವರಿಗೆ ಸಮವೆನ್ನುವುದರಲ್ಲಿ ತುಂಬಾ ಅರ್ಥವಿದೆ. ನನ್ನ ಅಜ್ಜ ಶ್ರೀ. ಕೊಗ್ಗ ಮಾಮನವರ ವಿರಾಮದ ವೇಳೆಯಲ್ಲಿ ತಮ್ಮ ಜೀವನದ ಅನುಭವ ನಮಗೆಲ್ಲ ಹೇಳುವ ಪರಿಪಾಠವಿರಿಸಿಕೊಂಡಿದ್ದರು. ಈ ಮಾತುಗಳು ನಿಜಕ್ಕೂ ಧರ್ಮ ಬೋಧ. ವಿಶೇಷವಾ। ತಮ್ಮ ರಕ್ಷಕರಾದ ದಿ। ಶ್ರೀ. ಎಚ್. ಶ್ರೀನಿವಾಸ್ ಕಾಮತ್‌ರು (ದೊಡ್ಡಜ್ಜ) ಅವರಿಗೆ ಮನದಟ್ಟು ಮಾಡಿದ ವಿಚಾರ ತಿಳಿಸುತ್ತಿದ್ದರು. ಅಜ್ಜನವರ ಕೃತಿಯ ಬಿಡುಗಡೆಯ ಈ ಸಂದರ್ಭದಲ್ಲಿ ನನ್ನ ಮನಸ್ಸಿನಲ್ಲಿ ಗಟ್ಟಿಯಾಗಿ ನೆಲೆನಿಂತ ನಾಲ್ಕು ವಾಕ್ಯಗಳನ್ನು ಓದುಗರೊಡನೆ ಹಂಚಿಕೊಳ್ಳುವುದರಲ್ಲಿ ನನಗೆ ವಿಶೇಷ ತೃಪ್ತಿಯಿದೆ, ಖುಷಿಯಿದೆ.

1883ನೇ ಇಸವಿ ಎಪ್ರಿಲ್ 26 ನನ್ನ ಅಜ್ಜನ ಜನ್ಮ ದಿನ. ಅವರು ಹುಟ್ಟಿದ್ದು, ಮಂಗಳೂರಿನಲ್ಲಿ. ಅವರ ತೀರ್ಥರೂಪರಾದ ದಿ। ಶ್ರೀ ರಾಮಕೃಷ್ಣ ಕಾಮತ್‌ರು ಅಂದಿನ ಜಿಲ್ಲಾ ಕಲೆಕ್ಟರ್‌ರವ ಕಛೇರಿಯಲ್ಲಿ ಇಂಗ್ಲೀಷ್‌ನಲ್ಲಿ ಪರಿಣತಿ ಹೊಂದಿದ ಹಿರಿಯ ಕಾರಕೂನರಾಗಿದ್ದರು. ಭಾಷೆಯಲ್ಲಿ ಹಿಡಿತ, ಕನ್ನಡದಿಂದ ಆಂಗ್ಲ ಭಾಷೆಗೆ ತರ್ಜುಮೆ ಮುಂತಾದವುಗಳಿಂದ ಕಲೆಕ್ಟರ್‌ರವರ ಹಾಗೂ ಮಂಗಳೂರಿನ ವರ್ತಕರಿಂದ ಹಿಡಿದು ಜನ ಸಾಮಾನ್ಯರ ಪ್ರೀತಿಗಳಿಸಿದ್ದರು. ನನ್ನ ಅಜ್ಜ ಹುಟ್ಟಿದ ಐದಾರು ತಿಂಗಳುಗಳಲ್ಲಿಯೇ ಶ್ರೀ ರಾಮಕೃಷ್ಣ ಕಾಮತರು ದೈವಾಧೀನರಾದರು. ಆಗ ನನ್ನ ದೊಡ್ಡಜ್ಜ ದಿ। ಶ್ರೀ ಎಚ್. ಶ್ರೀನಿವಾಸ್ ಕಾಮತ್‌ರು ಶ್ರೀ ರಾಮಕೃಷ್ಣ ಕಾಮತ್‌ರ ಧರ್ಮಪತ್ನಿ ಹಾಗೂ ಮಗುವನ್ನು ಬಸ್ರೂರು ಮಂಡಿಕ್ಕೇರಿದು ಹಿರಿಯರ ಮನೆಗೆ ಕರೆತಂದು ಆ ಜವಾಬ್ದಾರಿಯನ್ನು ನಿಷ್ಠೆಯಿಂದ ನಿರ್ವಹಿಸಿದು.

ಬಸ್ರೂರಿನಲ್ಲಿ ಶ್ರೀ ಸಂಸ್ಥಾನ ಕಾಶೀಮಠದ ಖ್ಯಾತ ಸ್ವಾಮೀಜಿಯವರಾದ ಶೀಮದ್ ಭುವನೇಂದ್ರ ತೀರ್ಥರು ಹಾಗೂ ಶ್ರೀಮದ್ ವರದೇಂದ್ರ ತೀರ್ಥರಿಂದ ಅನುಗೃಹಿತರಾರು. ಶ್ರೀ ಶ್ರೀನಿವಾಸ್ ಕಾಮತ್‌ರು ಅವರ ಶಾಖಾ ಮಠದ ಶ್ರೀ ಗುರುವರ್ಯರ ಸನ್ನಿಧಾನಕ್ಕೆ ತೆರಳುವ ಪ್ರತಿ ಬರಿಯಲ್ಲಿಯೂ ಕೊಗ್ಗ ಮಾಮನವರನ್ನು ಕರೆದುಕೊಂಡು ಹೋಗುತ್ತಿದ್ದರು. ಹೀಗಾಗಿ ಎಳವೆಯಲ್ಲಿಯೇ ಗುರುಗಳ ಮಾತು ಆಲಿಸುವ ಭಾಗ್ಯ

ನನಗಾಯಿತು. ಸ್ವಾಮೀಜಿ ಪ್ರೀತಿಯಿಂದ ನೀಡಿದ, ದ್ರಾಕ್ಷಿ, ಕಲ್ಲುಸಕ್ಕರೆ ಸವಿಯುವ ಅದೃಷ್ಟ ನನ್ನದಾಯಿತು ಎಂದು ಅಜ್ಜ ಪುನಃ ಪುನಃ ನನ್ನೊಡನೆ ಹೇಳಿದ್ದುಂಟು.

ದಿ| ಶ್ರೀನಿವಾಸ ಕಾಮತ್‌ರ ಜೀವನದ ಒಂದು ಮುಜುಗರದ ಸಂದರ್ಭವನ್ನು ಅಜ್ಜ ರೋಚಕವಾಗಿ ವಿವರಿಸಿದ್ದಿದೆ. ಒಮ್ಮೆ ಪೂಜ್ಯ ಶ್ರೀಮದ್ ಭುವನೇಂದ್ರ ತೀರ್ಥರು ಧೋಲಿಯಲ್ಲಿ ಆಸೀನರಾಗಿ ಪಯಣ ಬೆಳೆಸುವ ವೇಳೆ, ಶ್ರೀನಿವಾಸ್ ಕಾಮತ್‌ರಿಗೆ ಪ್ರಸಾದವನ್ನು ಕರೆದು ನೀಡಿದರು. ಮನೆಗೆ ಬಂದು ನೋಡುವಾಗ ಪ್ರಸಾದದ ಜೊತೆ ಶ್ರೀ ನರಸಿಂಹ ಸಾಲಿಗ್ರಾಮ ! ಈ ಹಿರಿಯರಿಗೆ ಏನೂ ಮಾಡುವುದೆಂದು ತಿಳಿಯಲಿಲ್ಲ. ಒಂದೆಡೆ ಗುರುಗಳ ದಯೆ, ಇನ್ನೊಂದೆಡೆ ಮನೆಯಲ್ಲಿ ದೇವರ ಪೂಜೆಯಿದ್ದರೂ ಪ್ರಭಾವಿ ಸಾಲಿಗ್ರಾಮ ಇರಿಸಿಕೊಳ್ಳಲು ಭಯ. ಆನಂತರ ತಮ್ಮ ಪುರೋಹಿತ ಬಸ್ರೂರು ಶ್ರೀ ಲಕ್ಷ್ಮೀ ದಾಮೋದರ ದೇವಳದ ಅರ್ಚಕ ವೇ| ವಾಸುದೇವ ಪಾಂಡುರಂಗ ಭಟ್ಟರೊಡನೆ ಸಮಾಲೋಚನೆ ನಡೆಯಿಸಿ, ಸೂಕ್ತ ಅಮೃತ ಪಡಿ ಸಮೇತ ಸಾಲಿಗ್ರಾಮ ಒಪ್ಪಿಸಿದ ಬಳಿಕ ಈ ಧರ್ಮಭೀರು ಕಾಮತ್‌ರಿಗೆ ಸುಖನಿದ್ದೆ ಬಂತು.

ಬಸ್ರೂರು ಕಾಶೀ ಮಠದ ಎದುರಿಗಿರುವ ಶ್ರೀ ರಾಮಚಂದ್ರದೇವಾಲಯವನ್ನು ಜೀರ್ಣೋದ್ಧಾರ ಗೈದು, ಸೂಕ್ತ ವ್ಯವಸ್ಥೆ ಮಾಡಿದ್ದು ಕೊಗ್ಗ ಮಾವನವರಾದರೂ, ಈ ದೇವ ಗುರು ಸೇವೆಗೆ ಪ್ರೇರಕ ಶಕ್ತಿ ಶ್ರೀ. ಶ್ರೀನಿವಾಸ್ ಕಾಮತ್‌ರು. ನಮ್ಮ ರಾಮಚಂದ್ರ ದೇವಳ ಸಾರಸ್ವತ ಬ್ರಾಹ್ಮಣ ಸಮಾಜ ಬಾಂಧವರದ್ದು. ವ್ಯವಸ್ಥಾಪಕರಾದ ಅರ್ಚಕರು ಈ ಊರನ್ನು ಬಿಟ್ಟು ತೆರಳುವ ಸಂದರ್ಭದಲ್ಲಿ ಸಮೀಪದ ಕೆರೆಕಟ್ಟೆಯ ಅರ್ಚಕ ರೊಬ್ಬರೊಡನೆ ದೇವಳ ಮಾರಾಟದ ಪ್ರಕ್ರಿಯೆ ಆರಂಭಿಸಿದ್ದರು. ಈ ವಿದ್ಯಾಮಾನ ತಿಳಿದ ಪೂಜನೀಯ ಶ್ರೀಮದ್ ವರದೇಂದ್ರ ತೀರ್ಥರು ಶ್ರೀನಿವಾಸ ಕಾಮತ್‌ರನ್ನು ಕರೆದು ಸೂಕ್ತ ಕಾರ್ಯಾಚರಣೆಗೆ ಪ್ರೇರಣೆ ದಯಪಾಲಿಸಿದರು. ಪರಿಪಕ್ವಮತಿಗಳಾದ ಕಾಮತ್‌ರು ಇಬ್ಬರನ್ನೂ ಕರೆಯಿಸಿ, ಹೆಚ್ಚಿಗೆ ಹಣವನ್ನು ಇಬ್ಬರಿಗೂ ನೀಡಿ, ಉಭಯ ಪಕ್ಷೀಯರಿಗೂ ಸಂತೋಷವಾಗುವಂತೆ ದೇವಳ ಖರೀದಿಸಿದರು.

ಸುದೀರ್ಘ ಕಾಲದ ಬಳಿಕ ನಮ್ಮ ಅಜ್ಜ ದೇವಾಲಯ ನಿರ್ಮಿಸಿ, ಪೂಜ್ಯ ಶ್ರೀಮದ್ ಸುಧೀಂದ್ರ ಸ್ವಾಮೀಜಿಯವರ ಕರ ಕಮಲಗಳಿಂದ ಪ್ರತಿಷ್ಠೆ ಮಾಡಿಸಿದರು. ಅಜ್ಜನವರ ಸದಿಚ್ಛೆ ಏನಿತ್ತು ? ದೇವಾಲಯದ ಸದುಪಯೋಗ, ಹಾಗೂ ಸಮಾಜ ಬಾಂಧವರಿಗೆ ಸೌಕರ್ಯ. ದೇವ ಗುರು ದಯೆಯಿಂದ ಈ ಉದ್ದೇಶ ಸಫಲವಾಗಿದೆ. ಕುಟುಂಬಕ್ಕೆ ರಕ್ಷಾ ಕವಚವಾಗಿದೆ.

ನನ್ನ ಅಜ್ಜ ಶ್ರೀ ಎಚ್. ಎಲ್. ಕಾಮತ್ (ಕೊಗ್ಗ ಕಾಮತ್) ರಿಗೂ ಶ್ರೀ ಸಂಸ್ಥಾನಕ್ಕೂ ಸಂಪರ್ಕ ಹಿಂದಿನಿಂದ ಇದ್ದರೂ, ನಮ್ಮ ದೇವಸ್ಥಾನ ಕಟ್ಟಿದ ಮೇಲೆ ಈ ಸಂಬಂಧ ಇಮ್ಮಡಿ, ಮುಮ್ಮಡಿಯಾಯಿತು. ಬಸ್ರೂರು ಶ್ರೀ ಶಾಖಾ ಮಠದ ಜೀರ್ಣೋದ್ಧಾರ, ಶಿಖರ ಕಲಶ ಪ್ರತಿಷ್ಠಾ ಮಹೋತ್ಸವದ, ಶ್ರೀ ಭುವನೇಂದ್ರ ಬಾಲಕಾಶ್ರಮ ಸ್ಥಾಪನೆಯ ಪೂರ್ವ ಭಾವಿ ಸಭೆಗಳು, ಉದ್ಘಾಟನಾ ಸಮಾರಂಭ, ಶ್ರೀ ಗುರುವರ್ಯ ಸುಧೀಂದ್ರ ತೀರ್ಥರಿಂದ ಬದರಿ ಇತ್ಯಾದಿ ಉತ್ತರ ಭಾರತ ಯಾತ್ರಾ ಕೃಷ್ಣಾರ್ಪಣದ ಪುಣ್ಯ ಕಾರ್ಯ, ಶ್ರೀಮದ್ ಸುಧೀಂದ್ರ ತೀರ್ಥರ ಹಾಗೂ ಕೈವಲ್ಯ ಮಠಾಧೀಶರ ಸಮಾಗಮ ಇತ್ಯಾದಿ ಅನೇಕಾನೇಕ ಸಂದರ್ಭಗಳಲ್ಲಿ ಅಜ್ಜನವರು ಸಾಕಷ್ಟು ಮುಂಚಿತವಾಗಿಯೇ ಬಸ್ರೂರಿಗೆ ಬಂದು, ಇಲ್ಲಿಯೇ ತಂಗಿ, ಸಹಭಾಗಿಗಳಾಗಿ ಕೃತಾರ್ಥರಾಗುತ್ತಿದ್ದರು. ಹಟ್ಟಿಯಂಗಡಿ ಪೂರ್ವಜರ ಊರು, ಮಂಗಳೂರು ಹುಟ್ಟಿದ ಊರು, ಗಂಗೊಳ್ಳಿ ವ್ಯವಹಾರದ ಊರು ಆಗಿದ್ದರೂ ಕೊಗ್ಗ ಮಾಮನವರಿಗೆ ಬಸ್ರೂರಿನ ಕುರಿತಾಗಿ, ಇಲ್ಲಿಯ ಮಠ ಮಂದಿರ, ಕುಲದೇವತಾ ಸನ್ನಿಧಿ, ಕುಟುಂಬದ ದೇವಾಲಯದ ಸಲುವಾಗಿ ಭಕ್ತಿ–ಶ್ರದ್ಧೆ ಅಚಲವಾಗಿತ್ತು. ಗಂಗೊಳ್ಳಿಯ ವಿದ್ಯಾಸಂಸ್ಥೆಗಳಲ್ಲಿ ಪ್ರಮುಖರಾಗಿದ್ದರು. ಬಸ್ರೂರಿನ ಹಿಂದೂ ಶಾಲೆ, ಜಿಲ್ಲಾ ಬೋರ್ಡು ಹೈಸ್ಕೂಲು (ಈಗ ಸರಕಾರಿ) ಇವುಗಳ ಲಾಲನೆ ಪಾಲನೆಯಲ್ಲಿ ತೊಡಗಿಸಿಕೊಂಡದ್ದನ್ನು ನಾವು ಮರೆಯುವಂತಿಲ್ಲ.

ಬಸ್ರೂರು ಹಿರಿಯ ಮನೆಯ ಅದ್ದೂರಿಯ ಶ್ರೀ ಗಣೇಶ ಚತುರ್ಥಿ, ವಾರ್ಷಿಕ ಮಹಾಲಯ (ಪಾರ್ವಣ ವಿಧಿಯ) ಶ್ರಾದ್ಧ ಇತ್ಯಾದಿಗಳಲ್ಲಿ ಶ್ರದ್ಧೆಯಿಂದ ಬಾಳಬೇಕು ಎನ್ನುವುದು ಅಜ್ಜನವರ ಹಿತನುಡಿ. ಅಂತೆಯೇ ಅವರು ನಡೆದು ತೋರಿಸಿದ್ದಾರೆ. ಗಂಗೊಳ್ಳಿ ಮನೆಯಲ್ಲಿಯೇ ಯಾವತ್ತೂ ದೇವರ ಹಿರಿಯರ ಕಾರ್ಯಗಳು ಕ್ರಮವಾಗಿ ನಡೆಯಿಸಲು ಅವರ ತುಂಬು ಮಾರ್ಗದರ್ಶನವಿತ್ತು. ನಿತ್ಯ ಅವರ ಓದು, ಓದಿದ್ದನ್ನು ಅರ್ಥೈಸಿಕೊಳ್ಳುವುದು, ಇತರರ ವಿಚಾರಗಳನ್ನು ಚೆನ್ನಾಗಿ ಕೇಳುವುದು, ಆನಂತರ ಸಾವಕಾಶವಾಗಿ, ಸುಂದರವಾಗಿ ಉತ್ತರಿಸುವುದು, ಹಿರಿಯರ ಈ ಒಳ್ಳೆಯ ಅಭ್ಯಾಸ ಎಲ್ಲರಿಗೂ ಪಾಠ ಹೇಳಿದಂತಿತ್ತು. ಮನೆ ಮಂದಿಯವರನ್ನು ಪ್ರೀತಿಸಿದಂತೆ, ವೈದಿಕರನ್ನು, ಸಮಾಜ ಬಾಂಧವರನ್ನು ಒಲವಿನಿಂದ ಗೌರವಿಸುತ್ತಿದ್ದರು. ಅಂತೂ ಮುಖ್ಯವಾಗಿ ಕೊಗ್ಗ ಮಾಮನವರು ಸದಾ ಅಧ್ಯಯನ ಶೀಲರು, ಸಂಶೋಧಕ ಪ್ರವೃತ್ತಿಯವರು ಹಾಗೂ ಸಾಧಕರು. ಅವರ ಪರಿಶ್ರಮದಿಂದ ದೀರ್ಘಕಾಲ ವಿಷಯ ಸಂಗ್ರಹಿಸಿ, ಇದೀಗ ಪರಮ ಪೂಜ್ಯ ಗುರುವರ್ಯ ಶ್ರೀಮದ್ ಸಂಯಮೀಂದ್ರ ತೀರ್ಥರ ಕರ ಕಮಲಗಳಿಂದ

ಅವರ ಕೃತಿ ಅನಾವರಣಗೊಳ್ಳುವುದು ನಮ್ಮೆಲ್ಲರ ಭಾಗ್ಯ ಎಂದು, ದೇವರ ಗುರುಗಳ ಸನ್ನಿಧಾನಕ್ಕೆ ಬಾಗುತ್ತ ಹಿರಿಯರಿಗೆ ಗೌರವ ಸೂಚಿಸುವ ನನ್ನೀ ಮಾತುಗಳನ್ನು ಓದುಗರಿಗೆ ಒಪ್ಪಿಸುತ್ತೇನೆ.

ನನ್ನ ಇಳಿ ವಯಸ್ಸಿನಲ್ಲಿ ಈ ಪುಸ್ತಕವನ್ನು ಪ್ರಕಟಿಸುವರೇ ಹಿಂದೇಟು ಹಾಕಿದಾಗ ಈ ಕಾರ್ಯ ಮುಂದುವರಿಸುವಂತೆ ನನ್ನಲ್ಲಿ ಧೈರ್ಯ ತುಂಬಿದ ನನ್ನ ತಮ್ಮ ಸುರೇಂದ್ರನಾಥನನ್ನು ಮತ್ತು ಪುಸ್ತಕವನ್ನು ಅಂದವಾಗಿ ಪ್ರಕಟಿಸುವರೇ ಮಾರ್ಗದರ್ಶನ ಮತ್ತು ಸಹಾಯ ಮಾಡಿದ ಶ್ರೀ ಪಯ್ಯನ್ನೂರು ರಮೇಶ್ ಪೈಯನ್ನು ಮನಸಾರೇ ಅಭಿನಂದಿಸುತ್ತೇನೆ.

**– ಎಚ್. ರಂಗನಾಥ ಕಾಮತ್**

# ನಾನು ಕಂಡಂತೆ ಶ್ರೀ ಹಟ್ಟಿಯಂಗಡಿ ಲಕ್ಷ್ಮೀನಾರಾಯಣ ಕಾಮತರು
## (ಜನನ : 1883 – ಮರಣ : 1966)

ಮಾನ್ಯ ಹಟ್ಟಿಯಂಗಡಿ ಲಕ್ಷ್ಮೀನಾರಾಯಣ ಕಾಮತರ ಜನಪ್ರಿಯ ಹೆಸರು – 'ಕೊಗ್ಗಮಾಮ್'. ಈ ಹೆಸರು ಕಿವಿಗೆ ಬಿದ್ದೊಡನೆ ನಮ್ಮ ಮನಸ್ಸು ಮುದಗೊಳ್ಳುತ್ತದೆ. ಕುತೂಹಲ ಕೆರಳುತ್ತದೆ. ಅಂತಹ ವ್ಯಕ್ತಿತ್ವ ಶ್ರೀಯುತ ಕಾಮತರದ್ದು. ಧಾರ್ಮಿಕ, ಸಾಮಾಜಿಕ, ಆರ್ಥಿಕ ಮುಂತಾದ ಕ್ಷೇತ್ರಗಳಿಗೆ ಅವರ ಕಾಣಿಕೆ ಅಪೂರ್ವವಾದುದು. ಅವರ ಕುರಿತು ಎರಡು ವಾಕ್ಯ ಬರೆಯುವುದೇ ಒಂದು ಸಾರ್ಥಕ ಕಾರ್ಯವೆನ್ನಬಹುದು.

ಉಡುಪಿ ಜಿಲ್ಲೆಯ ಬಸ್ರೂರು ಒಂದು ಐತಿಹಾಸಿಕ ನಗರ. ಗೌಡ ಸಾರಸ್ವತ ಬ್ರಾಹ್ಮಣರ ಪಾಲಿಗೆ ಒಂದು ಪುಣ್ಯ ಭೂಮಿ, ಮಠ – ವೃಂದಾವನಗಳ – ಕುಲದೇವತೆಗಳ ಆರಾಧ್ಯ ಕೇಂದ್ರ, ಈ ಊರಿನ ವಾರಾಹೀ ನದೀತೀರದ ಮಂಡಿಕೇರಿಯಲ್ಲಿ ಕಾಮತ್ ಕುಟುಂಬದ ಪ್ರಾಚೀನ ಮನೆ ಕಾಣಸಿಗುತ್ತದೆ. "ಕಮ್ತೇರ ಮನೆ" – ಎಂದೊಡನೆ ಆ ಹಿರಿಯ ಮನೆತನದ ಚರಿತ್ರೆ ನೆನಪಾಗುತ್ತದೆ. ಈ ಕುಟುಂಬದ ಭವ್ಯ ಗಣಪತಿ ವಿಗ್ರಹವನ್ನು ಗುಡಿಗಾರರ ಮನೆಯಿಂದ ತರುವ ದೃಶ್ಯ, ರಂಗ ಪೂಜಾದಿ ವೈಭವ, ಈ ಮಹಾಗಣಪತಿಯ ಹಿರಿತನದಲ್ಲಿ ಸಮಾಜ ಬಾಂಧವರ ಗಣಪತಿಯ ಮೆರವಣಿಗೆ, ಜಲಸ್ತಂಭನ, ಹುಲಿವೇಷದ ಅಬ್ಬರ – ಇತ್ಯಾದಿ ವರ್ಷಕ್ಕೊಮ್ಮೆ ಸ್ಥಳೀಯರ ಪಾಲಿಗೆ ಒದಗಿ ಬರುವ ಭಾಗ್ಯ. ಬಸ್ರೂರು ಸಮಾಜ ಬಾಂಧವರ ಕದಿರು ಹಬ್ಬ ಸಂಪನ್ನವಾಗುವುದು ಬಸ್ರೂರು ಶ್ರೀ ಗೋಕರ್ಣ ಮಠದಲ್ಲಿ. ಧಾನ್ಯ ಲಕ್ಷ್ಮೀ ಪೂಜೆಗೆ ಕದಿರಿನ ಹೊರೆ ಇಂದಿಗೂ ಕಾಮತ್ ಕುಟುಂಬದಿಂದಲೇ ಬರುತ್ತದೆ. ಇದು ಸಂಪ್ರದಾಯ. ಪೂಜ್ಯ ಶ್ರೀಮದ್ ಭುವನೇಂದ್ರ ತೀರ್ಥ ಶ್ರೀಪಾದರ ಪುಣ್ಯ ತಿಥಿ ಉತ್ಸವ – ಸಂತರ್ಪಣೆ ಸುಮಾರು ಒಂದು ಶತಮಾನದಷ್ಟು ದೀರ್ಘಾವಧಿ ನಡೆಯಿಸಿಕೊಂಡು ಬಂದ ಪರಂಪರೆ ಈ ಮನೆತನದ್ದು. ಕೇವಲ ಮಿಷನ್ ಶಾಲೆ ಇರುವ ಈ ಗ್ರಾಮದಲ್ಲಿ 1908ನೇ ಇಸವಿಯಲ್ಲಿ ಹಿಂದೂ ಶಾಲೆ ಸ್ಥಾಪಿಸಿ, ಬೆಳೆಯಿಸಿದ ಕೀರ್ತಿ ಈ ಮನೆಯ ಹಿರಿಯ ದಿವಂಗತ ಶ್ರೀ. ಶ್ರೀನಿವಾಸ ಕಾಮತರದ್ದಾಗಿದೆ.

ಇಂತಹ ಉದಾತ್ತ ಪೀಳಿಗೆಯಲ್ಲಿ ಜನ್ಮ ತಳೆದ ಶ್ರೀ ಕೊಗ್ಗ ಕಾಮತರ ಕಾರ್ಯಕ್ಷೇತ್ರ ಗಂಗೊಳ್ಳಿ. ಬಂದರು ಪರಿಸರದಲ್ಲಿಯೇ ಅವರ ವಾಸ್ತವ್ಯ ಹಾಗೂ ಉದ್ದಿಮೆ. ಬಂಡಸಾಲೆಯಲ್ಲಿ ವ್ಯಾಪಾರ – ವಹಿವಾಟು, ಮಚ್ವೆ ಮೂಲಕ ವ್ಯವಹಾರ, ಕಾರ್ಖಾನೆ ಇವುಗಳಿಂದ ಖ್ಯಾತನಾಮರು. ಗಂಗೊಳ್ಳಿಯಲ್ಲಿನ ಸರಸ್ವತಿ

ವಿದ್ಯಾಲಯದ ಕಾಲ ಕಾಲಿಕ ಅಭಿವೃದ್ಧಿಯಲ್ಲಿ ಕಾಮತರು ತಮ್ಮನ್ನು ಅರ್ಪಣಾ ಭಾವದಿಂದ ತೊಡಗಿಸಿಕೊಂಡಿದ್ದರು. ಕೊಂಕಣಿ, ಕನ್ನಡ, ಇಂಗ್ಲೀಷ್, ಮರಾಠಿ ಇತ್ಯಾದಿಗಳನ್ನು ಕಾಮತ್ ಮಾಮರು ಶ್ರದ್ಧೆಯಿಂದ ಆಚರಿಸಿಕೊಂಡು ಬಂದು ಧನ್ಯತೆ ಪಡೆದಿದ್ದರು. ಕೆನರಾ ಬ್ಯಾಂಕ್, ಸಿ.ಪಿ.ಸಿ. ಬಸ್ ಕಂಪನಿ, ಕೆನರಾ ವರ್ಕ್ ಶಾಪ್ ಮುಂತಾದ ಸಂಸ್ಥೆಗಳ ಅನುಭವೀ ನಿರ್ದೇಶಕರಾಗಿ ಅವರು ಗೈದ ಸೇವೆ ಅನುಪಮವಾದುದು.

'ಜನನಿ ಹಾಗೂ ಜನ್ಮ ಭೂಮಿ ಸ್ವರ್ಗಕ್ಕಿಂತ ಶ್ರೇಷ್ಠ' ಎಂದು ಬಲ್ಲವರು ಹೇಳುತ್ತಾರೆ. ತಮ್ಮ ಕರ್ಮ ಭೂಮಿ ಗಂಗೊಳ್ಳಿಯಾದರೂ ಹಿರಿಯರ ಜನ್ಮ ಭೂಮಿ ಬಸ್ರೂರಿನಲ್ಲಿ ನಿರಂತರ ಸಕ್ರಿಯವಾಗಿ ಪಾಲ್ಗೊಂಡುದುದು ಕಾಮತರ ಹಿರಿಮೆಗೆ ಉಜ್ವಲ ಸಾಕ್ಷಿಯೆನ್ನಬಹುದು. ಬಸ್ರೂರು ಮೂಡುಕೇರಿಯಲ್ಲಿ ಶ್ರೀ ಕಾಶೀಮಠದ ಸಮ್ಮುಖದಲ್ಲಿ ಶ್ರೀ ರಾಮಚಂದ್ರ ದೇವಸ್ಥಾನದ ನಿರ್ಮಾಣ ಶ್ರೀಯುತ ಎಚ್.ಎಲ್.ಕಾಮತರ ಮಹೋನ್ನತ ಕೊಡುಗೆಯಾಗಿದೆ. ನವ-ನವೀನ ದೇವಾಲಯ ಕಟ್ಟುವುದಕ್ಕಿಂತ ಜೀರ್ಣಗೊಂಡ ದೇವಾಲಯದ ನವೀಕರಣಕ್ಕೆ ಇಮ್ಮಡಿ ಸತ್ಫಲ ಎನ್ನುವುದು ಪ್ರತೀತಿ. ಇದನ್ನು ಮನಗಂಡು ಶ್ರೀಮಾನ್ ಕಾಮತರು ಸಾರಸ್ವತ ಸಮುದಾಯದ ಈ ದೇವಳದ ಜೀರ್ಣೋದ್ಧಾರ ಗೈದು, ಪೂಜನೀಯ ಶ್ರೀಮದ್ ಸುಧೀಂದ್ರ ತೀರ್ಥ ಶ್ರೀಪಾದರ ಕರಕಮಲಗಳಿಂದ ದಿನಾಂಕ 12.5.1955 ರಂದು ಪುನಃ ಪ್ರತಿಷ್ಠಾ ಮಹೋತ್ಸವ ನೆರವೇರಿಸಿದರು. ದೇವಳ ಬೆಳಗಬೇಕು, ಹತ್ತಿರದ ಶ್ರೀ ಕಾಶೀಮಠದ, ಶ್ರೀ ಸಂಸ್ಥಾನದ ಆಗು ಹೋಗುಗಳಿಗೆ ಸ್ಪಂದಿಸಬೇಕು, ಸಮಾಜ ಬಾಂಧವರ ಶುಭ ಶೋಭನಾದಿ ಕಾರ್ಯಗಳಿಗೆ ಅವಕಾಶ ಸಿಗಬೇಕು ಎನ್ನುವುದೇ ಕಾಮತರ ಹಿರಿಯಾಸೆಯಾಗಿತ್ತು. ಈ ಆಸೆ ಅಂದಿನಿಂದಲೂ ಫಲಪ್ರದವಾಗುತ್ತಲಿದೆ.

ಶ್ರೀ ರಾಮಚಂದ್ರ ದೇವಳದ ಪುನಃ ಪ್ರತಿಷ್ಠೆಯ ನಂತರ ಪೂಜ್ಯ ಶ್ರೀ ಗೋಕರ್ಣ ಮಠಾಧೀಶ ಶ್ರೀಮದ್ ದ್ವಾರಕಾನಾಥ ಶ್ರೀಪಾದರ ವಾಸ್ತವ್ಯ, ಶ್ರೀ ಕೈವಲ್ಯ ಮಠಾಧೀಶ ಶ್ರೀ ಸಚ್ಚಿದಾನಂದ ಸರಸ್ವತಿ ಶ್ರೀ ಪಾದರ ವಾಸ್ತವ್ಯಗಳಿಂದ ದೇವಾಲಯದ ಶೋಭೆ ಹೆಚ್ಚಿತು. ಶ್ರೀ ಪಾದತ್ರಯರ ಮೊಕ್ಕಂ ಏರ್ಪಡಿಸಿ, ಆಶೀರ್ವಾದ ಪಡೆದುದು ಕಾಮತ್ ಕುಟುಂಬದ ಪುಣ್ಯಾತಿಶಯವೆನ್ನಬೇಕು. ಶ್ರೀ ಕಾಶೀಮಠಕ್ಕೆ ಸಂದರ್ಭೋಚಿತವಾಗಿ ಆಗಮಿಸಿದ ಹಿರಿಯ ಯತಿ ಶ್ರೀಮದ್ ಸುಧೀಂದ್ರ ತೀರ್ಥ ಶ್ರೀಪಾದರನ್ನು ಪ್ರತಿ ಸಂದರ್ಭದಲ್ಲಿ ತಮ್ಮ ದೇವಳಕ್ಕೆ ಕರೆದೊಯ್ದು, ಸತ್ಕರಿಸಿ ಶಾಖಾ ಮಠದಲ್ಲಿ ಭಿಕ್ಷಾ ಸೇವೆ ಗೈದು ಕಾಮತರು ಪುಣ್ಯ ಭಾಜನರಾದರು.

1956ನೇ ಇಸವಿಯಲ್ಲಿ ಈ ಗುರು ಸೇವೆಗಳಿಗೆ ಪೂರಕವಾಗಿ ಪೂಜ್ಯ ಶೃಂಗೇರಿ ಜಗದ್ಗುರು ಶ್ರೀ ವಿದ್ಯಾಭಿನವ ತೀರ್ಥ ಭಾರತೀ ಶ್ರೀಪಾದರ ಮೊಕ್ಕಾಮನ್ನು ಬಸ್ರೂರು ಮೂಡುಕೇರಿ ಅಗ್ರಹಾರದಲ್ಲಿ ಊರಿನ ಸಮಸ್ತರ ಸಹಕಾರದಿಂದ ಏರ್ಪಡಿಸಿದುದು ಶ್ರೀ ಎಚ್. ಎಲ್. ಕಾಮತರ ಸಾಹಸವೇ ಸರಿ. ಗುರುವರ್ಯರಿಗೆ ಆಮಂತ್ರಣ, ಬಸ್ರೂರು ಗೋಕರ್ಣ ಮಠದ ಬಳಿಯಿಂದ ನಗರಪಿಡೀ ಶ್ರೀಗಳವರ ಅಡ್ಡ ಪಲ್ಲಕಿ ಉತ್ಸವ, ವಾಸ್ತವ್ಯ, ಬೃಹತ್ ಸಭೆ, ಆಶೀರ್ವಚನ – ಇವುಗಳ ನೇತೃತ್ವ ಶ್ರೀಯುತ ಕಾಮತರದ್ದಾಗಿತ್ತು. ಪೂಜ್ಯ ಶ್ರೀಮಚ್ಚರಣರು ಶ್ರೀ ರಾಮಚಂದ್ರ ದೇವಳಕ್ಕೆ ಮಡಿಯಲ್ಲಿಯೇ ಚಿತ್ತೈಸಿ ಶ್ರೀ ದೇವರ ಪೂಜೆಗೈದು, ಕಾಮತರ ತ್ರಿಶತಿ ಪೂಜಾ ಸೇವೆ ಸ್ವೀಕರಿಸಿ ಸರ್ವರನ್ನು ಹರಸಿದರು. ಹಿಂದೂ ಶಾಲೆಯ ಪ್ರಾಂಗಣದಲ್ಲಿ ನಡೆದ ಸಭೆಯಲ್ಲಿ ಸ್ವಾಗತ ಭಾಷಣ ಗೈದ ಶ್ರೀ ಎಚ್.ಎಲ್. ಕಾಮತರು "ವಸುಪುರವು ಸುವರ್ಣಪುರ" ಆಗಲು ಶ್ರೇಯಸ್ಸು ಕೋರಿದ್ದರು. ಆ ಮಾತು, ಅಂದಿನ ದೃಶ್ಯಾವಳಿ, ಇಂದಿಗೂ ಗ್ರಾಮಸ್ಥರ ಮನದಾಳದಲ್ಲಿ ಹಸುರಾಗಿಯೇ ಉಳಿದಿದೆ.

ಶ್ರೀ ರಾಮಚಂದ್ರ ದೇವಳದ ಶಿಲಾನ್ಯಾಸದ ದಿನವೇ ಕೊಗ್ಗ ವಾಮನವರು ಬಸ್ರೂರು ಪೇಟೆ ಶ್ರೀ ಮುಖ್ಯಪ್ರಾಣ ದೇವಳದ ಶಿಲಾನ್ಯಾಸಗೈದುದನ್ನು ನಾವೆಲ್ಲಾ ಮರೆಯುವಂತಿಲ್ಲ. 1952ರಲ್ಲಿ ಶ್ರೀಮತ್ ಸುಧೀಂದ್ರ ತೀರ್ಥರ ಕರಕಮಲಗಳಿಂದ ಪ್ರತಿಷ್ಠಾಪಿತ ಈ ದೇವಳದ ಮೊಕ್ತೇಸರರಾಗಿಯೂ ಕಾಮತರು ಸೇವೆ ಅರ್ಪಿಸಿದ್ದಾರೆ.

ಕುಂದಾಪುರ ತಾಲೂಕಿನ ಹೆಮ್ಮಾಡಿ ಶ್ರೀ ಕಾಶೀ ಮಠದ ನಿತ್ಯ ವಿನಿಯೋಗದ ಬಗ್ಗೆ ಕೊಗ್ಗ ವಾಮನವರ ಕುಟುಂಬದ ಹಿರಿಯರು ಭೂದಾನ ಮಾಡಿದ್ದರು. ಅಂತೆಯೇ ಅದೇ ಪೀಳಿಗೆಯ ಕೊಗ್ಗ ಕಾಮತರು ಹೆಮ್ಮಾಡಿ ಬಳಿಯ ಜಾಲಾಡಿಯಲ್ಲಿ (ರಾಷ್ಟ್ರೀಯ ಹೆದ್ದಾರಿಯ ಪಕ್ಕ) ಶ್ರೀ ಲಕ್ಷ್ಮೀನರಸಿಂಹ ದೇವಳದ ಜೀರ್ಣೋದ್ಧಾರಗೈದು ಸೇವೆಯನ್ನು ಒಪ್ಪಿಸಿದ್ದಾರೆ. ಈ ಪುಣ್ಯ ಪ್ರಸಂಗಗಳನ್ನು ನಾನು ಇಲ್ಲಿ ಸ್ಮರಿಸುವುದು ಯೋಗ್ಯವಾದುದು.

1939ನೇ ಇಸವಿಯಲ್ಲಿ ಶ್ರೀ ಗೋಕರ್ಣ ಮಠದ ಶ್ರೀಮತ್ ಇಂದಿರಾಕಾಂತ ತೀರ್ಥ ಶ್ರೀಪಾದರು, ಶಿಷ್ಯ ಯತಿವರ್ಯ ಶ್ರೀಮತ್ ಕಮಲಾನಾಥ ತೀರ್ಥ ಶ್ರೀಪಾದರು ಹಾಗೂ ಶ್ರೀ ಕಾಶೀಮಠದ ಸುಕೃತೀಂದ್ರ ತೀರ್ಥ ಶ್ರೀ ಪಾದರು ಹೀಗೆ ನಮ್ಮ ಸಮಾಜದ ಪ್ರಮುಖ ಎರಡು ಧರ್ಮಪೀಠಗಳ ಯತಿವರ್ಯರ ಸಮಾಗಮ ಬಸ್ರೂರು ಶ್ರೀ ಗೋಕರ್ಣ

ಮಠದ ಸಭಾಂಗಣದಲ್ಲಿ ವೈಭವದಲ್ಲಿ ಜರುಗಿತ್ತು. ಆ ಅಪರೂಪದ ಸಮಾರಂಭದ
ಯಶಸ್ಸಿಗೆ ದಕ್ಷಿಣ ಕನ್ನಡ ಜಿಲ್ಲೆ, ಗೋವಾ, ಉತ್ತರ ಕನ್ನಡ ಜಿಲ್ಲೆ ಇತ್ಯಾದಿ ಪರಿಸರದ
ಗಣ್ಯಾತಿಗಣ್ಯರ ಜೊತೆಗೆ ಶ್ರೀ ಎಚ್.ಎಲ್. ಕಾಮತರು ಕೈ ಜೋಡಿಸಿದ್ದರು ಎನ್ನುವುದು
ಊರಿನವರಾದ ನಮಗೆಲ್ಲರಿಗೂ ಹೆಮ್ಮೆಯ ಸಂಗತಿಯಾಗಿದೆ.

1950 ದಶಕದಲ್ಲಿ ಪೂಜ್ಯ ಶ್ರೀಮತ್ ಸುಧೀಂದ್ರ ತೀರ್ಥರು ಬಸ್ರೂರು ಸ
ಮಠದಲ್ಲಿ ಮೊಕ್ಕಾಂಗೈದ ಸಂದರ್ಭಗಳಲ್ಲಿ ಕೊಗ್ಗ ಮಾಮನವರು ತಪ್ಪದೆ
ಗಂಗೊಳ್ಳಿಯಿಂದ ಬಸ್ರೂರಿಗೆ ಬಂದು ಮಂಡಿಕೇರಿಯ ತಮ್ಮ ಹಿರಿಯರ ಮನೆಯಲ್ಲಿ
ಉಳಿದುಕೊಂಡು ಶ್ರೀ ಹರಿ ಗುರು ಸೇವೆ ಗೈಯುತ್ತಿದ್ದರು. ಸ್ವಾಮೀಜಿಯವರ ವಿರಾಮದ
ಅವಧಿಯಲ್ಲಿ ಶ್ರೀಗಳ ಚರಣ ಸನ್ನಿಧಿಯಲ್ಲಿ ಕುಳಿತುಕೊಂಡು ಶ್ರೀ ಸಂಸ್ಥಾನದ ಹಾಗೂ
ಸಮಾಜದ ಕುರಿತಾಗಿ ತಾವು ನೋಡಿದ ಕೇಳಿದ ಸಂಗ್ರಹಿಸಿದ ವಿಷಯಗಳನ್ನು ಶ್ರೀ
ಕಾಮತರು ಗುರು ಸನ್ನಿಧಾನದಲ್ಲಿ ಚೆನ್ನಾಗಿ ಮಂಡಿಸುತ್ತಿದ್ದರು. ವಂದನೀಯ ಗುರುವರ್ಯರು
ಸಾವಕಾಶವಾಗಿ ಕಾಮತರ ಮಾತುಗಳನ್ನು ಆಲಿಸಿ, ತಮ್ಮ ಆಕರ್ಷಕ ಧಾಟಿಯಲ್ಲಿ
ತಕ್ಕುದಾದ ಉತ್ತರ ನೀಡುತ್ತಿದ್ದರು. ಆ ಸುಂದರ ಸಂಭಾಷಣೆಯ ದೃಶ್ಯ ಇಂದಿಗೂ
ನನ್ನ ಕಣ್ಮುಂದೆ ಸುಳಿದಂತಿದೆ. ಸ್ವಾಮೀಜಿಯವರು ಸಹ ಊರು – ಪರ ಊರುಗಳ
ತಮ್ಮ ಪ್ರಮುಖ ಪ್ರವಚನಗಳಲ್ಲಿ "ಆಮಕಾ ಕೊಕ್ಕಾಮತಿನ ಸಾಂಗಿಲೆ" ಎಂದು ಶ್ರೀ
ಕಾಮತರು ನೀಡಿದ ಉಲ್ಲೇಖ ಪ್ರಸ್ತಾಪಿಸಿರುವುದನ್ನು ಕೇಳಿದ್ದೇವೆ. ಹೀಗೆ ಶ್ರೀ ಕೊಗ್ಗ
ಕಾಮತರು ಶ್ರೀ ಸಂಸ್ಥಾನ ಹಾಗೂ ನಮ್ಮ ಸಮಾಜದ ಹತ್ತೊಂಭತ್ತನೆಯ ಹಾಗೂ
ಇಪ್ಪತ್ತನೆಯ ಶತಮಾನದ ಮಾಹಿತಿಯ ಕೊಂಡಿಯಾಗಿದ್ದರು. ಇದು ಸಮಾಜ
ಬಾಂಧವರಿಗೆ ಅಭಿಮಾನದ ವಿಚಾರವಾಗಿತ್ತು ಎನ್ನಬಹುದು.

ಪರಮಾಚಾರ್ಯ ಶ್ರೀಮತ್ ಸುಧೀಂದ್ರ ತೀರ್ಥರ ಸನ್ನಿಧಿಯಲ್ಲಿ ಹೆಚ್ಚು ಕಾಲ
ಮಾರ್ಗದರ್ಶನ ಪಡೆದ ಭಾಗ್ಯ ತಮ್ಮದು ಎಂಬ ವಿಶೇಷ ಸಂತೃಪ್ತಿ ಶ್ರೀ ಎಚ್. ಎಲ್
ಕಾಮತರಿಗೆ ಇತ್ತು. ಶ್ರೀ ಭುವನೇಂದ್ರ ಬಾಲಕಾಶ್ರಮ ಸ್ಥಾಪನೆಯ ಪೂರ್ವಭಾವಿಯಾಗಿ
ಶ್ರೀಗಳವರು ಕರೆದ ಸಭೆಗಳಲ್ಲಿ ಶ್ರೀ ಕಾಮತರು ಒಳ್ಳೆಯ ಸಲಹೆಗಳನ್ನು ಸನ್ನಿಧಾನದಲ್ಲಿ
ಮಂಡಿಸಿದಿದೆ. ಸಂದರ್ಭಕ್ಕೆ ತಕ್ಕುದಾಗಿ ಬಸ್ರೂರು ನಗರದ ಪ್ರಾಚೀನತೆ, ಹಿರಿಯ
ಮಹಾನ್ ಯತಿಗಳು, ಗತಕಾಲದ ಇತಿಹಾಸ ಇತ್ಯಾದಿ ತಾವು ಸಂಗ್ರಹಿಸಿ ಮನನ
ಮಾಡಿದ ಮಹತವದ್ ವಿಚಾರಗಳನ್ನು ಹಿರಿಯ ಕಾಮತರು ಪೂಜನೀಯ ಸನ್ನಿಧಿಯಲ್ಲಿ
ಚೆನ್ನಾಗಿ ಮಂಡಿಸುವುದರ ಮೂಲಕ ಸಮಾಲೋಚನೆ ನಡೆಸಿದ್ದಾರೆ. ಇದು ಅವರ
ಪರಿಪಕ್ವತೆಗೆ ಉತ್ತಮ ನಿದರ್ಶನವೆನ್ನಬಹುದು.

ಮಾನನೀಯ ಗುರುವರ್ಯ ಶ್ರೀಮತ್ ಸುಧೀಂದ್ರ ತೀರ್ಥರು ಶ್ರೀ ಎಚ್.ಎಲ್. ಕಾಮತರನ್ನು ಸಮಾಜ ಬಾಂಧವರ ಸಭೆಯಲ್ಲಿ ಶ್ರೀ ಸಂಸ್ಥಾನದ ವತಿಯಿಂದ ಬಸ್ರೂರು ಶ್ರೀ ಶಾಖಾ ಮಠದಲ್ಲಿ ಗೌರವಿಸಿ ಹರಸಿದುದು, ನಿಜಕ್ಕೂ ಎಲ್ಲರೂ ಅಭಿಮಾನ ಪಡುವ ಪ್ರಸಂಗವಾಗಿರುತ್ತದೆ. ದಾನ ಮಾಡಿದಷ್ಟೆ ಪುಣ್ಯ ದಾನ ಮಾಡಿಸಿದವರಿಗೂ ಇದೆ. ಹಿರಿಯರ ಈ ಮಾತಿನಂತೆ ಶ್ರೀ ಹಟ್ಟಿಯಂಗಡಿ ಕಾಮತರಿಗೆ ಎರಡೂ ಪುಣ್ಯ ಸಿಕ್ಕಿದೆ. ಬಸ್ರೂರು ರಾವುತ ಕೇರಿಯ ಶ್ರೀ ಶಾಂತೇರಿ ಕಾಮಾಕ್ಷಿ ದೇವಸ್ಥಾನವು ಜೀರ್ಣವಾದಾಗ ಶ್ರೀಯುತ ಕಾಮತರು ಶ್ರೀಮಂತ ಉದ್ಯಮಿ ಕುಳಾಪಿ ಮಂಗಳೂರಿನ ಬಸ್ತಿಕಾರ್ ಕುಟುಂಬದವರಿಗೆ ತಕ್ಕ ಪ್ರೇರಣೆ ನೀಡಿದರು. ಪ್ರಭಾವಿತರಾದ ಬಸ್ತಿಕಾರ್ ಶೆಣ್ಯೆಯವರು ತಮ್ಮ ಕುಟುಂಬದ ವತಿಯಿಂದ 1929ನೇ ಇಸವಿಯಲ್ಲಿ ಸುತ್ತೂ ಪೌಳಿಗಳಿಂದೊಡಗೂಡಿದ ಸುಭದ್ರ ದೇವ ಮಂದಿರ ರಚಿಸಿದರು.

ಬಸ್ರೂರಿನ ಶ್ರೀ ಮಹಾಲಸಾ ನಾರಾಯಣೀ ದೇವಾಲಯ 1999ನೇ ಇಸವಿಯಲ್ಲಿ ದಿವ್ಯ ಭವ್ಯವಾಗಿ, ಮೂಡಿ ಬಂದ ವಿಷಯ ಒಂದು ಒಳ್ಳೆಯ ದಾಖಲೆ. ಇದಕ್ಕೆ ಮೊದಲೇ 1964ನೇ ಇಸವಿಯಲ್ಲಿ ಅಂದಿನ ಜೀರ್ಣೋದ್ಧಾರ ಸಮಿತಿಯವರು ನಿವೇದನೆ ಪತ್ರ ವಿತರಿಸಿದ್ದರು. ಆ ಪತ್ರದಲ್ಲಿ ಪೂಜ್ಯ ಶ್ರೀಮತ್ ಸುಧೀಂದ್ರ ತೀರ್ಥರ ಆಶೀರ್ವಾದದ ವಾಕ್ಯವಿದೆ. ಜೊತೆಗೆ ಶ್ರೀ ಎಚ್.ಎಲ್. ಕಾಮತರ ವಿಜ್ಞಾಪನೆಯೂ ಇದೆ. ಅಂದಿನ ಬೀಜರೂಪದ ಶ್ರೀಗಳ ಪ್ರಸಾದವೇ ಇಂದು ವೃಕ್ಷವಾಗಿ ಸತ್ಫಲ ನೀಡಿದೆಯೆಂಬುದರಲ್ಲಿ ತಥ್ಯ ಖಂಡಿತ ಇದೆ. ಹೀಗೆ ನಮ್ಮ ಕಾಮತರು ದೇವಾಲಯವಿರಲಿ, ವಿದ್ಯಾಲಯವಿರಲಿ ಲೋಕಹಿತದ ಕಾರ್ಯಗಳಿಗೆ ತಮ್ಮಿಂದಾದ ಕಾಣಿಕೆ ಒಪ್ಪಿಸಿದುದು ಸತ್ಯ. ಉಪಕಾರಿ ಮನೋಭಾವದ ಈ ಸಜ್ಜನರು ಸಂಘ ಸಂಸ್ಥೆಗಳಲ್ಲಿ ನೂರಾರು ಮಂದಿಗೆ ಉದ್ಯೋಗ ಕೊಡಿಸಿ ಉಪಕೃತರನ್ನಾಗಿ ಮಾಡಿದ್ದಾರೆ.

ಕಾಮತ್ ಕುಟುಂಬೀಯರು ಪ್ರಸಿದ್ಧ ಎಚ್.ಎಲ್. ಕಾಮತರ ಆದರ್ಶವನ್ನು ಇಂದೂ ಪಾಲಿಸುತ್ತಿದ್ದಾರೆ. ಬಸ್ರೂರು ರಾಮಚಂದ್ರ ದೇವಸ್ಥಾನದ ಪುನಃ ಪ್ರತಿಷ್ಠಾ ಸುವರ್ಣ ಮಹೋತ್ಸವವು ಹಿರಿಯ ಯತಿವರ್ಯ ಶ್ರೀಮತ್ ಸುಧೀಂದ್ರ ತೀರ್ಥ ಶ್ರೀ ಪಾದರ ದಿವ್ಯ ನೇತೃತ್ವ ಹಾಗೂ ಉಪಸ್ಥಿತಿಯಲ್ಲಿ ಮೂರು ದಿನಗಳ ಶಾಸ್ತ್ರೋಕ್ತ ಯಜ್ಞ, ಅಭಿಷೇಕ, ಗುರು ಸೇವೆ, ಹಾಗೂ ಶ್ರೀ ಸುಂದರ ಕಾಂಡ ಪ್ರವಚನದ ಮೂಲಕ ಅದ್ದೂರಿಯಾಗಿ ನಡೆದಿದೆ.

ದಿವಂಗತ ಶ್ರೀ ಎಚ್.ಎಲ್. ಕಾಮತರ ನಂತರ ಅವರ ಹಿರಿಯ ಮಗ ದಿ. ರಾಮಕೃಷ್ಣ ಕಾಮತರು ದೇವಳದ ಆಗು ಹೋಗುಗಳನ್ನು ನೋಡಿಕೊಳ್ಳುತ್ತಿದ್ದರು. ಪ್ರಚಲಿತ

ಶ್ರೀ ಕೊಗ್ಗ ಮಾಮನವರ ಮೊಮ್ಮಗ ಎಚ್. ರಂಗನಾಥ ಕಾಮತರು ಶ್ರೀ ಹರಿ ಗುರು ಸೇವೆ ನಡೆಯಿಸಿಕೊಂಡು ಬರುತ್ತಲಿದ್ದಾರೆ. ಹಿರಿಯರ ಸದ್ಭಾವದಂತೆ ಕಾಮತ್ ಕುಟುಂಬೀಯರು ಊರ ಪರ ಊರ ಶಾಲಾ ಕಾಲೇಜುಗಳ ಸ್ಥಾಪನೆ ಹಾಗೂ ಪುರೋಭಿವೃದ್ಧಿಯಲ್ಲಿ ಅಂದಿನಂತೆ ಇಂದು ಕೂಡಾ ಗಣನೀಯವಾಗಿ ಸೇವೆ ಸಲ್ಲಿಸುತ್ತಿರುವುದು ಔಚಿತ್ಯ ಪೂರ್ಣ ವಿಷಯವಾಗಿದೆ.

ಶ್ರೀ ಕೊಗ್ಗ ಮಾಮನವರು ಸುಮಾರು ಮೂರು ದಶಕಗಳಿಗಿಂತ ಹೆಚ್ಚು ಕಾಲ "ಕೆನರಾ ಬ್ಯಾಂಕ್ ನಿಯಮಿತ" – ಇದರ ಅವಿರತ ನಿರ್ದೇಶಕರಾಗಿ (1931–1966) ಸಮಾಜಕ್ಕೆ ತಮ್ಮ ಕಾಣಿಕೆ ಸಲ್ಲಿಸಿದ್ದಾರೆ. ಹಲವಾರು ಸುಶಿಕ್ಷಿತ ನಿರುದ್ಯೋಗಿ ಯುವಕರಿಗೆ ತಕ್ಕ ನೌಕರಿ ಕೊಡಿಸಿ, ಅದೆಷ್ಟೋ ಕುಟುಂಬಗಳಿಗೆ ಆಸರೆ ನೀಡಿದ್ದಾರೆ. ಅವರಿಂದ ಉಪಕೃತವಾದ ಮಂದಿಯಲ್ಲಿ ನಾನೂ ಒಬ್ಬ ಎಂದು ಕೃತಜ್ಞತಾಪೂರ್ವಕ ಈ ಹಿರಿಯ ಕಾಮತರನ್ನು ಸ್ಮರಿಸಿಕೊಳ್ಳುತ್ತೇನೆ.

ಕೊಗ್ಗ ಮಾಮನವರು ಶಾಲೆಯಲ್ಲಿ ಕಲಿತದ್ದು ಕಮ್ಮಿ ಇರಬಹುದು. ಇಂಗ್ಲೀಷ್ ಭಾಷೆಯ ಸ್ವಾಧ್ಯಾಯದಿಂದ ಬಹುಮುಖ ಜ್ಞಾನ ಸಂಪಾದಿಸಿದ್ದಾರೆ. ತಮ್ಮ ಅನುಭವವನ್ನು ಕೊನೆಯ ಗಳಿಗೆಯವರೆಗೂ ಆಬಾಲವೃದ್ಧರೊಂದಿಗೆ ಹಂಚಿಕೊಂಡಿದ್ದಾರೆ. ಆ ಕಾಲದಲ್ಲಿ ಕೆಲವೇ ಮಂದಿ ಬುದ್ಧಿ ಜೀವಿಗಳು ಮದ್ರಾಸಿನಿಂದ (ಚೆನ್ನೈಯಿಂದ) 'ಹಿಂದೂ' ಇಂಗ್ಲೀಷ್ ದೈನಿಕ ಪತ್ರಿಕೆಯನ್ನು ಟಪ್ಪಾಲಿನಲ್ಲಿ ತರಿಸಿಕೊಳ್ಳುತ್ತಿದ್ದರು. ಅಂತಹ ಆಸಕ್ತರಲ್ಲಿ ಕೊಗ್ಗ ಮಾಮನವರೂ ಒಬ್ಬರು ಎಂಬುದು ಗಣನೀಯವಾದುದು. ಹೀಗೆ ಕಾಮತರು ಒಂದು ತುಂಬಿದ ಕೊಡ ಎಂದರೆ ತಪ್ಪಾಗಲಾರದು. ಇಂತಹ ಪರಿಪಕ್ವ ವ್ಯಕ್ತಿತ್ವದ ಕಾಮತರು ಸಹನೆಯಿಂದ ಸತತ ಪ್ರಯತ್ನದಿಂದ ಶ್ರೀ ಸಂಸ್ಥಾನ ಕಾಶೀ ಮಠ ಹಾಗೂ ಬಸ್ರೂರಿನ ಕುರಿತು ಇತಿಹಾಸ ಬರೆದದ್ದು ನಿಜಕ್ಕೂ ಶ್ಲಾಘನೀಯ ಎನ್ನಲೇಬೇಕು.

ಹೀಗೆ ಖ್ಯಾತ ಉದ್ಯಮಿಯಾಗಿ, ಧರ್ಮ ಭೀರುವಾಗಿ, ಪಂಚಾಯಿತುದಾರರಾಗಿ, ವಿವಿಧ ಕ್ಷೇತ್ರಗಳಲ್ಲಿ ಸೇವೆಗೈದ ಬಹುಮುಖ ಪ್ರತಿಭೆಯ ಹಿರಿಯ ನೇತಾರ ಸನ್ಮಾನ್ಯ ಹಟ್ಟಿಯಂಗಡಿ ಲಕ್ಷ್ಮೀನಾರಾಯಣ ಕಾಮತರು ನಿಜಕ್ಕೂ ಸ್ವಯಂ ಭಾಗ್ಯ ಶಿಲ್ಪಿಗಳು. ಇಂತಹ ಭಾಗ್ಯಶಾಲಿಯವರ ಕಿರು ಪರಿಚಯ ನೀಡುವುದು ನನ್ನ ಪಾಲಿಗೆ ಬಂದ ಸುಯೋಗವೆಂದೇ ಭಾವಿಸುತ್ತೇನೆ. ಅವರ ಆದರ್ಶ ಬದುಕು ಹಾಗೂ ಬರಹ ಎಲ್ಲರಿಗೂ ಪ್ರೇರಣೆ ನೀಡಲಿ.

**– ಬಿ.ಎ. ಪ್ರಭು ಬಸ್ರೂರು**

# ಇತಿಹಾಸದ ರಶ್ಮಿಗಳು

# 01. ಶ್ರೀ ಕಾಶೀಮಠಸಂಸ್ಥಾನ ಮತ್ತು ಬಸರೂರು

ದಕ್ಷಿಣ ಕನ್ನಡ ಜಿಲ್ಲೆಯ ಕುಂದಾಪುರ ತಾಲೂಕಿಗೆ ಸೇರಿದ ಬಸರೂರು ಎಂಬ ಊರಲ್ಲಿರುವ ಶ್ರೀ ಕಾಶೀಮಠದ ಶಾಖಾಮಠದಲ್ಲಿ ಶ್ರೀ ಕಾಶೀ ಮಠ ಸಂಸ್ಥಾನದ ಈಗಿನ ಗುರುವರ್ಯರಾದ ಶ್ರೀಮದ್ ಸುಧೀಂದ್ರ ತೀರ್ಥ ಶ್ರೀಪಾದಂಗಳವರು ಸಮಾಜದ ಅಭಿವೃದ್ಧಿಗಾಗಿ ಇದೇ ಮೇ ತಿಂಗಳಲ್ಲಿ ಶ್ರೀಮದ್ ಭುವನೇಂದ್ರ ಬಾಲಕಾಶ್ರಮವೆಂಬ ಹೆಸರಿನಲ್ಲಿ ವಿದ್ಯಾರ್ಥಿ ಭವನವನ್ನು ಸ್ಥಾಪಿಸಲಿರುವುದರಿಂದ ಈ ಊರಿನ ಮತ್ತು ಇಲ್ಲಿಯ ಶಾಖಾ ಮಠದಲ್ಲಿ ಸಮಾಧಿಯಾಗಿರುವ ಶ್ರೀ ಕಾಶೀಮಠದ ಪೂರ್ವ ಪರಂಪರೆಯ ಶ್ರೀಮದ್ ಕೇಶವೇಂದ್ರ ತೀರ್ಥ ಶ್ರೀ ಪಾದಂಗಳವರ ಮತ್ತು ಶ್ರೀಮದ್ ಭುವನೇಂದ್ರ ತೀರ್ಥ ಶ್ರೀ ಪಾದಂಗಳವರ ಚರಿತ್ರೆಯ ಸಂಕ್ಷಿಪ್ತ ವಿವರಣೆ :-

ಈ ಪ್ರದೇಶವು ತುಳು ಯಾನೆ ಕನ್ನಡ ರಾಜ್ಯವೆಂತ ಕರೆಯಲ್ಪಡುತ್ತಿತ್ತು. ಈ ರಾಜ್ಯವನ್ನು ಕ್ರಿ.ಪೂ. 200ರಿಂದ ಕ್ರಿ.ಶ. 600ವರೆಗೂ ಕದಂಬರೂ, 578ರಿಂದ 757ರ ವರೆಗೆ ಚಾಲುಕ್ಯರೂ, 754ರಿಂದ 978ರ ವರೆಗೆ ರಾಷ್ಟ್ರಕೂಟರೂ, 1047ರಿಂದ 1336ರ ತನಕ ಹೊಸಳ ಬಲ್ಲಾಳರೂ, 1336ರಿಂದ 1565ರ ವರೆಗೆ ವಿಜಯನಗರದ ಅರಸರೂ, 1560ರಿಂದ 1763ರ ವರೆಗೆ ಇಕ್ಕೇರಿಯ (ಕೆಳದಿ ಅಥವಾ ಬಿದರೂರು) ಅರಸರೂ, 1763ರಿಂದ 1782ರ ವರೆಗೆ ಮೈಸೂರಿನ ಹೈದರಾಲಿಯೂ, 1782ರಿಂದ 1799ರ ವರೆಗೆ ಅವನ ಮಗ ಟಿಪ್ಪುಸುಲ್ತಾನನೂ, 1799ರಿಂದ 1947ರ ವರೆಗೆ ಇಂಗ್ಲಿಷರೂ ಅಧಿರಾಜರಾಗಿ ಆಳುತ್ತಿದ್ದರೆಂತ ಚರಿತ್ರೆಯಿಂದ ಕಂಡುಬರುತ್ತದೆ. ಹಾಗಾದಾಗ್ಯೂ ರಾಜ್ಯದಲ್ಲಿ ಇಕ್ಕೇರಿ ಅರಸರ ಕಾಲದ ಅಂತ್ಯದವರೆಗೂ ಸಣ್ಣ ಸಣ್ಣ ತುಂಡುಗಳನ್ನು ಒಳರಾಜರಾಗಿ ಅಧಿರಾಜರ ಅಧಿಕಾರಕ್ಕೆ ಒಳಪಟ್ಟು ಬೇರೆ ಬೇರೆ ತುಂಡರಸರು ಆಳುತ್ತಿದ್ದರು.

ಸುರಾಲ ತೊಳಹಾರ ಅರಸರು, ಸುರಾಲ, ಶಿರಿಯಾರ, ನಾಲ್ವತ ನಾಡು, ಕೆಳನಾಡು, ಶಂಕನಾರಾಯಣ, ಬಸರೂರು, ಹಳ್ಳಿಗೇರಿ, ಬೈಂದೂರು ಮುಂತಾದ ಸೀಮೆಗಳನ್ನು ವಿಜಯನಗರದ ಅರಸರಿಗೂ ಇಕ್ಕೇರಿ ಅರಸರಿಗೂ ಕಪ್ಪ ಕಾಣಿಕೆಗಳನ್ನು ಕೊಡುತ್ತಾ ಅವರ ಅಧಿಕಾರಕ್ಕೆ ಒಳಪಟ್ಟು ಆಳುತ್ತಿದ್ದರೆಂತಲೂ ಇಕ್ಕೇರಿ ಅರಸರ ಕಾಲದಲ್ಲಿ ಪೋರ್ಚುಗೀಸರು ಬಸ್ರೂರಿಗೆ ಆಗ್ಗಾಗ್ಗೆ ಬಂದು ಅವರಿಗೂ ಸುರಾಲ ತೊಳಹಾರರಿಗೂ ಯುದ್ಧಗಳು ನಡೆಯುತ್ತಿದ್ದವೆಂದು ಪೋರ್ಚುಗೀಸರ ಚರಿತ್ರೆಯಲ್ಲಿಯೂ ಕಾಣುತ್ತಿದೆ. ಬಸರೂರಲ್ಲಿ ಸುರಾಲ ಅರಸರು ಒಂದು ಕೋಟೆಯನ್ನು ಕಟ್ಟಿದರೆಂತಲೂ ಪೋರ್ಚುಗೀಸರು ಇನ್ನೊಂದು ಕೋಟೆಯನ್ನು ಕಟ್ಟಿದರೆಂತಲೂ ಚರಿತ್ರೆಯಿಂದ ಕಂಡುಬರುತ್ತದೆ. ಮಹಾರಾಷ್ಟ್ರದ

ಅರಸನಾದ ಶಿವಾಜಿಯು 1630-40ರ ಸಮಯ ಗೋವೆಯನ್ನು ಲೂಟಿ ಮಾಡಿದಾಗ್ಯೆ ಅನೇಕ ಕ್ರೈಸ್ತರು ಬಸ್ರೂರಿಗೆ ಓಡಿ ಹೋದರೆಂತ ತಿಳಿದು ಶಿವಾಜಿ ಮಹಾರಾಜನು ಅಲ್ಲಿಂದ ಬಸ್ರೂರಿಗೆ ಬಂದು ಲೂಟಿ ಮಾಡಿದನೆಂತಲೂ ಚರಿತ್ರೆಯಿಂದ ಕಂಡುಬರುತ್ತದೆ.

ಕ್ರಿ. ಶ. 1763ರಲ್ಲಿ ಕನ್ನಡ ಜಿಲ್ಲೆಯ ಸಹಿತ ಇಕ್ಕೇರಿಯ ರಾಜ್ಯವು ಹೈದರಾಲಿಯ ಸ್ವಾಧೀನ ಬಂದ ತರುವಾಯ ಹೈದರಾಲಿಯು ಕನ್ನಡ ಜಿಲ್ಲೆಗೆ ಬಂದು ತುಂಡರಸರು ಕೊಡಬೇಕಾದ ಕಪ್ಪಕಾಣಿಕೆಗಳ ಕುರಿತು ಹೊಸ ಕರಾರುಗಳನ್ನು ಮಾಡಿಕೊಂಡನು. ಈ ಸಮಯ ಹೈದರನು ಮಂಗ್ಲೂರಲ್ಲಿರುವಾಗ ಕಣ್ಣಾನೂರ ರಾಜನಾಗಿದ್ದ ಸುಲ್ತಾನ ಆಲಿರಾಜನು ಹೈದರನ ಭೇಟಿ ಮಾಡಿ ಇಬ್ಬರಲ್ಲಿಯೂ ಸ್ನೇಹ ಬೆಳೆದು ಸುಲ್ತಾನ ಆಲಿರಾಜನನ್ನು ಹೈದರ ಆಲಿಯು ತನ್ನ ನೌಕಾದಳದ ಸೈನ್ಯಾಧಿಪನಾಗಿ ನೇಮಿಸಿದನು.

ಈ ಆಲಿರಾಜನು ಕೆಲ ಸಮಯ ಬಸರೂರಲ್ಲಿದ್ದಾಗ್ಯೆ ಆಲಿರಾಜ ಮಹಜೀದಿಯೆಂಬ ಹೆಸರಿನ ಒಂದು ಮಹಜೀದಿಯನ್ನು ಕಟ್ಟಿಸಿದ್ದನು. ಈ ಮಹಜೀದಿಗೆ 1940ರ ತನಕ ಇಂಗ್ಲಿಷ್ ಸರಕಾರದಿಂದ ತಸ್ತೀಕು ಸಲುವಿತ್ತು. ಆ ನಂತರ ಕಟ್ಟಡ ಬಿದ್ದುಹೋದುದ ದರಿಂದ ತಸ್ತೀಕು ಕೊಡುವುದನ್ನು ನಿಲ್ಲಿಸಿದರು. 1768ರಲ್ಲಿ ಇಂಗ್ಲಿಷರಿಗೂ ಹೈದರಾಲಿಗೂ ಮಂಗಳೂರಲ್ಲಿ ದೊಡ್ಡ ಯುದ್ಧವಾಗಿ ಆ ವರ್ಷದ ಮೇ ತಿಂಗಳಲ್ಲಿ ಇಂಗ್ಲಿಷರು ಓಡಿಹೋದರು. ಹೈದರ ಮತ್ತು ಟಿಪ್ಪು ಸಿಟ್ಟಿನಿಂದ ಮಂಗಳೂರಲ್ಲಿ ಇಂಗ್ಲಿಷ್ ಸೇನಾಧಿಪತಿಯನ್ನು, 446 ಆಫೀಸರರನ್ನು, 680 ಇಂಗ್ಲಿಷ್ ಸೈನಿಕರನ್ನು ಮತ್ತು 6000ಕ್ಕಿಂತಲೂ ಹೆಚ್ಚಿಗೆ ಸಿಪಾಯಿಗಳನ್ನು ಸೆರೆಹಿಡಿದರು. ಈ ಯುದ್ಧದಲ್ಲಿ ಕೆಲವು ತುಂಡರಸರು ಮತ್ತು ಪೋರ್ಚುಗೀಸರು ಇಂಗ್ಲಿಷರಿಗೆ ಸಹಾಯ ಮಾಡಿದ್ದರೆಂಬ ಕಾರಣದಿಂದ ಹೈದರಾಲಿಯು ಅವರನ್ನು ಹಿಡಿತರಿಸಿ ಸೆರೆಮನೆಯಲ್ಲಿ ಹಾಕಿದ್ದಲ್ಲದೇ ಮಂಗ್ಲೂರಲ್ಲಿದ್ದ ಪೋರ್ಚುಗೀಸರ ಕೋಟೆಯನ್ನು ಮತ್ತು ಇಗರ್ಜಿಯನ್ನು ನಾಶಮಾಡಿದನು.

1775ರಲ್ಲಿ ಕೊಡಗಿನಲ್ಲಿ ಹೈದರನು ದೇವಪ್ಪರಸನನ್ನು ಕೊಂದು ಆ ಸ್ಥಾನಕ್ಕೆ ಲಿಂಗರಾಜನಿಗೆ ಪಟ್ಟ ಮಾಡಿಸಿದಲ್ಲದೆ ದೇವಪ್ಪರಸನ ಅಪ್ರಾಯಸ್ಥ ಮಗನನ್ನು ತನ್ನ ಜೊತೆಯಲ್ಲಿ ಶ್ರೀರಂಗಪಟ್ಟಣಕ್ಕೆ ತಂದು ಅಲ್ಲಿಟ್ಟಿರುವಾಗ ತನ್ನ ಮಗ ಟಿಪ್ಪುವಿಗೂ ಕೊಡಗಿನ ರಾಜನ ಮಗನಿಗೂ ಕೂಡಿಬಾರದೇ ಇದ್ದುದರಿಂದ ಆ ಕೊಡಗಿನ ರಾಜನ ಮಗನ ಬಗ್ಗೆ ಈಗ ಕುಂದಾಪುರದ ಡಿವಿಜನಲ್ ಆಫೀಸು ಮತ್ತು ಬಂಗ್ಲೆಯಿರುವಲ್ಲಿ ಒಂದು ಕೋಟೆಯನ್ನು ನಿರ್ಮಿಸಿ ಕೊಡಗಿನ ರಾಜನ ಮಗನಿಗೆ ಬೇಕಾದಷ್ಟು ದ್ರವ್ಯ ಸಹಾಯವನ್ನು ಕೊಟ್ಟು ಆ ಕೋಟೆಯಲ್ಲಿ ಇಟ್ಟಿದ್ದನು. ಮತ್ತು ತಾನು ಕಾಲವಾದ ವರ್ತಮಾನ ಸಿಕ್ಕಿದ

ಕೂಡಲೇ ಆ ಕೋಟೆಯನ್ನು ಬಿಟ್ಟು ಸಮುದ್ರ ಮಾರ್ಗವಾಗಿ ದೂರಪ್ರಾಂತ್ಯಕ್ಕೆ ಹೋಗಬೇಕಾಗಿ ಆತಗೆ ತಿಳಿಸಿರುತ್ತಿದ್ದ ಪ್ರಕಾರ ಆತನು ಹೈವರನ ಮರಣದ ಸುದ್ದಿ ತಿಳಿದ ಕೂಡಲೇ ಬಿಟ್ಟು ಹೋದನೆಂತಲೂ 1890ರ ನಂತರ ಇಂಗ್ಲಿಷರು ಆ ಬಂಗ್ಲೆಯನ್ನು ಹೊಸತು ಪಡಿಸುವಾಗ್ಗೆ ನೆಲಗಟ್ಟಿನಲ್ಲಿ ಕುದುರೆಗೆ ಹಾಕುವ ಬೆಳ್ಳಿಯ ಚಿತ್ರಕೆಲಸ ಮಾಡಿದ ಜೀನು ಮತ್ತು ಬೆಳ್ಳಿಯ ಕಾಲುದೀಪಗಳು ಸಿಕ್ಕಿದವು. ಅವುಗಳನ್ನು ಮದ್ರಾಸ್ ಮ್ಯೂಸಿಯಂ ನಲ್ಲಿ ಇಟ್ಟರೆಂತ ವಾರ್ತೆಯಿತ್ತು.

1783ರಲ್ಲಿ ಇಂಗ್ಲಿಷರಿಗೂ ಟಿಪ್ಪುಸುಲ್ತಾನನಿಗೂ ಉಂಟಾದ ಯುದ್ಧದಲ್ಲಿ ಉಭಯಕರಿಗೂ ಕಷ್ಟ ನಷ್ಟ ಉಂಟಾಗಿ 1784ನೇ ಮಾರ್ಚ್ 11ರಲ್ಲಿ ಒಪ್ಪಂದವಾಯಿತು. ಒಪ್ಪಂದವಾಗುವ ಮುಂಚೆ ನಡೆದ ಯುದ್ಧದಲ್ಲಿ ಕನ್ನಡ ಜಿಲ್ಲೆಯ ಜೈನ ತುಂಡರಸರು ಇಂಗ್ಲಿಷರಿಗೆ ಸಹಾಯ ಮಾಡಿದರೆಂಬ ಕಾರಣದಿಂದ ಟಿಪ್ಪುಸುಲ್ತಾನನು ಆ ಅರಸರ ಆಳ್ವಿಕೆಯಲ್ಲಿದ್ದ ರಾಜ್ಯವನ್ನು ತನ್ನ ಸ್ವಾಧೀನಕ್ಕೆ ಪಡಕೊಳ್ಳುವಾಗ್ಗೆ ಸುರಾಲ ಅರಸರ ಆಳ್ವಿಕೆಗೆ ಸೇರಿದ ಬಸರೂರು ಟಿಪ್ಪುಸುಲ್ತಾನನ ಆಳ್ವಿಕೆಗೆ ಒಳಪಟ್ಟಿತು.

ಅನಂತರ 1799ರಲ್ಲಿ ಶ್ರೀರಂಗಪಟ್ಟಣದಲ್ಲಿ ಇಂಗ್ಲಿಷ್, ಮರಾಠಾ ಪೇಶ್ವೆ ಹೈದರಬಾದ್ ನಿಜಾಮ ಕೂಡಿ ಟಿಪ್ಪುಸುಲ್ತಾನನ ಮೇಲೆ ಮಾಡಿದ ಯುದ್ಧದಲ್ಲಿ ಟಿಪ್ಪು ಮಡಿದು ಆತನ ರಾಜ್ಯವನ್ನು ಗೆದ್ದವರು ವಿಭಾಗಿಸಿಕೊಂಡಾಗ ಕನ್ನಡ ಜಿಲ್ಲೆಯು ಇಂಗ್ಲಿಷರ ಪಾಲಿಗೆ ಬಂತು. ಆಗ ಕನ್ನಡ ಜಿಲ್ಲೆಯು ಬಹಳ ವಿಸ್ತಾರವಾಗಿತ್ತು. ಅದನ್ನು 1866ರಲ್ಲಿ ಇಂಗ್ಲಿಷರು ವಿಂಗಡಿಸಿ ದಕ್ಷಿಣ ಕನ್ನಡ ಮತ್ತು ಉತ್ತರ ಕನ್ನಡವೆಂಬ ಹೆಸರಿನಿಂದ 2 ಜಿಲ್ಲೆಗಳನ್ನಾಗಿ ಮಾಡಿ ಉತ್ತರ ಕನ್ನಡ ಜಿಲ್ಲೆಯನ್ನು 1862ರಲ್ಲಿ ಮುಂಬೈ ಪ್ರಾಂತ್ಯಕ್ಕೆ ಸೇರಿಸಿ – ದಕ್ಷಿಣ ಕನ್ನಡವನ್ನು ಮದ್ರಾಸು ಪ್ರಾಂತ್ಯಕ್ಕೆ ಇಟ್ಟರು. ಕ್ರಿ. ಶ. 1800ರ ಲಾಗೈತು ಕನ್ನಡ ಜಿಲ್ಲೆಯು ಒಟ್ಟಿನಿಂದ ಮದ್ರಾಸ್ ಪ್ರಾಂತ್ಯದಲ್ಲಿ ಇದ್ದಾಗ Captain Thomas Manro ಎಂಬವರು ಪ್ರಪ್ರಥಮದ Principal Collector of Canara ಎಂಬ ಉದ್ಯೋಗಸ್ಥರಾಗಿದ್ದರು.

ಕನ್ನಡ ಜಿಲ್ಲೆಯ ಹಿಂದಿನ ಚರಿತ್ರೆಯಲ್ಲಿ ಜೈನರು ಈ ಜಿಲ್ಲೆಗೆ ಬಂದು ನೆಲೆನಿಂತು ರಾಜ್ಯಸ್ಥಾಪನೆ ಮಾಡಿದ್ದು ಕ್ರಿ.ಶ. ಒಂದನೇ ಶತಮಾನದಲ್ಲಿ. ಅನಂತರ ಅವರು ಯಾವುದೋ ಒಂದು ಕಾಲದಲ್ಲಿ ಪ್ರಜೆಗಳ ಮತ್ತು ತಮ್ಮ ಅನುಕೂಲತೆಗಾಗಿಯೂ, ಆರೋಗ್ಯಕ್ಕಾಗಿಯೂ, ಪುರೋಭಿವೃದ್ಧಿಗಾಗಿಯೂ ಈಗಿರುವ ಮುನಿಸಿಪಾಲಿಟಿಗಳಂತೆ ಕೆಲವು ನಗರಸಂಸ್ಥೆಗಳ ಕ್ರಮಗಳನ್ನು ಮಾಡಿಕೊಂಡಿದ್ದರು.

ಸರ್ವಸಾಧಾರಣವಾಗಿ ಆ ಕ್ರಮಗಳ ಪ್ರಕಾರ ಯಾವದೊಂದು ಊರಿನಲ್ಲಿ

ಕೇರಿಗಳಿಲ್ಲದೇ ಬರೆ ಪೇಟೆ ಮಾತ್ರವೇ ಇದ್ದರೆ ಆ ಊರಿಗೆ "ಪೇಟೆ" ಎಂತಲೂ ಕೇರಿಗಳಿದ್ದರೆ ಪಟ್ಟಣವೆಂದೂ ಪಟ್ಟಣದ ಸುತ್ತಲೂ ಗುಡಿ ಮಧ್ಯ ಕೋಟೆ – ಗಡಿ ಗಡಿಗಳಲ್ಲಿ ಗುಡಿಗಳಿದ್ದರೆ 'ಪುರ'ವೆಂದೂ ಲಕ್ಷಗುಡಿಕಟ್ಟಿದ್ದರೆ "ನಗರ"ವೆಂದೂ ನಾಲ್ಕು ಲಕ್ಷ ಗುಡಿಗಳಿಗಿಂತ ಹೆಚ್ಚಿಗೆ ಇರುವಲ್ಲಿ "ಜಯಂತಿ" ಎಂದು ಕರೆಯಲ್ಪಡುವ ವಾಡಿಕೆ ಇತ್ತು. ಈ ಕ್ರಮಗಳ ಪ್ರಕಾರ ಬಸರೂರು ಎಂಬುದು 'ಪುರ' ಆಗಿತ್ತು.

ಈ ಊರುಗಳ ಅಧಿಕಾರಿಗಳಿಗೆ 'ಹಲ್ಲರು' ಎಂಬ ಹೆಸರಿತ್ತು. ಈ ಹಲ್ಲರಲ್ಲಿ ಚತುರ್ವರ್ಣದವರು ಅಂದರೆ ಬ್ರಾಹ್ಮಣ, ಕ್ಷತ್ರಿಯ, ವೈಶ್ಯ, ಶೂದ್ರರು ಇರುತ್ತಿದ್ದರು. ಹಾಗೆ ಇರುವಲ್ಲಿ ಚತುಃಸ್ಥಾನದವರೆಂತಲೂ ಹೆಸರಿತ್ತು. ಈ ಹಲ್ಲರು ಬಸ್ರೂರಲ್ಲಿದ್ದರು. ಈ ಊರಿನಲ್ಲಿ ಶ್ರೀ ಮಹಾಲಿಂಗೇಶ್ವರ ಎಂಬ ಮಹತೋಭಾರ ದೇವಸ್ಥಾನ ಬಹಳ ಪುರಾತನ ಕಾಲದಿಂದಲೂ ಉಂಟು. ಆ ದೇವರಿಗೆ ಮತ್ತು ಅಲ್ಲೇ ಇದ್ದ ಅನ್ನ ಸತ್ರಕ್ಕೆ ವಿಜಯನಗರದ ಅರಸರು ಮತ್ತು ಕೆಳದಿ ಇಕ್ಕೇರಿ ಅರಸರು ಉಂಬಳಿ ಬಿಟ್ಟ ಗ್ರಾಮಗಳಿದ್ದವು. ಆ ಗ್ರಾಮಗಳು 1. ಹಟ್ಟಿಕುದ್ರು 2. ಹೆರಿಕುದ್ರು 3. ಬೇಲ್ತೂರು 4. ಕ್ಸಬಾಜಪ್ತಿ, ಹೀಗೆ 4 ಗ್ರಾಮಗಳ ರೈತರು ಭೂಕಂದಾಯವನ್ನು ಮೇಲೆ ಹೇಳಿದ ಮಹಾಲಿಂಗೇಶ್ವರ ದೇವಸ್ಥಾನಕ್ಕೆ ಕೊಡಬೇಕಾಗಿತ್ತು. ಹೀಗೆಯೇ ಬೇರೆ ಬೇರೆ ಗ್ರಾಮಗಳ ರೈತರು ಬೇರೆ ಬೇರೆ ದೇವಸ್ಥಾನಗಳಿಗೆ ಕಂದಾಯವನ್ನು ಕೊಡಬೇಕಾಗಿತ್ತು.

ದೊಡ್ಡ ದೇವಸ್ಥಾನಗಳಲ್ಲಿ ರೈತರಿಂದ ಕಂದಾಯ ವಸೂಲು ಮಾಡುವರೇ ಮಣೆಗಾರರೆಂಬ ಉದ್ಯೋಗಸ್ಥರು, ಅವರ ಕೆಳಗಿನ ಶ್ಯಾನಭಾಗರು–ಉಗ್ರಾಣಿಗಳು ಇರುತ್ತಿದ್ದರು. ಹೀಗಿದ್ದಾಗ್ಯೂ ರೈತರು ತೀರ್ವೆ ಕೊಡದೇ ದೇವಸ್ಥಾನಗಳ ವಿನಿಯೋಗಗಳು ನಡೆಯದೇ ಕಷ್ಟ ಉಂಟಾಗಿ ಇಂಗ್ಲಿಷ್ ಸರಕಾರಕ್ಕೆ ದೂರುಗಳು ಬಂದು ಸರಕಾರದವರು ಕಾನೂನನ್ನು ಉಂಟು ಮಾಡಿ ತೀರ್ವೆ ವಸುಲ್ಮಾಡುವ ಹಕ್ಕನ್ನು ಸರಕಾರಕ್ಕೆ ಬಿಟ್ಟುಕೊಟ್ಟರೆ ಆಯಾದೇವಸ್ಥಾನಗಳಿಗೆ ಸಿಕ್ಕಬೇಕಾದ ತೀರ್ವೆಯಲ್ಲಿ ಶೇಖಡಾ 10% ರಂತೆ ವಸೂಲಿ ಖರ್ಚಿಗಾಗಿ ಇಟ್ಟುಕೊಂಡು ಉಳಿದ 90%ನ್ನು ತಸ್ತಿಕುರೂಪವಾಗಿ ದೇವಸ್ಥಾನಗಳಿಗೆ ಕೊಡಲಾಗುವುದೆಂದು ಪ್ರಸಿದ್ಧಿಪಡಿಸಿದ ಕೂಡಲೇ ಎಲ್ಲಾ ದೇವಸ್ಥಾನಗಳ ಆಡಳ್ತೆದಾರರು ಮೊಕ್ತೇಸರರು ತೀರ್ವವಸೂಲಿ ಹಕ್ಕನ್ನು ಸರಕಾರಕ್ಕೆ ಬಿಟ್ಟು ಕೊಟ್ಟು 90% ತಸ್ದೀಕನ್ನು ಪಡಕೊಳ್ಳಲಿಕ್ಕೆ ಒಪ್ಪಿಕೊಂಡದ್ದರಿಂದ ಆ ಲೆಖ್ಖದಂತೆ ಈ ಬಸ್ರೂರ ಮಹತೋಭಾರ ಮಹಾಲಿಂಗೇಶ್ವರ ದೇವಸ್ಥಾನಕ್ಕೆ ವರ್ಷಂಪ್ರತಿಯಲ್ಲೂ ಕೊಡಬೇಕಾದ ತಸ್ತಿಕು ರೂ. 2272.25 ಪ್ರಧಾನ ದೇವರಾದ ಪಡುಕೇರಿ ತಿರುಮಲದೇವರಿಗೆ ರೂಪಾಯಿ 265.95

ಇನ್ನೊಂದು ಪ್ರಧಾನ ದೇವರಾದ ಮೂಡಕೇರಿ ಆದಿನಾಥೇಶ್ವರ ದೇವರಿಗೆ ರೂ. 153.75 ಮತ್ತು 18 ಚಿಲ್ಲರೆ ದೇವಸ್ಥಾನಗಳಿಗೆ ಒಟ್ಟಿಗೆ ರೂ. 255/– ಈ ಪ್ರಕಾರ ನೇಮಕವಾಗಿತ್ತು. ಈ ವಿನಹಾ ಮುಸಲ್ಮಾನರ 2 ಮಹಜೀದಿಗಳಿಗೆ ಪ್ರತ್ಯೇಕ ತಸ್ತಿಕು ಉಂಟು.

ಈ ಬಸರೂರಿಗೆ ಕ್ರಿ. ಶ. 1077ನೇ ವರ್ಷದ ಕವಿಯಾಳುಪೇಂದ್ರ ದೇವನ ಶಾಸನದಲ್ಲಿ "ಬಸರೇಪರ"ವೆಂದು ಕರೆದಿದ್ದಾರಂತೆ. ಈ ಶಾಸನದಲ್ಲಿ "ಹೊಸಪಟ್ಟಣ ಬಸರೇಪುರದ ಎಂದಿರುವುದರಿಂದ ಈ ಪಟ್ಟಣವು ಬಹಳ ಪುರಾತನದ್ದೆಂದುಹೇಳುವುದು ಕಷ್ಟ" ಎಂಬದಾಗಿ ಉಡುಪಿ ಎಂ.ಜಿ. ಎಂ. ಕೊಲೇಜಿನಲ್ಲಿ ಪ್ರಾಧ್ಯಾಪಕರಾಗಿದ್ದ ಶ್ರೀ ಗುರುರಾಜಭಟ್ ಎಂ. ಎ. ಬಿ. ಟಿ. ಇವರು ಬರೆದು 1963ರಲ್ಲಿ ಪ್ರಕಟವಾದ 'ತುಳುನಾಡು' ಎಂಬ ಪುಸ್ತಕದಲ್ಲಿದೆ. ಅದಿರಲ್ಲಿ, ಈ ಬಸರೂರು ಸುಮಾರು 500 ವರ್ಷಗಳ ಹಿಂದೆ ದೊಡ್ಡ ವ್ಯಾಪಾರದ ಕೇಂದ್ರವಾದ ಬಂದರು ಆಗಿತ್ತು. ದೊಡ್ಡ ಹಡಗುಗಳು ಬರುತ್ತಿದ್ದವು. ಹೊಳೆಬದಿಯಲ್ಲಿರುವ ಪೂರಾಹಿತ್ಲುಗಳಲ್ಲಿ ವ್ಯಾಪಾರದ ಭಂಡಸಾಲೆಗಳಿದ್ದವು. ಶ್ರೀಮಂತರಾದ ದೊಡ್ಡ ವ್ಯಾಪರಸ್ಥರಿದ್ದರು. ಇಲ್ಲಿಯ ವ್ಯಾಪಾರಕ್ಕಾಗಿಯೇ ಪೋರ್ಚುಗೀಸರಿಗೂ ಇಕ್ಕೇರಿ ಅರಸರಿಗೂ ಸುರಾಲಿ ತೊಳಹಾರರಿಗೂ ಆಗಾಗ್ಗೆ ವಿವಾದಗಳು ಒಪ್ಪಂದಗಳು ಆಗುತ್ತಾ ಇದ್ದವು. ಇಲ್ಲಿ ಸುಮಾರು 3000 ಮನೆಗಳಿದ್ದವು ಎಂದು ಹೇಳುವರೆ ಸಾಕಷ್ಟು ಆಧಾರಗಳಿವೆ. ಪ್ರತಿಯೊಂದು ಕೇರಿಯಲ್ಲಿರುವ ಮನೆ ಅಡಿ ಸ್ಥಳವು 10 ಯಾ 12 ಸೆಂಟ್ಸುಗಳಿಗಿಂತ ಹೆಚ್ಚಿಲ್ಲ. 4.5 ಮುಂಚಿನ ಮನೆ ಅಡಿಗಳು ಕೂಡಿ ಈಗಿನ ಒಂದೊಂದು ಮನೆಯಾಗಿದೆ. ಈ ಬಸರೂರಿಗೆ ಗೋವೆಯಿಂದ ಕೊಂಕಣಸ್ತ ಬ್ರಾಹ್ಮಣರು ಯಾವಾಗ ಬಂದರು? ಎಷ್ಟು ಜನ ಬಂದರು? ಯಾಕೆ ಬಂದರು? ಎಂಬ ಮುಂತಾದ ವಿಚಾರವಾಗಿ ಸ್ವಲ್ಪ ಬರೆಯಬೇಕಾಗಿದೆ.

ಗೋವೆ ಎಂಬ ರಾಜ್ಯವು ಇಲ್ಲಿಂದ ಸುಮಾರು 160 ಮೈಲು ಉತ್ತರಕ್ಕಿದೆ. ಆ ರಾಜ್ಯ ಮತ್ತು ಅದಕ್ಕಿಂತ ಉತ್ತರಕ್ಕೆ ಸುರತ್ ಸಮೀಪದ ದಾಮನಗಂಗಾ ಎಂಬ ನದಿಯವರೆಗೆ ಉತ್ತರಕ್ಕೂ ಕನ್ಯಾಕುಮಾರಿವರೇಗೆ ದಕ್ಷಿಣಕ್ಕೂ ಸಮುದ್ರ ಬದಿಯಲ್ಲಿರುವ ಅಗಲ ಕಿರಿದಾದ ಭೂಭಾಗವನ್ನು ವಿಷ್ಣುವಿನ ದಶಾವತಾರಗಳಲ್ಲಿ ಒಬ್ಬರಾದ ಪರಶುರಾಮ ದೇವರು ಸಮುದ್ರದಿಂದ ಬಿಡಿಸಿಕೊಂಡದ್ದರಿಂದ ಅದಕ್ಕೆ ಪರಶುರಾಮ ಸೃಷ್ಟಿ ಎಂಬ ಹೆಸರುಂಟಾಗಿದೆ. ಪರಶುರಾಮನು ಈ ಭಾಗಕ್ಕೆ ತನ್ನ ತಾಯಿ ರೇಣುಕಾದೇವಿಗೆ ತಾಯಿಮನೆಯ ಹೆಸರಾದ "ಕೊಂಕಣಾ" ಎಂಬ ಹೆಸರಿಟ್ಟು ಅದನ್ನು ಸಪ್ತಕೊಂಕಣವೆಂತ ವಿಭಾಗಿಸಿ 'ಗೋಮಾಂತಕ' ಎಂಬ ಭಾಗಕ್ಕೆ ಮಧ್ಯಕೊಂಕಣವೆಂತ ಹೆಸರಿಸಿದನಂತೆ.

ಈ ಮಧ್ಯ ಕೊಂಕಣದಲ್ಲಿ ಪರಶುರಾಮನು ಯಜ್ಞ ಮತ್ತು ಶ್ರಾದ್ಧ ಮುಂತಾದ ಕಾರ್ಯಗಳ ಬಗ್ಗೆ ತ್ರಿಹೋತ್ರ (ಬಿಹಾರ)ದಿಂದ 10 ಗೋತ್ರಗಳ ಸಾರಸ್ವತ ಬ್ರಾಹ್ಮಣರನ್ನು ಅವರವರ ಕುಲದೇವರ ಸಹಿತವಾಗಿ ತಂದು ಈ ಮಧ್ಯ ಕೊಂಕಣದಲ್ಲಿ ಅಗ್ರಹಾರಗಳನ್ನು ರಚಿಸಿ ಅಲ್ಲಲ್ಲಿ ಸ್ಥಾಪಿಸಿ ತನ್ನ ಯಜ್ಞ ಮುಂತಾಗಿ ಪೂರೈಸಿಕೊಂಡನೆಂದು ಸ್ಕಂದ ಪುರಾಣಾಂತರ್ಗತ ಸಹ್ಯಾದ್ರಿಖಂಡದಲ್ಲಿದೆ. ಪರಶುರಾಮನ ಯಜ್ಞದ ಬೂದಿಯ ಗುಡ್ಡೆಯು ಗೋವಾರಾಜ್ಯದ ಪೆಡಣೆ ಮಹಾಲಿನಲ್ಲಿದೆ.

ಈ ಸಹ್ಯಾದ್ರಿ ಖಂಡವನ್ನು ಬೊಂಬೈಯಲ್ಲಿದ್ದ J.Gerson Da'Cunha ಎಂಬವರು ಕ್ರಿ.ಶ.1877ರಲ್ಲಿ ಮುದ್ರಿಸಿ ಪ್ರಕಟಿಸಿದ್ದಾರೆ. ಹಾಗೂ ಬೊಂಬೈ ವೆಂಕಟೇಶ್ವರ ಸ್ಟೀಮ ಪ್ರೆಸ್ಸಿನಲ್ಲಿ ಶಕ 1846ರಲ್ಲಿ **"ಬ್ರಾಹ್ಮಣೋತ್ಪತ್ತಿಮಾರ್ತಾಂಡ"**ವೆಂಬ ಪುಸ್ತಕದಲ್ಲಿ ಸಹ್ಯಾದ್ರಿಖಂಡ (ಸ್ಕಂದಪುರಾಣ)ದಂತೆ ಶೆಣವಿ ಸಾರಸ್ವತ ಬ್ರಾಹ್ಮಣೋತ್ಪತ್ತಿ ಪ್ರಕರಣ 23ರಲ್ಲಿದೆ. ಮತ್ತು ಅದೇ ಪ್ರೆಸ್ಸಿನಲ್ಲಿ 1955ರಲ್ಲಿ ಪಂಡಿತ ಜ್ವಾಲಾಪ್ರಸಾದ ಮಿಶ್ರಾ ಮೊರದಾಬಾದ ಇವರು 1955ರಲ್ಲಿ ಸಂಪಾದಿಸಿದ 'ಜಾತಿಭಾಸ್ಕರ'ವೆಂಬ ಪುಸ್ತಕ ಪೇಜು 51ರಿಂದ 53ರವರೇಗೆ ಸಾರಸ್ವತ ಬ್ರಾಹ್ಮಣೋತ್ಪತ್ತಿ ವಿವರ ನಿಜವಾದ ಸಹ್ಯಾದ್ರಿ ಖಂಡಕ್ಕನುಸರಿಸಿಯೇ ಉಂಟು. ಹೀಗಿರುವಾಗ ಇವಕ್ಕೆ ವಿರೋಧವಾಗಿ ಕೆಲವು ಅಧ್ಯಾಯಗಳನ್ನು ಬದಲಾಯಿಸಿ ಹೊಸ ಅಧ್ಯಾಯುಗಳನ್ನು ತಯಾರಿಸಿ ಸೇರಿಸಿ ಹೊಸಬಾಳೆ ಅನಂತಶರ್ಮಾ ನಡೆಹಳ್ಳಿಯೆಂಬವರೊಂದು ಉತ್ತರ ಸಹ್ಯಾದ್ರಿಖಂಡವನ್ನು ಪ್ರಕಟಿಸಿ ಗೌಡಸಾರಸ್ವತರು ಬ್ರಾಹ್ಮಣರಲ್ಲಾ ಎಂತ ಕಾಣಿಸಿದ್ದಾರಂತೆ.

ಮೇಲೆ ಹೇಳಿದ 3 ಮುಸ್ತಕಗಳಲ್ಲದೆ ಇನ್ನು ಅನೇಕ ಖಂಡದ ಮುಸ್ತಕಗಳುಂಟು. ಯಾವದರಲ್ಲಿಯೂ ಹೊಸಬಾಳೆ ಅನಂತಶರ್ಮರ ಸಹ್ಯಾದ್ರಿಖಂಡಕ್ಕೆ ಅನುಕೂಲಕರವಾದ ಅಭಿಪ್ರಾಯವಿಲ್ಲ. "ತುಳುನಾಡು" ಗ್ರಂಥಕರ್ತರು ಕೂಡಾ ಅನಂತ ಶರ್ಮರ ಸಹ್ಯಾದ್ರಿ ಖಂಡದ ವಿವರಗಳನ್ನು ಉಲ್ಲೇಖಿಸಿದ್ದಾರೆ ಹೊರ್ತು ಅದನ್ನು ಸಮರ್ಥಿಸಲಿಲ್ಲ. ಆದುದರಿಂದ ಆ ವಿಷಯವಾಗಿ ಹೆಚ್ಚಿಗೆ ಬರೆಯುವ ಅಗತ್ಯ ತೋರುವುದಿಲ್ಲ. ಗೋಮಂತಕ್ಕೆ ಪರಶುರಾಮರು ತಂದದ್ದೆಂಬ 10 ಗೋತ್ರಗಳ ಬ್ರಾಹ್ಮಣರಲ್ಲದೇ ತರುವಾಯ ಇನ್ನು ಅನೇಕರು ಬಂದು ನೆಲಸಿದ್ದರು.

ಹೀಗೆ ಈ ಬ್ರಾಹ್ಮಣರು ಗೋವೆಯಲ್ಲಿ ಬಹಳ ಕಾಲವಿದ್ದು ಆ ಪೈಕಿ ಕೆಲವರು ವ್ಯಾಪಾರ ಉದ್ಯೋಗಕ್ಕಾಗಿ ಕನ್ನಡ ಜಿಲ್ಲಾ – ಬೊಂಬೈ – ಭಟ್ಕಳ ಕಂ ಬಸ್ರೂರು – ಕಾರ್ಕಳ – ಮಂಗಳೂರು – ಮಂಜೇಶ್ವರ ಮತ್ತು ಕೊಚ್ಚಿ ಕಲ್ಲಿಕೋಟೆ ಮುಂತಾದ

ಊರುಗಳಲ್ಲಿ ಅಲ್ಲಲ್ಲಿ ಕೆಲವರು 13ನೇ ಶತಮಾನದಿಂದ ಸೇರಿಕೊಂಡು ಇದ್ದರೆಂತಲೂ ಕಂಡುಬರುತ್ತದೆ. ಹೀಗಿರುವಾಗ 16ನೇ ಶತಮಾನದ ಆದಿಯಲ್ಲಿ ಅಂದ್ರ 1510ರಲ್ಲಿ ಗೋವೆಯ ತಿಸವಾಡಿ ಎಂಬ ಭಾಗವನ್ನು ಪೋರ್ಚುಗೀಸರು ಆಕ್ರಮಿಸಿ ಅಲ್ಲಿ ನೆಲಸಿದ ಸ್ವಲ್ಪ ಕಾಲದಲ್ಲಿಯೇ ಹಿಂದು ಮತವನ್ನು ನಾಶಮಾಡಿ ಕ್ರೈಸ್ತ ಮತವನ್ನು ಸ್ಥಾಪಿಸಲು ಆರಂಭಿಸಿ 1540ರಲ್ಲಿ ತಿಸವಾಡಿಯಲ್ಲಿದ್ದ 167 ಹಿಂದು ದೇವಾಲಯಗಳನ್ನು ನಾಶಪಡಿಸಿದ್ದಲ್ಲದೇ 1543ರಲ್ಲಿ ಅದರ ನೆರೆಯಲ್ಲಿರುವ ಸಾಸಷ್ಟಿ ಮತ್ತು ಬಾರ್ದೆಶ ಎಂಬ ತಾಲೂಕುಗಳನ್ನು ಬಿಜಾಪುರದ ಆದಿಲಶಾ ಸುಲ್ತಾನರು ಪೋರ್ಚುಗೀಸರಿಗೆ ಬಿಟ್ಟು ಕೊಟ್ಟದರಿಂದ ಅಲ್ಲಿರುವ ಸುಮಾರು 600 ದೇವಸ್ಥಾನಗಳನ್ನು ನಾಶಪಡಿಸಲಿಕ್ಕೂ ಅಲ್ಲಿರುವ ಹಿಂದುಗಳನ್ನು ಕ್ರೈಸ್ತಮತಕ್ಕೆ ಸೇರಿಸಿಕೊಳ್ಳಲಿಕ್ಕೂ ಪುರ್ತುಗಾಲ ಅರಸರು ಹುಕುಂ ಕಳುಹಿಸಿದರು. ಆ ಹುಕುಂ ಸಿಕ್ಕಿದ ನಂತರ ಎಲ್ಲಾ ಕಡೆಗಳಲ್ಲಿ ಖಾಸಗಿ ಮನೆಗಳಲ್ಲಿ ಸಹಾ ಮೂರ್ತಿ ಪೂಜೆ ನಡಿಸಿದವರನ್ನು ಶಿಕ್ಷಿಸಿದ್ದಲ್ಲದೇ ಹಿಂದೂ ಧರ್ಮದಂತೆ ನಡೆಯತಕ್ಕ ಉಪನಯನ, ವಿವಾಹ ಮುಂತಾದ ಕಾರ್ಯಗಳನ್ನು ನಿಲ್ಲಿಸಬೇಕಾಯಿತು.

1540ರಲ್ಲಿ ನಾಶಪಡಿಸಿದ ತಿಸವಾಡಿ(ತಿರ್ಸವಾಡಿ)ಯ 167 ದೇವಸ್ಥಾನಗಳ ಭೂಮಿಯ ಉತ್ಪತ್ತಿಯನ್ನು ಅಲ್ಲಲ್ಲಿ ಸ್ಥಾಪಿಸಿದ ಸಣ್ಣ ದೊಡ್ಡ ಇಗರ್ಜಿಗಳ ಖರ್ಚಿಗೂ ಹೊಸತಾಗಿ ಕ್ರೈಸ್ತರಾದವರಿಗೆ ಕ್ರೈಸ್ತಮತವನ್ನು ಉಪದೇಶಿಸಲು ಸ್ಥಾಪಿಸಿದ ಶಾಲೆ ಕಾಲೇಜುಗಳ ಖರ್ಚಿಗೂ ಹೊಸಕ್ರೈಸ್ತರಿಗೆ ಸಹಾಯಾರ್ಥವಾಗಿ ಭೂಮಿಯನ್ನು ಇನಾಂ ಕೊಡಲಿಕ್ಕು ಉಪಯೋಗಿಸಬಹುದೆಂತ ಆ ದೇವಸ್ಥಾನಗಳ ಅಧಿಕಾರಸ್ತರಿಂದ 1541ನೇ ಜೂನ್ 28ರಲ್ಲಿ ಬರೆಯಿಸಿಕೊಳ್ಳಲಾಯಿತು.

1542ರಲ್ಲಿ ಪೋರ್ಚುಗಲ್ಲಿನಿಂದ ಈ ಕಾರ್ಯಗಳ ಮೇಲಧಿಕಾರಿಯಾಗಿ ಸ್ಯೆಂಟ್ ಫ್ರಾಂಶಿಸ್ಕ ಸಾವಿಯರಯೆಂಬವರು ಗೋವೆಗೆ ಬಂದರು. ವಿಕಾರ ಜನರಲ್ ಮಿಂಗಲವಾಸ ಎಂಬವರು ಅವರ ಸಹಾಯಕರಾಗಿ ಅನೇಕರನ್ನು ಕ್ರೈಸ್ತಮತಕ್ಕೆ ಸೇರಿಸಿದರು. ಪೋರ್ಚುಗಾಲ ಅರಸರು ಜುವಾಂವ III ಎಂಬವರು ತಾ. 8-3-1547ರಲ್ಲಿ ಪುನಹಾ ಕಳುಹಿಸಿದ ಹುಕುಮನ್ನು ಆಧರಿಸಿ 1550ರಲ್ಲಿ ಗೋವೆಯ ಬಿಶೊಪರಾದ ಜುವಾಂವ ಅಲ್ಬುಕರ್ಕರು ಕ್ರೈಸ್ತಮತಕ್ಕೆ ಜನರನ್ನು ಸೇರಿಸಲಿಕ್ಕೆ ತನಗೆ ಎಲ್ಲಾ ಇಗರ್ಜಿಗಳ ಪಾದ್ರಿಗಳು ಗೋವೆಯ ವಾರ್ೈಸರಾಯರು, ಕೆಪ್ಟನರು ಸಹಾಯಮಾಡಬೇಕಾಗಿ ಬರಕೊಂಡ ಪ್ರಕಾರ ಅವರೀಗೆ ಸಹಾಯ ಕೊಡಲ್ಪಟ್ಟಿತು. ಆ ತರುವಾಯ ಅನೇಕರನ್ನು ಬಲತ್ಕರಿಸಿ ಮತಪರಿವರ್ತನೆ ಮಾಡಿಸಿದರು.

ಹಾಗೂ 1554ನೇ ವರ್ಷದ ಪ್ರಾರಂಭದಲ್ಲಿ 2 ತಿಂಗಳುಗಳೊಳಗೆ ಎಲ್ಲಾ

ಹಿಂದುಗಳು ಕ್ರೈಸ್ತರಾಗಬೇಕು. ಇಲ್ಲವಾದರೆ ಗೋವೆಯನ್ನು ಬಿಟ್ಟು ಹೋಗಬೇಕು. ಅದರ ನಂತರ ಉಳಿದವರನ್ನು ಬಲತ್ಕಾರದಿಂದ ಕ್ರೈಸ್ತರನ್ನಾಗಿ ಮಾಡಲಾದೀತು ಎಂತ ಬಹಿರಂಗವಾಗಿ ಪ್ರಕಟಿಸಿದರು. ಆ ಪ್ರಕಟಣೆಯಂತೆ 2 ತಿಂಗಳ ವೈದೆ ಒಳಗೆ ಪರವೂರಿಗೆ ಹೋಗಲು ಆತಂಕವಿಲ್ಲವೆಂದು ತಿಳುಕೊಂಡು ಧರ್ಮರಕ್ಷಣೆ ದೃಷ್ಟಿಯಿಂದ ಮನೆ ಭೂಮಿಯನ್ನು ಬಿಟ್ಟು ಚರಸೊತ್ತುಗಳ ಸಮೇತ 1554 ಆನಂದ ಸಂ।ದಲ್ಲಿ 12000 ಜನರು ಗೋವೆಯನ್ನು ಬಿಟ್ಟು ಹೊರಟರು. ಆ ಪೈಕಿ ಅಂದಾಜು 4000 ಜನರು ಪೂರ್ವ ಮತ್ತು ಉತ್ತರದೇಶಕ್ಕೆ ಹೋದರು. ಸುಮಾರು 8000ಜನರು ಉತ್ತರ ಮತ್ತು ದಕ್ಷಿಣ ಕನ್ನಡಾ ಜಿಲ್ಲಾ ಭಟ್ಕಳ – ಬಸ್ರುರ – ಮಂಗಳೂರು ಪ್ರಾಂತ್ಯಗಳಿಗೂ ಕೊಚ್ಚಿ ಮಲಬಾರ ಪ್ರಾಂತ್ಯಕ್ಕೂ ಬಂದರು. ಪ್ರಾಕಾರಾಭ್ಯ ತಮ್ಮ ಜನರು ಇರುವಲ್ಲಿಗೆನೇ ಬಂದರು. ಅವರು ಬರುವ 100 ವರ್ಷಗಳ ಮುಂಚಿನಿಂದ ಭಟ್ಕಳದಲ್ಲಿ ನಮ್ಮ ಜನರು ಬಹಳ ಇದ್ದು 7 ಶಿಲಾಮಯ ದೇವಸ್ಥಾನಗಳನ್ನು ಸ್ಥಾಪಿಸಿದವುಗಳೂ ಈಗಲೂ ನೋಡಬಹುದು. ಹಾಗೂ ಕಾರ್ಕಳದಲ್ಲಿದ್ದ ನಮ್ಮ ಜನರು ಶಕವರ್ಶ 1459 (ಇಸ್ವಿ 1537)ರಲ್ಲಿ ಅಂದ್ರೆ ಹೇವಿಳಂಬಿ ಸ 1 ವೈಶಾಖ ಶು 15 ದಿನ ಪ್ರತಿಷ್ಠೆ ಮಾಡಿದ್ದು ಮತ್ತು ಅದಕ್ಕಿಂತ ಬಹಳ ಕಾಲದ ಹಿಂದೆ ಮಂಜೇಶ್ವರದಲ್ಲಿ ಸ್ಥಾಪಿಸಿದ ದೇವಸ್ಥಾನ ಸಹಾ ಇರುತ್ತಿತ್ತು.

ಕ್ರಿ. ಶ. 1554ರ ನಂತರ 1565ರ ವರೇಗೆ ಗೋವೆಯಿಂದ ಬಹಳ ಜನರು ಈ ಪ್ರಾಂತ್ಯಕ್ಕೆ ಬಂದಿದ್ದಾರಂತೆ. ಅವರು ಬರುವ ಮುಂಚೆ ಬಸ್ರೂರಲ್ಲಿ ನಮ್ಮ ಜನರು ಎಷ್ಟು ಇದ್ದರೆಂಬುದು ಸ್ಪಷ್ಟವಾಗಿ ತಿಳಿಯಲಿಕ್ಕೆ ಬೇಕಾಗುವ ಆಧಾರವಿಲ್ಲ. ಅವರು ಕ್ರಿ. ಶ. 1554ರಲ್ಲಿ ಬಸ್ರೂರಿಗೆ ಬಂದವರಿಗೆ ಬಸ್ರೂರ ಊರೊಳಗೆ ವಾಸಿಸಲು ಜಾಗ ಸಿಕ್ಕದೇ ಊರಿನ ಹೊರಗೆ ಈಗ ಮಿಶ್ಯನ್‌ರವರ ಕಂಪೌಂಡ್ ಮತ್ತು ಹೈಸ್ಕೂಲು ಇರುವಲ್ಲಿ ಮತ್ತು ಅದೇ ರಸ್ತೆಯ ದಕ್ಷಿಣ ದಿಕ್ಕಿನಲ್ಲಿದ್ದ ಖಾಲಿಸ್ಥಳದಲ್ಲಿ ಪಾನದಕಟ್ಟೆ ಎಂಬಲ್ಲಿವರೆಗೂ ಮನೆಗಳನ್ನು ಕಟ್ಟಿಕೊಂಡು ವಾಸ್ತವಿಸಿದರು. ಕೆಲವರು ಆಸುಪಾಸಿನ ಊರುಗಳಾದ ಹಟ್ಯಂಗಡಿ, ಹೆಮ್ಮಾಡಿ, ಉಪ್ಪಿನಕುದ್ರು, ತಲ್ಲೂರು, ಕಂಡ್ಲೂರು, ನೇರ್ಲಕಟ್ಟೆ, ಮಾರ್ಡಿ, ಕುಂದಾಪುರ, ಕೋಟೇಶ್ವರ, ಹುಣ್ಸಮಕ್ಕಿ, ಮುಂತಾದ ಊರುಗಳಲ್ಲಿಯೂ ನೆಲಸಿದರು. ಕೆಲವು ವರ್ಷಗಳ ನಂತರ, ಈಗ ಬಸ್ರುರ ಮಿಶನ್ ಕಂಪೌಂಡ್ ಇದ್ದಲ್ಲಿ – "ವರದರಾಜ ವೆಂಕಟರಮಣ ಸ್ವಾಮಿ" ಎಂಬ ದೇವರ ಬಗ್ಗೆ ಒಂದು ದೇವಸ್ಥಾನವನ್ನು ಸ್ಥಾಪಿಸಿದರು. ಹಾಗೂ ನಾವು ಗುರುಗಳಾಗಿ ಆರಾಧಿಸುತ್ತಿದ್ದ ಉತ್ತರಾದಿ ಮಠದ ಸ್ವಾಮಿಗಳು ಈ ಪ್ರಾಂತ್ಯಕ್ಕೆ ಬಂದಾಗ ಉಳಕೊಳ್ಳಲು ಅನುಕೂಲವಾಗುವಂತೆ ಒಂದು ಮಠವನ್ನು ಸ್ಥಾಪಿಸಿ ಅದರಲ್ಲಿ ಅರ್ಚಕರಾಗಿ ಆಚಾರ್ಯ ಕುಟುಂಬವನ್ನು ಇಟ್ಟಿರುತ್ತಿದ್ದರು. ಆ ಮಠಕ್ಕೆ ಆಚಾರ್ಯರ ಮಠವೆಂತಲೇ ಹೆಸರಿತ್ತು. ಅದೇ ಕುಟುಂಬದಿಂದ ಶ್ರೀ ಗೋಕರ್ಣ ಮಠಕ್ಕೆ ಜೀವೋತ್ತುಮ

ತೀರ್ಥ ಸ್ವಾಮಿರಿಗೆ ಆಶ್ರಮವಾಗಿತ್ತು.

ಸುಮಾರು ಶಕ 1527ನೇ ವಿಶ್ವಾವಸು ಸಂ।ರದಲ್ಲಿ ಶ್ರೀ ಯಾದವೇಂದ್ರ ತೀರ್ಥ ಸ್ವಾಮಿಗಳು ಮತ್ತು ಅವರ ಶಿಷ್ಯರಾದ ಕೇಶವೇಂದ್ರ ತೀರ್ಥಸ್ವಾಮಿಗಳು ಸಹ ಬಸ್ರೂರಿಗೆ ಬಂದು ಬಸ್ರೂರಲ್ಲಿ ಮಠ ಸ್ಥಾಪಿಸಲು ನಿಶ್ಚಯಿಸಿ ಶಿಷ್ಯ ಸ್ವಾಮಿಗಳನ್ನು ಬಸರೂರಲ್ಲಿ ಬಿಟ್ಟು ಗುರುಸ್ವಾಮಿಗಳು ಭಟ್ಕಳದಲ್ಲಿ ಮಠ ಸ್ಥಾಪಿಸುವ ಇಚ್ಛೆಯಿಂದ ಭಟ್ಕಳಕ್ಕೆ ಹೋದರೆಂತಲೂ ಹಿರಿಯರು ಹೇಳುತ್ತಿದ್ದರು. ಭಟ್ಕಳಕ್ಕೆ ಹೋದ ಶ್ರೀ ಯಾದವೇಂದ್ರ ತೀರ್ಥ ಸ್ವಾಮಿಗಳಿಗೆ ಭಟ್ಕಳದಲ್ಲಿದ್ದ ಜೋಗಣ್ಣ ಮಲ್ಯರೆಂಬ ಶಿಷ್ಯಗೃಹಸ್ಥರು ಅವರ ತಂದೆ ಅನಂತ ಮಲ್ಯರು ಸ್ಥಾಪಿಸಿದ ದಿಂಡಿ ತಿರುಮಲ ದೇವರನ್ನು ಪ್ರತಿಷ್ಠಿಸಿದ ದೇವಸ್ಥಾನವನ್ನು ಕೆಲವು ಆಸ್ತಿಯನ್ನು ಕೂಡಾ ದಾನ ಮಾಡಿ ಶಕ 1529ನೇ ಈಗ ನಡೆಯುವ ಪ್ರಕಾರ 1528ನೇ ಪರಾಭವ ಸಂ।ರದ ವೈಶಾಖ ಶುಕ್ಲ ೧೫ರಲ್ಲು ದಾನಶಾಸನ ಬರೆದುಕೊಟ್ಟರು.

ಬಸರೂರಲ್ಲಿ ಉಳಕೊಂಡಿದ್ದ. ಅವರ ಶಿಷ್ಯರಾದ ಶ್ರೀ ಕೇಶವೇಂದ್ರ ತೀರ್ಥರು ಈಗ ಶ್ರೀ ಕಾಶೀಮಠವಿರುವ ಸ್ಥಳವನ್ನೋ ದೇವಸ್ಥಾನವನ್ನೋ ಯಾರಿಂದಲೋ ಕ್ರಯಕ್ಕೆ ಪಡೆದು ಮಠವನ್ನು ಸ್ಥಾಪಿಸಿದರೆಂತ ಕಾಣುತ್ತದೆ. ಇದು ಕೂಡಾ ಅದೇ ಸಮಯದಲ್ಲಿ ಆಗಿರಬಹುದು.

ಭಟ್ಕಳಕ್ಕೆ ಹೋಗಿ ಮಠ ಸ್ಥಾಪಿಸಿದ ಅವರ ಗುರುಗಳಾದ ಶ್ರೀ ಯಾದವೇಂದ್ರ ತೀರ್ಥರಿಗೆ ಭಟ್ಕಳದಲ್ಲಿ ಕೀಲಕ ಸಂವತ್ಸರದಲ್ಲಿ ಅಸ್ವಸ್ಥವೆಂತ ತಿಳಿದು ಶ್ರೀ ಕೇಶವೇಂದ್ರ ತೀರ್ಥರು ಅಲ್ಲಿಗೆ ಧಾವಿಸಿ ಅವರಿಗೆ ಅದೇ ಅಸ್ವಸ್ಥತೆಯಲ್ಲಿ ಕೀಲಕ ಆಷಾಡವದ್ಯ ೫ಮಿಯಲ್ಲಿ ಮುಕ್ತಿಯಾದುದರಿಂದ ಅಲ್ಲಿ ಆಗತಕ್ಕ ಸಮಾಧಿ ಮುಂತಾದ ಕಾರ್ಯಗಳನ್ನು ಮುಗಿಸಿ ಅಲ್ಲಿಯ ಮಠದಲ್ಲಿ ನಡೆಯಬೇಕಾದ ನಿತ್ಯನೈಮಿತ್ತಿಕ ಕಾರ್ಯಗಳನ್ನು ಸರಿಯಾಗಿ ನಡೆಯುವಂತೆ ವ್ಯವಸ್ಥೆ ಮಾಡುವ ಉದ್ದೇಶದಿಂದ ಕೆಲವು ಕಾಲ ಅಲ್ಲಿಯೇ ಇದ್ದು ಅನಂತರ ಬಸ್ರೂರಿಗೆ ಬಂದು ಅಲ್ಲಿಯ ವ್ಯವಸ್ಥೆಗಳನ್ನು ಸರಿಪಡಿಸಿ ಅಲ್ಲಿಂದ ಕೊಚ್ಚಿಗೆ ಹೋಗಿ ಅಲ್ಲಿ ಕೆಲವು ಕಾಲ ಇದ್ದು ಶಿಷ್ಯಸ್ವೀಕಾರ ಮಾಡಿ ಶಿಷ್ಯರಿಗೆ ಶ್ರೀ ಉಪೇಂದ್ರತೀರ್ಥರೆಂಬ ನಾಮಾಭಿಧಾನವಿತ್ತು ಕೆಲವು ಕಾಲದ ನಂತರ ಶಿಷ್ಯರ ಸಮೇತ ಶ್ರೀ ಕಾಶೀಕ್ಷೇತ್ರಕ್ಕೆ ತೆರಳಿ ಅಲ್ಲಿ ಕೆಲವು ಕಾಲ ಉಳಕೊಂಡು ಅಲ್ಲಿಯ ಮಠವನ್ನು ಜೀರ್ಣೋದ್ಧಾರ ಮಾಡುವ ಕಾರ್ಯಗಳ ಕುರಿತು ಶಿಷ್ಯರಿಗೆ ಅನುಭವವಿತ್ತು ಶಿಷ್ಯ ಸ್ವಾಮಿಗಳವರನ್ನು ಅಲ್ಲಿ ಬಿಟ್ಟು ಕೊಚ್ಚಿಗೆ ಬರಬೇಕಾದ ಅವಶ್ಯಕತೆ ಉಂಟಾದುದರಿಂದ ಕೊಚ್ಚಿಗೆ ದಯಮಾಡಿಸಿ ಅಲ್ಲಿಯ ದೇವಸ್ಥಾನದಲ್ಲಿಯೂ ಊರಿನಲ್ಲಿಯೂ ನಮ್ಮ ಜನಗಳ ಶ್ರೇಯೋಭಿವೃದ್ಧಿಗಾಗಿ ಶಕವರ್ಷ 1542ರಲ್ಲಿ ಕೆಲವು ನಿಯಮಗಳನ್ನು ಕಾಣುವ

ಆಜ್ಞಾರಾಯಸ (ಚಟ್ಯಾರಿ) ಮಾಡಿಕೊಟ್ಟು ತರುವಾಯ ದಿಗ್ವಿಜಯಕ್ಕಾಗಿ ಉತ್ತರ ದೇಶಗಳಲ್ಲಿ ಸಂಚಾರ ಮಾಡುತ್ತಾ ಬಸ್ರೂರಿಗೆ ಬಂದು ಕೆಲವು ಕಾಲ ಇದ್ದು ಅಲ್ಲಿಂದ ಕಾಶೀಗೆ ಹೋಗಿ ಮುಂಚೆ ಇರುವ ಶ್ರೀ ಕಾಶೀಮಠಕ್ಕೆ ತಾಕಿ ಉತ್ತರಕ್ಕೂ ಸಾರ್ವಜನಿಕ ರಸ್ತೆಯಿಂದ ದಕ್ಷಿಣಕ್ಕೂ ಇರುವ ಸ್ಥಳವನ್ನು ನಾಮದೇವಭಟ್ರ ಮಗಳು ಮತ್ತು ಅನಂತಭಟ್ರ ಹೆಂಡ್ತಿಯಾದ ಶಿವಾಯಿ ಹೆಂಗ್ಸಿನಿಂದ ರೂ. 600/–ಕ್ಕೆ ಕ್ರಯಕ್ಕೆ ಪಡೆದು ಅದರಲ್ಲಿ ಹೊಸಕಟ್ಟಡಗಳನ್ನು ಕಟ್ಟಿಸಿ ಕೆಲವು ಕಾಲ ಅಲ್ಲಿದ್ದು ವಾಪಸ್ ಕೊಚ್ಚಿಗೆ ಬಂದು ಸುಮಾರು ಶಕವರ್ಶ 1567ರಲ್ಲಿ ಪೂರ್ವಾಶ್ರಮದ ತಮ್ಮ ತಂದೆಯ ಸಹೋದರರ ಮಕ್ಕಳಾದ ಹನುಮಂತ ಭಟ್ಟರೆಂಬ ವಟುವಿಗೆ ಸನ್ಯಾಸಾಶ್ರಮ ಕೊಟ್ಟು ಎರಡನೇ ಯಾದವೇಂದ್ರ ತೀರ್ಥರೆಂಬ ನಾಮಾಭಿಧಾನ ಮಾಡಿ ತಮ್ಮ 2ನೇ ಶಿಷ್ಯರಾಗಿ ಸ್ವೀಕರಿಸಿ ತನ್ನ ಸಂಗಡ ಇಟ್ಟುಕೊಂಡಿರುತ್ತಿದ್ದು – ಕೆಲವು ಕಾಲದ ನಂತರ ಅವರ ಸಮೇತ ಕಾಶೀಗೆ ದಯಮಾಡಿ ಅಲ್ಲಿ ತಾವು ಮುಂಚೆ ಕ್ರಯಕ್ಕೆಪಡೆದ ಸ್ಥಳವನ್ನು ತಮ್ಮ 2ನೇ ಶಿಷ್ಯರಿಗೆ ಹಿಜರಿ 1078ನೇ ಶವ್ವಾಲಿ ತಿಂಗಳ 4ನೇ ತಾರೀಕು ಅಂದ್ರೆ 1668ನೇ ಇಸವಿ ಮಾರ್ಚ್ ತಿಂಗಳಲ್ಲಿ ಭಕ್ಷಿಸು ಪತ್ರ ಮಾಡಿಕೊಟ್ಟು ಅಲ್ಲಿಂದ ವಾಪಸ್ಸು ಹೊರಟು 2ನೇ ಶಿಷ್ಯರ ಸಮೇತ ಬಸ್ರೂರಿಗೆ ಬಂದು ಹೆಮ್ಮಾಡಿಯಲ್ಲಿರುತ್ತಿದ್ದ ಗೃಹಸ್ಥರು ಮುಂಚೆ ಜನ್ವಾರಕಟ್ಟೆಯಲ್ಲಿ ಸ್ಥಾಪಿಸಿದ ಗೋಪಿನಾಥ ದೇವರ ದೇವಸ್ಥಾನವು ಸುಟ್ಟು ಹೋದದನ್ನು ಅವರು ಪುನಹಾ ಈಗ ಇರುವಲ್ಲಿ ಸ್ಥಾಪಿಸಿ ಆ ದೇವಸ್ಥಾನ ಮತ್ತು ಅದಕ್ಕಿರುವ 48 ಮುಡಿ ಹುಟ್ವಳ್ಳಿಯ ಆಸ್ತಿ ಸಮೇತ ಶ್ರೀ ಕೇಶವೇಂದ್ರ ತೀರ್ಥರಿಗೆ ದಾನ ಶಾಸನ ಮೂಲಕ ಬಿಟ್ಟುಕೊಡಲು ಆಲೋಚಿಸಿ ಬಸ್ರೂರಿಗೆ ಬಂದ ಶ್ರೀ ಪಾದಂಗಳವರೊಡನೆ ಅರಿಕೆ ಮಾಡಿಕೊಂಡಾಗ ಅಲ್ಲಿ ನಡೆಯಬೇಕಾದ ವಿನಿಯೋಗಗಳ ಖರ್ಚಿಗೆ ಮೇಲ್ಕಾಣುವ ಆಸ್ತಿಯ ಹುಟ್ವಳ್ಳಿ ಸಾಕಾಗಲಾರದೆಂತ ಶ್ರೀಯವರು ಅಭಿಪ್ರಾಯ ವ್ಯಕ್ತಪಡಿಸಿ ನಿರಾಕರಿಸಿದ್ದರಿಂದ ಆ ದೇವಸ್ಥಾನದ ಮೊಕ್ತೇಸರರಾಗಿದ್ದ ನಮ್ಮ ಕುಟುಂಬದ ಮೊಟ್ಟು ಕೆಮ್ತಿರ ಮಗ ನಾರಾಯಣ ಕಾಮತ ತಮ್ಮ ಸ್ವಂತ ಹಕ್ಕಿನ ಸುಮಾರು 70 ಮುಡಿ ಅಕ್ಕಿ ಹುಟ್ಟುವಳ್ಳಿಯ ಆಸ್ತಿ ಸಮೇತ ಸದ್ರಿ ದೇವಸ್ಥಾನವನ್ನು ಶಾಲಿವಾಹನ ಶಕ ೧೫೯೧ನೇ ಕೀಲಕ ಸಂವತ್ಸರದಲ್ಲಿ ಶ್ರೀ ಕೇಶವೇಂದ್ರ ತೀರ್ಥ ಸ್ವಾಮಿಗಳಿಗೆ ಬಿಟ್ಟು ಕೊಟ್ಟದನ್ನು ಅಂಗೀಕರಿಸಿ ತಮ್ಮ 2ನೇ ಶಿಷ್ಯರ ಸಮೇತ ಅಲ್ಲಿಗೆ ಹೋಗಿ ಕೆಲವು ಕಾಲವಿದ್ದು ವಾಪಸ್ಸು ಬಸ್ರೂರ ಮಠಕ್ಕೆ ಬಂದು ಸ್ವಲ್ಪ ಸಮಯದಲ್ಲಿಯೇ ಅಂದ್ರೆ ಶಕ ೧೫೯೭ನೇ ಸೌಮ್ಯ ಸಂ।ರದ ಫಾಲ್ಗುಣ ವದ್ಯ 3 ದಿನ ಪಾರ್ಥಿವ ದೇಹವನ್ನು ವಿಸರ್ಜಿಸಿ ಸಮಾಧಿಸ್ಥರಾದರೆಂತ ತಿಳಿದುಬರುತ್ತದೆ.

ಈ ಶ್ರೀ ಕೇಶವೇಂದ್ರ ಸ್ವಾಮಿಗಳು ಬಹಳ ವೈರಾಗ್ಯ ಸಂಪನ್ನರು, ನಿತ್ಯ ಪೂಜಾ

ನಿಯಮಗಳನ್ನು, ಸದಾಚಾರ ಪದ್ಧತಿಗಳನ್ನು, ಕಿಂಚಿತ್ತಿದ್ದರೂ ತಪ್ಪದೇ ಪಾಲಿಸುವವರು. ದೇವರಲ್ಲಿ ದೃಢವಾದ ಶ್ರದ್ಧೆಯುಳ್ಳವರು, ವಿದ್ವಾಂಸರು – ದೇಹದಾರ್ಢ್ಯ ಉಳ್ಳವರು, ದೀರ್ಘಕಾಲ ಬಾಳಿದವರು. ಅವರು ಸ್ಥಾಪಿಸಿದ ಶ್ರೀ ವೆಂಕಟರಮಣ ದೇವರ ವಿಗ್ರಹವು ಬಹಳ ಸುಂದರವಾಗಿ ತಯಾರಿಸಿದ್ದಾಗಿದೆ. ಆದರೆ ಕಟ್ಟಡಗಳು ಈಗಿರುವಂತೆ ಇರಲಿಲ್ಲವೆಂತ ಕಾಣುತ್ತದೆ. ಗರ್ಭಗೃಹವನ್ನು ಈಗ ಇರುವಂತೆ ಎತ್ತರವಾಗಿಯೂ ಸುದೃಢವಾಗಿ ಕಟ್ಟಿಸಿದವರು ಮತ್ತು ಒಂದು ಬದಿಯ ಚಾವಡಿಯನ್ನು ಪುನಃ ಕಟ್ಟಿಸಿದವರು ಇದೇ ಸಂಸ್ಥಾನದ ೧೪ನೇ ಗುರುವರ್ಯರಾದ ವಿಭುದೇಂದ್ರ ತೀರ್ಥ ಸ್ವಾಮಿಗಳವರು. ಶಕವರ್ಷ ೧೭೪೫ನೇ ಸ್ವಭಾನು ಸಂವತ್ಸರದ ಮಾಘ ಶುಕ್ಲ ದಶಮಿಯ ದಿನ ಪುನಃ ಪ್ರತಿಷ್ಠಿಸಿದರೆಂದು ಆ ದೇವರ ಕೆಳಗಿನ ಪೀಠದ ಮೇಲೆ ಕೆತ್ತಿಸಿದ್ದುಂಟು. ಆನಂತರ ಮಿಕ್ಕ ಚಾವಡಿ ಮತ್ತು ಎದುರು ಹೆಬ್ಬಾಗಿಲನ್ನು ಪುನಃ ಕಟ್ಟಿಸಲು ಶ್ರೀ ಭುವನೇಂದ್ರ ತೀರ್ಥರು ಪ್ರಾರಂಭಿಸಿ ಅವರು ಪರಂಧಾಮವನ್ನು ಸೇರಿ ಇದೇ ಮಠದಲ್ಲಿ ಸಮಾಧಿಸ್ಥರಾದುದರಿಂದ ಅವರ ಶಿಷ್ಯರಾದ ಶ್ರೀ ವರದೇಂದ್ರ ತೀರ್ಥ ಶ್ರೀಪಾದಂಗಳವರು ಪೂರ್ಣಪಡಿಸಿದ್ದರು. ಮತ್ತು ಈಗಿನ ವಿದ್ಯಮಾನ ಸ್ವಾಮಿಗಳಾದ ಶ್ರೀಮತ್ ಸುಧೀಂದ್ರ ತೀರ್ಥ ಶ್ರೀ ಸ್ವಾಮಿಗಳವರು 3 ವರ್ಷಗಳ ಹಿಂದೆ ಈ ಮಠವನ್ನು ಪೂರ್ಣವಾಗಿ ಹೊಸತು ಪಡಿಸಿ ಹೇರಳ ಹಣ ವೆಚ್ಚ ಮಾಡಿದ್ದಾರೆ.

ಶ್ರೀ ಯಾದವೇಂದ್ರ ಸ್ವಾಮಿಗಳು ಪುನಃ ಕಾಶೀಗೆ ಹೋಗಿ ಶ್ರೀ ಕೇಶವೇಂದ್ರ ತೀರ್ಥರು ತಮಗೆ ಕೊಟ್ಟ ಸ್ಥಳವನ್ನು ತಮ್ಮ ಗುರುಗಳ ಜೇಷ್ಠ ಶಿಷ್ಯರಾಗಿದ್ದ ಪೂರ್ವಾಶ್ರಮದ ತಮ್ಮ ಖಾಸಾ ಅಣ್ಣನ ಮಗನಾಗಿದ್ದ ಶ್ರೀ ದೇವೇಂದ್ರ ತೀರ್ಥರಿಗೆ ಕೊಟ್ಟದಲ್ಲದೇ ಆ ಸ್ಥಳಕ್ಕೆ ತಾಗಿ ತಾವೇ ಕ್ರಯಕ್ಕೆ ಪಡೆದ ಇನ್ನೊಂದು ಸ್ಥಳವನ್ನು ಕೂಡಾ ಅವರಿಗೆನೇ ಕೊಟ್ಟು ಮಠ ವಿಭಾಗವಾಗಬಾರದೆಂಬ ಸ್ವಇಚ್ಛೆಯಿಂದ ತಾವು ಶಿಷ್ಯ ಸ್ವೀಕಾರ ಮಾಡದೇ ಈ ಬಸ್ರೂರ ಮಠದಿಂದ ೪ ಮೈಲು ದೂರದಲ್ಲಿರುವ ಹೆಮ್ಮಾಡಿ ಮಠದಲ್ಲಿ ಶಕವರ್ಷ ೧೬೧೩ನೇ ಖರ ಸಂ॥ರದ ಭಾದ್ರಪದ ಶು॥ ೧೫ ದಿನ ಸಮಾಧಿಸ್ಥರಾದರು. ಈ ಹೆಮ್ಮಾಡಿ ಮಠವನ್ನು ಕೂಡಾ ಈ ಸಂಸ್ಥಾನದ ವಿದ್ಯಮಾನ ಶ್ರೀಮತ್ಸುಧೀಂದ್ರ ತೀರ್ಥ ಸ್ವಾಮಿಗಳು ಜೀರ್ಣೋದ್ಧಾರ ಮಾಡಿಸಿ ಪುನಃ ಪ್ರತಿಷ್ಠೆ ಮಾಡಿಸಿದ್ದಾರೆ.

ಹೀಗೆ ಕುಂದಾಪುರ ತಾಲೂಕಿನಲ್ಲಿ ಶ್ರೀ ಕಾಶೀ ಮಠಕ್ಕಿರುವ 2 ಮಠಗಳು ಈಗ ಪೂರ್ಣ ಸುಸ್ಥಿತಿಯಲ್ಲಿದ್ದಾವೆ. ಇದೇ ಬಸ್ರೂರ ಮಠದಲ್ಲಿರುವ ಇನ್ನೊಂದು ಸಮಾಧಿ ೧೭ನೇ ಗುರುವರ್ಯರಾದ ಶೀಮದ್ ಭುವನೇಂದ್ರ ತೀರ್ಥರದ್ದು – ಇವರ ಜನ್ಮತಿಥಿ ಶಕ 1759 ಜನ್ಮ ನಕ್ಷತ್ರ ಶ್ರವಣಾ, ಇವರ ಪೂರ್ವಾಶ್ರಮದ ಹೆಸರು ನರಸಿಂಹ

ಕಾಮತ್, ಇವರ ತಾಯಿಯ ಹೆಸರು ಗೌರಿ ಅಮ್ಮ (ಶ್ರೀ ಕಾಶೀಮಠದ ಸುಮತೀಂದ್ರ ತೀರ್ಥ ಸ್ವಾಮಿಗಳ ಪೂರ್ವಾಶ್ರಮದ ಖಾಸಾ ತಂಗಿ) ತಂದೆಯ ಹೆಸರು ಪಳ್ಳಿಪರ್ತ ಗಿರಿ ಕಾಮತರು. ಇವರಿಗೆ ಶಕ 1773ನೇ ಪುಶ್ಯ 8 ದಿನ ಆಲಪ್ಪಿಯಲ್ಲಿ ಶ್ರೀ ಸುಮತೀಂದ್ರ ಸ್ವಾಮಿಗಳವರು ಆಶ್ರಮ ಕೊಟ್ಟು ಶೀಮದ್ ಭುವನೇಂದ್ರ ತೀರ್ಥರೆಂಬ ನಾಮಾಭಿಧಾನ ಮಾಡಿ ಗುರುಗಳು ಅಂದಿನಿಂದ 7 ದಿನಗಳಲ್ಲಿ ಪುಶ್ಯ ಬ 30 ದಿನ ಆಲಪ್ಪಿ ಶ್ರೀ ವೆಂಕಟಪತಿ ದೇವಸ್ಥಾನದಲ್ಲಿ ಪಾರ್ಥಿವ ದೇಹವನ್ನು ವಿಸರ್ಜಿಸಿ ಪರಂಧಾಮವನ್ನೈದಿದರು. ಈ ಸಂದರ್ಭದ ಸಂಗತ್ಯಾನುಸಾರಗಳನ್ನು ವಿವರಿಸಬೇಕಾಗಿದೆ.

14ನೇ ಗುರುಗಳಾದ ಶ್ರೀ ವಿಭುದೇಂದ್ರ ತೀರ್ಥರಿಗೆ 15ನೆ ಗುರುಗಳಾದ ಶ್ರೀ ಸುಮತೀಂದ್ರ ತೀರ್ಥರು 1ನೇ ಶಿಷ್ಯರು. ಕ್ರಮೇಣ ಗುರು ಶಿಷ್ಯರಲ್ಲಿ ಭಿನ್ನಾಭಿಪ್ರಾಯಗಳು ಉಂಟಾಗಿ ಗುರುಗಳಾದ ಶ್ರೀ ವಿಭುದೇಂದ್ರ ತೀರ್ಥರು ಕುಂದಾಪುರದ ಭಟ್ಟರೊಬ್ಬರಿಗೆ ಉಪ್ಪಂಗಡಿಯಲ್ಲಿ ಸನ್ಯಾಸಾಶ್ರಮವನ್ನಿತ್ತು ಶ್ರೀ ವಸುದೇಂದ್ರ ತೀರ್ಥರೆಂತ ನಾಮಾಭಿಧಾನ ಮಾಡಿ ತಮ್ಮ ಜೊತೆಯಲ್ಲಿಟ್ಟು ಕೊಂಡಿದ್ದರು. ಶ್ರೀ ವಿಭುದೇಂದ್ರ ತೀರ್ಥರು ಶಕವರ್ಷ 1755ವಿಜಯ ಸಂ।ರದ ಮಾಘ ವದ್ಯ 5ದಿನ ಮಂಜೇಶ್ವರ ಸ್ವಮಠದಲ್ಲಿ ಸಮಾಧಿಸ್ಥರಾದ ನಂತರ 1ನೇ ಶಿಷ್ಯರಿಗೂ 2ನೇ ಶಿಷ್ಯರಿಗೂ ಉಂಟಾದ ವಿವಾದಗಳು ಬೆಳೆದು 2ನೇ ಶಿಷ್ಯರಿಗೆ ಶ್ರೀಸಂಸ್ಥಾನದ ಸ್ಥಿರಾಸ್ತಿಗಳಿಂದ ಏನೂ ಉತ್ಪತ್ತಿ ಸಿಕ್ಕದೇ ಸುಮಾರು 20 ವರ್ಷ ಕುಂದಾಪುರ ದೇವಸ್ಥಾನದಲ್ಲಿಯೇ ಉಳಕೊಂಡಾಗ್ಯೂ ವಿವಾದವು ಖಾಸಗಿಯಿಂದ ಇತ್ಯರ್ಥವಾಗದೇ 2ನೇ ಶಿಷ್ಯರಾದ ಶ್ರೀ ವಸುದೇಂದ್ರ ತೀರ್ಥರು ವಾದಿಯಾಗಿ 1ನೇ ಶಿಷ್ಯ ಶ್ರೀ ಸುಮತೀಂದ್ರ ತೀರ್ಥರ ಮೇಲೆ ಕಲ್ಲಿಕೋಟೆಯ ಕೋರ್ಟಿನಲ್ಲಿ ಹಿಶೆ ಬಗ್ಗೆ ಸಿವಿಲ್ ವ್ಯಾಜ್ಯ ದಾಖ್ಲು ಮಾಡಿದ್ರಿಂದ ವಾದರೀಗೆ ಅರ್ಧಾಂಶ ಆಸ್ತಿಗಳನ್ನು ಕೊಡಿಸಲಿಕ್ಕೆ ಡಿಕ್ರಿ ಆಗಿತ್ತಂತೆ. ಆ ಡಿಕ್ರಿ ಬಗ್ಗೆ ಶ್ರೀ ವಸುದೇಂದ್ರ ತೀರ್ಥರು ಅಮ್ಲುಜಾರಿ ದಾಖ್ಲು ಮಾಡಿದ ಹಾಗಾಯಿತು. ಶ್ರೀ ಸುಮತೀಂದ್ರ ತೀರ್ಥರಿಗೆ ಮಠ ಪಾಲಾಗುತ್ತದೆ ಎಂಬ ವ್ಯಸನ ಉಂಟಾಗಿ ಅದರಿಂದಲೆ ಅಸ್ವಸ್ಥ ಉಂಟಾಗಿತ್ತಂತೆ.

ಶಿಷ್ಯ ಸ್ವೀಕಾರ ಮಾಡಬೇಕಾಗಿ ಸಮಾಜದವರು ಬಹಳ ಕಾಲದಿಂದ ಅರಿಕೆ ಮಾಡಿಕೊಂಡಾಗ್ಯೂ ನಿರಾಕರಿಸುತ್ತ ಮಠ ಹೋಗುವಾಗ ಶಿಷ್ಯರಾಕೆ ? ಇಡೀ ಮಠವನ್ನು ಅವರೇ ತೆಗೆದುಕೊಳ್ಳಲಿ ಎಂದು ಹೇಳುತ್ತಿರುವಾಗ ಅಸ್ವಸ್ಥವು ವಿಕೋಪಕ್ಕೆ ಬಂದು ಇನ್ನು ಹೆಚ್ಚಿಗೆ ಸಮಯವಿಲ್ಲವೆಂದು ಸಮಾಜದವರು ಮಠ ವಿಭಾಗಿಸಲ್ಪಡದಿದ್ದ ಹಾಗೆ ತಾವು ಪ್ರಯತ್ನಿಸುತ್ತೇವೆಂತ ಖಂಡಿತ ಭರವಸೆ ಕೊಟ್ಟು ನಂತರ ಶಿಷ್ಯ ಸ್ವೀಕಾರಕ್ಕೆ ಒಪ್ಪಿದ್ರಿಂದ ಅತೀವ ಯೋಗ್ಯರೆಂತ ಕಂಡುಬಂದ ಶ್ರೀ ಸುಮತೀಂದ್ರ ತೀರ್ಥಸ್ವಾಮಿಗಳವರ

ಪೂರ್ವಾಶ್ರಮದ ತಂಗಿಯ ಗಂಡು ಮಕ್ಕಳ ಪೈಕಿ ಒಬ್ಬರಾದ ನರಸಿಂಹ ಕಾಮತ್ ಎಂಬ ವಟುವನ್ನು ಮತ್ತವರ ತಾಯಿತಂದೆಯನ್ನು ಕೂಡಾ ಒತ್ತಾಯ ಪಡಿಸಿ ಅವರ ಒಪ್ಪಿಗೆ ಪಡೆದು ಆಶ್ರಮಕೊಡಿಸಿ ಶ್ರೀಮದ್ ಭುವನೇಂದ್ರ ತೀರ್ಥರೆಂತ ನಾಮಾಭಿಧಾನ ಮಾಡಿದರೆಂತಲೂ ಇದಾದ 7ನೇ ದಿನವೇ ಗುರುವರ್ಯರು ಸಮಾಧಾನಚಿತ್ತದಿಂದ ದೇಹವಿಸರ್ಜಿಸಿ ಸಮಾಧಿಸ್ಥರಾದರೆಂತಲೂ ಹೇಳುತ್ತಾರೆ. ಇದು ಶಕ 1773ನೇ ಪುಷ್ಯ ಬ 30ರಲ್ಲಿ ಆಗಿತ್ತು.

ಇದಾದ ಕೆಲವು ಕಾಲದ ತರುವಾಯ ಸ್ವಾಭಾವಿಕವಾಗಿಯೇ ವಿನಯಶೀಲರಾದ - ಶ್ರೀಮದ್ ಭುವನೇಂದ್ರ ತೀರ್ಥರು ಆಗಾಗ್ಗೆ ಶ್ರೀ ವಸುಧೇಂದ್ರ ತೀರ್ಥರಿಗೆ ಗುರುಭಾವನೆಯಿಂದ ಬಹಳ ವಿನೀತರಾಗಿ ಪತ್ರಗಳನ್ನು ಕಳುಹಿಸುತ್ತಾ ಇದ್ದುದರಿಂದ ಶ್ರೀ ವಸುದೇಂದ್ರ ತೀರ್ಥರಲ್ಲಿದ್ದ ಮಠವನ್ನು ವಿಭಾಗಿಸಿಕೊಂಡು ತಾವು ಬೇರೊಬ್ಬ ಶಿಷ್ಯರನ್ನು ಮಾಡಿಕೊಳ್ಳಬೇಕಂತ ಇದ್ದ ಭಾವನೆ ಬದಲಾಯಿಸುತ್ತಾ ಬಂದು ಡಿಕ್ರಿಯ ಅಮ್ಲುಜಾರಿಯನ್ನು ತೆಗೆದು ಹಾಕಿ ಮುಂದರಿಸುತ್ತಾ ಬಂದು ಶಕ 1779ನೇ ಪಿಂಗಳ ಸಂ।ರದ ಆಶ್ವೀಜ ಮಾಸದಲ್ಲಿ ಕುಂದಾಪುರದಿಂದ ತಿರುಪತಿ ಯಾತ್ರೆಗೆ ಹೋಗಿ ಅದೇ ಮಾಘ ಮಾಸದಲ್ಲಿ ವಾಪಸ್ಸು ಕುಂದಾಪುರಕ್ಕೆ ಬಂದು ಕಾಲಯುಕ್ತಿ ಸಂ।ರದ ಭಾದ್ರಪದ ಮಾಸದಲ್ಲಿ ಅಸ್ವಸ್ಥತೆ ಉಂಟಾಗಿ ತೀವ್ರವಾದುದರಿಂದ ತಮ್ಮ ದೇವರ ಪೂಜೆಯನ್ನು ಕೂಡಾ ಬೇರೆಯವರಿಂದ ಮಾಡಿಸಿ ಔಷಧೋಪಚಾರದಿಂದ ಹುಶಾರಾಗಿ ಪುಶ್ಯ ಶು ೮ ದಿನ ಕುಂದಾಪುರದಿಂದ ತಮ್ಮ ಗುರುಗಳಾದ ಶ್ರೀ ವಿಬುಧೇಂದ್ರ ತೀರ್ಥರ ಸಮಾಧಿ ಇರುವ ಮಂಜೇಶ್ವರ ಮಠಕ್ಕೆ ಹೊರಟು ಹೋಗುವದಾಗಿ ಶ್ರೀ ಭುವನೇಂದ್ರ ತೀರ್ಥರಿಗೆ ಅಲ್ಲಿಯ ಕಾರ್ಯಗಳನ್ನು ಮುಗಿಸಿ ಮಂಜೇಶ್ವರಕ್ಕೆ ಬರಬೇಕಂತ ಪತ್ರ ಬರೆದು ಕುಂದಾಪುರದಿಂದ ಹೊರಡುವಾಗ್ಯೆ ಹಾಜರಿದ್ದ ಗೃಹಸ್ಥರೊಡನೆ ತಮಗೆ ಆಪತ್ತು ಸಂಭವಿಸಿದ್ರೆ ಏನು ಮಾಡಬೇಕಂತ ತಮ್ಮ ಮನೋಗತವನ್ನು ಬರೆದಿಡುತ್ತೇವೆಂತಲೂ ಆ ಪ್ರಕಾರ ಎಲ್ಲರೂ ನಡಕೊಳ್ಳಬೇಕೆಂತಲೂ ಹೇಳಿ ಹೊರಟು ಹೋದುದರಿಂದ ಮುಂದೆ. ಸಂಸ್ಥಾನ ಪಾಲಾಗುವ ಸಂಭವವಿಲ್ಲಾ ಎಂಬುದನ್ನು ಎಲ್ಲರೂ ತಿಳಕೊಂಡು ಆ ವಿಷಯವನ್ನು ಇಬ್ಬರು ಗೃಹಸ್ಥರು ಶ್ರೀ ಭುವನೇಂದ್ರತೀರ್ಥ ಶ್ರೀ ಪಾದಂಗಳವರಿಗೆ ವಿಜ್ಞಾಪಿಸಿಕೊಂಡಿದ್ದರು.

ಇಲ್ಲಿಂದ ಹೊರಟುಹೋದ 3 ತಿಂಗಳೊಳಗೆ ಅವರಿಗೆ ಅಸ್ವಸ್ತತೆ ಉಂಟಾದ್ದರಿಂದ ಅವರೊಡನೆ ಎಲ್ಲಾ ಸೊತ್ತುಗಳ ಪಟ್ಟಿಯನ್ನು ತಯಾರ್ಸಿ ಆ ಪಟ್ಟಯ 3 ನಕಲುಗಳನ್ನು ಮಾಡಿ ದಸ್ಕತು ಹಾಕಿ 1 ನಕ್ಲನ್ನು ಮಂಜೇಶ್ವರದ ಶ್ರೀಮದನಂತೇಶ್ವರ ದೇವಸ್ಥಾನದಲ್ಲಿಯೂ

1 ನಕ್ಲನ್ನು ಶ್ರೀ ಮಂಜೇಶ್ವರ ರಾಮಯ್ಯ ಶಾನುಭಾಗರೊಡನೆಯೂ ಇನ್ನೊಂದು ನಕ್ಲನ
ಮಂಜೇಶ್ವರ ಲಕ್ಷ್ಮಣ ಭಕ್ತರೊಡನೆಯೂ ಕೊಟ್ಟು ಈ ಪಟ್ಟಿಗಳನ್ನು ಮತ್ತು ತಮ್ಮೊಡನೆಯಿರುವ
ಸೊತ್ತುಗಳನ್ನು ಶ್ರೀ ಭುವನೇಂದ್ರ ತೀರ್ಥರವರ ಸ್ವಾಧೀನ ಕೊಡಬೇಕಾಗಿ ಅಪ್ಪಣ
ಕೊಟ್ಟು ಶ್ರೀ ಭುವನೇಂದ್ರ ತೀರ್ಥ ಶ್ರೀಪಾದಂಗಳವರಿಗೆ ಬರೆದು ಕಳುಹಿಸಿದ ಒಂದ
ಹಪ್ತೆಯ ಒಳಗೆ ಶಕವರ್ಷ 1781ನೇ ಸಿದ್ಧಾರ್ಥಿ ಸಂ।ರದ ವೈಶಾಖ ಶು 15 ಪೌರ್ಣಮಿಯ
ದಿನ ಶ್ರೀ ವಸುಧೇಂದ್ರ ತೀರ್ಥರು ಪರಂಧಾಮವನ್ನೈದಿ ತಮ್ಮ ಗುರುಸಮಾಧಿಯ
ಸನ್ನಿಧಿಯಲ್ಲಿಯೇ ಸಮಾಧಿಸ್ಥರಾದರಂತೆ. ನಾನು ತಿಳಿದಂತೆ ಆನಂತ್ರ ಒಂದು ಯ
ಎರಡು ದಿನಗಳಲ್ಲಿ ಶ್ರೀ ಭುವನೇಂದ್ರ ತೀರ್ಥರು ಅಲ್ಲಿಗೆ ತಲುಪಿ ಬಹಳ ವ್ಯಸನ
ಪಟ್ಟು ಅವರ ಮುಂದಿನ ಕಾರ್ಯಗಳನ್ನು ಬಹಳ ಶ್ರದ್ಧೆಯಿಂದ ನೆರವೇರಿಸಿ ಅವರ
ಸಮಾಧಿಸ್ಥರಾದ ದಿನ ವರುಶಂಪ್ರತಿಯಲ್ಲೂ ಶ್ರೀಮದನಂತೇಶ್ವರ ದೇವಸ್ಥಾನದಲ್ಲಿ ದೊಡ
ಸಂತರ್ಪಣೆ ನಡೆಯುವಂತೆ ಏರ್ಪಾಟು ಮಾಡಿದರಂತೆ.

ಶ್ರೀಮದ್ ಭುವನೇಂದ್ರ ತೀರ್ಥರಿಗೆ ಆಶ್ರಮವಾಗುವ ಮುಂಚೆ ಕೊಚ್ಚಿಯಲ್ಲಿ
ಶ್ರೀ ತಿರುಮಲದೇವಸ್ಥಾನದಲ್ಲಿ ನಡೆದ ಕೆಲವು ಸಂಗತಿಗಳನ್ನು ವಿವರಿಸುತ್ತೇನೆ. ಕ್ರಿ
ಶ. 1589ರಲ್ಲಿ ಶ್ರೀ ವಿಜಯೇಂದ್ರ ಸ್ವಾಮಿಗಳವರಿಂದ ಪಡಕೊಂಡ ಶ್ರೀ ವೆಂಕಟಪತಿ
ದೇವರ ಮೂರ್ತಿಯನ್ನು ಕೊಚ್ಚಿ ತಿರುಮಲದೇವಸ್ಥಾನದಲ್ಲಿ ಕ್ರಿ. ಶ. 1899ರಲ್ಲಿ
ಪ್ರತಿಷ್ಠಿಸಿದ್ದದ್ದು 1719ನೇ ಇಸವಿಯಲ್ಲಿ ಒಂದಾವರ್ತಿ ದೇವಸ್ಥಾನದಲ್ಲಿ ಕಾಣೆಯಾಗಿ
ಸಮುದ್ರ ತೀರದಲ್ಲಿ ಯಾರೋ ಒಬ್ಬರಿಗೆ ಸಿಕ್ಕಿ ಅವರು ಅದನ್ನು ಡಚ್ ಗವರ್ನರಿಗೆ
ಕೊಟ್ಟರು. ಅವರು ಅದನ್ನು ತನ್ನ ಮಕ್ಕಳಿಗೆ ಆಡಲಿಕ್ಕೆ ಕೊಟ್ಟರು. ಆ ಲಾಗ್ಯಾತು
ಅವರ ಹೆಂಡತಿಗೆ ವಿಶೇಷ ಅಸ್ವಸ್ಥ ಉಂಟಾದ್ರಿಂದ ಅವರು ಆ ಮೂರ್ತಿಯನ್ನು
ವೈದ್ಯರೊಬ್ಬರಿಗೆ ಕೊಟ್ಟರಂತೆ. ಆ ವೈದ್ಯರಲ್ಲಿಯೂ ಅಸ್ವಸ್ಥ ಉಂಟಾದರಿಂದ ಇದೇ
ಮೂರ್ತಿಯಿಂದ ಎಂತ ತಿಳಕೊಂಡು ಮೂರ್ತಿಯನ್ನು ಪುನಃ ದೇವಸ್ಥಾನಕ್ಕೆ ಕೊಟ್ಟರಂತೆ.
ಆ ಲಾಗ್ಯಾತು 1791ನೇ ಇಸವಿಯ ವರೇಗೂ ದೇವಸ್ಥಾನದಲ್ಲಿ ಸ್ವಸ್ಥತೆಯಿಂದಲೇ
ಇರುತಿತ್ತು. ಕ್ರಿ.ಶ. 1663 ರಲ್ಲಿ ಕೊಚ್ಚಿಯ ಅರಸು ಗೋದವರ್ಮನು ಕೊಂಕಣಸ್ಥರಿಂದ
ಪ್ರತಿಫಲ ಪಡೆದು ದೇವಸ್ಥಾನ ಮತ್ತು ಕೊಂಕಣಸ್ಥರ ವಸತಿಯಿರುವ "ಸಂಕೇತ"ವೆಂಬ
ಸ್ಥಳವನ್ನು ಅದರ ಮೇಲಿರುತ್ತಿದ್ದ ತನ್ನ ಎಲ್ಲ ಹಕ್ಕುಗಳನ್ನು ಸಹಾ ಕೊಂಕಣಸ್ಥರಿಗೆ
ಕೊಟ್ಟಿರುತ್ತಿದ್ದು, ಆ ಹಕ್ಕುಗಳ ಕುರಿತು ಮೇಲ್ವಿಚಾರ ನಡಿಸುವ ಹಕ್ಕನ್ನು ಕೊಂಕಣಸ್ಥರು
ಅಲ್ಲಿ ಸ್ಥಾಪಿತವಾಗಿದ್ದ ಡಚ್‌ರ ಕಂಪೆನಿಗೆ ಕೊಟ್ಟಿರುತ್ತಿದ್ದರು. ಕೊಂಕಣಸ್ಥ ವ್ಯಾಪಾರಸ್ಥರು
ಮತ್ತು ದೇವಸ್ಥಾನವೂ ಬಹಳ ವೃದ್ಧಿಯಾದದ್ದನ್ನು ತಿಳಿದು ಆಗಿನ ಕೊಚ್ಚಿಯ ಅರಸು
ಕೇರಳವರ್ಮನಿಗೆ ಅವರ ಮೇಲೆ ಕಣ್ಣು ಬಿತ್ತು.

ಆದರೆ ಮುಂಚಿನ ಅರಸು ಗೋದವರ್ಮನು ಬರಕೊಟ್ಟ ಶರ್ತಗಳ ಪ್ರಕಾರ ಅರಸನಿಗೆ ಅಧಿಕಾರವಿಲ್ಲದ್ರಿಂದ ಅಧಿಕಾರವನ್ನು ಡಚ್ ಕಂಪೆನಿಯವರು ಪಡಕೊಳ್ಳಲು ಪ್ರಯತ್ನಿಸಿ ಡಚ್ ಕಂಪೆನಿಯವರು 1772ರಲ್ಲಿ ಕೊಂಕಣಸ್ಥರು ಮತ್ತು ಅವರ ದೇವಸ್ಥಾನದ ಮೇಲೆ ಮೇಲ್ವಿಚಾರ ಮಾಡುವ ಹಕ್ಕನ್ನು ಮಾತ್ರ ಅರಸು ಕೇರಳ ವರ್ಮನಿಗೆ ಕೊಟ್ಟು ಆತನು ಅವರ ಮೇಲೆ ಹೊಸತೆರಿಗೆಗಳನ್ನಾಗಲೀ ಇತರ ಯಾವುದೇ ತರದಿಂದ ಸಂಕಷ್ಟಕರವಾದ ಕೃತ್ಯಗಳನ್ನು ನಡಿಸಕೂಡದೆಂತಲೂ ನಡಿಸಿದ್ರೆ ಅದನ್ನು ಸರಿಪಡಿಸುವ ಹಕ್ಕು ಡಚ್ ಕಂಪೆನಿಗೆ ಇರುತ್ತದೆಂತಲೂ ಶರ್ತ ಹಾಕಿ 1772ನೇ ಇಸ್ವಿಯಲ್ಲಿ ಅರಸ ಕೇರಳವರ್ಮನಿಗೆ ಡಚ್ ಕಂಪೆನಿಯವರು ಬಿಟ್ಟುಕೊಟ್ಟರು. ಕೇರಳವರ್ಮನು 1790ನೇ ಇಸ್ವಿಯಲ್ಲಿ ಮೃತಪಟ್ಟು ಆತನ ತಮ್ಮ ರಪಿವರ್ಮನು ಅಧಿಕಾರಕ್ಕೆ ಬಂದ ತರುವಾಯ 1791ನೇ ಇಸಪಿಯಲ್ಲಿ ಕೇರಳವರ್ಮನ ವರ್ಷ ಶ್ರಾದ್ಧಕ್ಕೆ ಕೊಂಕಣಸ್ಥರು ಪ್ರತಿ ಒಬ್ಬರು ಇಂತಿಷ್ಟು ಬೆಲ್ಲವನ್ನು ಕೊಡಬೇಕಾಗಿ ಹುಕುಂ ಮಾಡಿದನು. ಆ ಹುಕುಂ ಅನ್ಯಾಯದ್ದೆಂತ ಕೊಂಕಣಸ್ಥರಲ್ಲಿ ಮುಖ್ಯಸ್ಥನಾದ ದೇವರ್ಸ ಕಿಣಿ ಮತ್ತು ಡಚ್ ಕಂಪೆನಿಯವರು ಪ್ರತಿಭಟಿಸಿದರು.

ಆದ್ರೆ ಆ ಕಾಲದಲ್ಲಿ ಡಚ್ ಕಂಪೆನಿಯವರ ಪ್ರಾಬಲ್ಯ ಸ್ವಲ್ಪ ಕುಂದಿದ್ರಿಂದಲೂ ಇಂಗ್ಲಿಷ್ ಕಂಪೆನಿಯವರ ಪ್ರಾಬಲ್ಯ ಹೆಚ್ಚುತ್ತಿದ್ದು, ಅವರಿಗೂ ಹೊಸ ಅರಸನಿಗೆ ಸ್ನೇಹ ಉಂಟಾದರಿಂದ ಡಚ್ ಕಂಪೆನಿಯವರಿಗೆ ಹಾಗೆ ಹೇಳಲು ಹಕ್ಕಿಲ್ಲ. ತನ್ನ ಪ್ರಜೆಗಳ ಮೇಲೆ ತನಗೆ ಸಂಪೂರ್ಣವಾದ ಹಕ್ಕಿದೆ ಎಂತ ಡಚ್ಚರಿಗೆ ಉತ್ತರ ಕಳುಹಿಸಿ 1791ನೇ ಇಸಪಿ ಸಪ್ಟಂಬರ್ 3ನೇ ವಾರದಲ್ಲಿ ದೇವರ್ಸಕಿಣಿರನ್ನು ಕೊಲ್ಲುವ ಇರಾದೆಯಿಂದ 3 ಜನ ಸೈನ್ಯಾಧಿಕಾರಿಗಳು ದೇವರ್ಸ ಕಿಣಿಯವರ ಜವಳಿ ಅಂಗಡಿಗೆ ಹೋಗಿ ರೇಷ್ಮೆ ವಸ್ತ್ರಗಳನ್ನು ಕೇಳಿದರು. ಅಂಗಡಿಯ ಕೆಳಭಾಗದಲ್ಲಿದ್ದ ವಸ್ತ್ರಗಳು ಅವರು ಖುಷ್ಸು ಮಾಡದೆ ಮಾಳಿಗಿಯಲ್ಲಿದ್ದ ವಸ್ತ್ರಗಳನ್ನು ನೋಡಲು ದೇವರ್ಸ ಕಿಣಿ ಸಮೇತ ಆ ಮೂರು ಜನರು ಮಾಳಿಗೆಗೆ ಹೋದ ಕೂಡಲೇ ಅವರು ದೇವರ್ಸ ಕಿಣಿಯವರ ಕುತ್ತಿಗೆಯನ್ನು ಕತ್ತಿಯಿಂದ ಕಡಿದು ವಸ್ತ್ರ ಸುತ್ತಿ ಕೊಂಡು ಹೋಗಿ ಅರಸನಿಗೆ ಒಪ್ಪಿಸಿದರು ಮತ್ತು ಕೊಂಕಣಸ್ಥರ ಅಂಗಡಿ ಮತ್ತು ಮನೆಗಳನ್ನು ಲೂಟಿ ಮಾಡಲಿಕ್ಕೂ ದೇವಸ್ಥಾನದ ಭಂಡಾರವನ್ನು ಲೂಟಿ ಮಾಡಲಿಕ್ಕೂ ಜನರನ್ನು ಕಳುಹಿಸಿ ದೇವಸ್ಥಾನದಲ್ಲಿದ್ದ ಇಬ್ಬರು ಅಧಿಕಾರಿಗಳನ್ನು ಕೆಲವು ನೌಕರರನ್ನು ಕೊಂದರು. ಇದನ್ನು ತಿಳಿದ ಡಚ್ಚರು ತಮ್ಮ ಸೈನ್ಯ ಕಳುಹಿಸಿ ಅರಸನನ್ನು 9 ಮೈಲಿನವರೆಗೆ ಓಡಿಸಿ ತ್ರಿಪುಣಿತ್ತುರಾಯಂಬಲ್ಲಿ ಅವನು ಹೊರಗೆ ಹೋಗದ ಹಾಗೆ ಕಾವಲಿಟ್ಟು ಮಟ್ಟಂಚೆರಿಯಲ್ಲಿ ಲೂಟಿ ಮಾಡಿದ್ದರ ಪೈಕಿ

ಸಿಕ್ಕಿದಷ್ಟು ಸೊತ್ತುಗಳನ್ನು ಸ್ವಾಧೀನಪಡಿಸಿಕೊಂಡರು. ಇದೇ ಸಮಯದಲ್ಲಿ ದೇವಸ್ಥಾನದಲ್ಲಿದ್ದ ಶ್ರೀ ವೆಂಕಟಪತಿಯ ಮೂರ್ತಿಯನ್ನು ಅಲಂಕಾರ ಸಹಿತ ಪೆಟ್ಟಿಗೆಯಲ್ಲಿ ಇಟ್ಟು ಆ ಪೆಟ್ಟಿಗೆಯನ್ನು ಡಚ್ ಗವರ್ನರನ ಬಂಗಲೆಗೆ ಸಾಗಿಸಿದರು. ಅಲ್ಲಿ ಒಂದುದಿನವಿಟ್ಟು ಮರುದಿನ ಚಲ್ವನಾ ಎಂಬ ಊರಿಗೆ ಸಾಗ್ಸಿ ಅಲ್ಲಿಯ ವೆಂಕಟಪತಿ ದೇವಸ್ಥಾನದಲ್ಲಿ ಇಟ್ಟು ಪೂಜೆ ಮಾಡುತ್ತಿದ್ದರು. ಕೊಚ್ಚಿಯ ತಿರುಮಲದೇವಳದಲ್ಲಿ ಸಾಲಿಗ್ರಾಮವನ್ನಿಟ್ಟು ಪೂಜೆ ಮಾಡುತ್ತಿದ್ದರಂತೆ.

1791ನೇ ಇಸವಿಯಲ್ಲಿ ಶ್ರೀ ವೆಂಕಟಪತಿದೇವರ ಮೂರ್ತಿಯು ಆಲಪ್ಪಿಗೆ ಬದಲಾಗಾಯ್ತು. ಆಲಪ್ಪಿ ಊರು ವ್ಯಾಪಾರ ಉದ್ಯೋಗದಿಂದ ಬಹಳ ಅಭಿವೃದ್ಧಿಯಾದ ಸಂಗತಿಯನ್ನು ತಿಳಿದ ತ್ರಾವಂಕೂರು ರಾಜ್ಯದ ಅರಸ ಶ್ರೀ ಬಾಲಮಾರ್ತಾಂಡ ವರ್ಮನು ಆ ಮೂರ್ತಿಗಾಗಿ ಆಲಪ್ಪಿಯಲ್ಲಿ ಒಂದು ದೊಡ್ಡ ದೇವಸ್ಥಾನವನ್ನು ನಿರ್ಮಿಸಲು ಆಲೋಚಿಸಿ ಆಗ್ಯೆ ಜೀವಂತರಾಗಿದ್ದ ಶ್ರೀ ಸುಮತೀಂದ್ರ ತೀರ್ಥ ಸ್ವಾಮಿಗಳವರಿಗೆ 1848ನೇ ಇಸವಿ ಪ್ಲವಂಗ ಸಂವತ್ಸರದ ಆಶ್ವೀಜ ಬ 7ನೇ ಮಿಯಲ್ಲಿ ದೇವಸ್ಥಾನ ಕಟ್ಟುವ ಸ್ಥಳವನ್ನು ನಿಶ್ಚಯಿಸಿ ತಿಳಿಸುವರಾಗಬೇಕಾಗಿ ಬರಕೊಂಡ ವಿಜ್ಞಾಪನಾ ಪತ್ರದಂತೆ ಶ್ರೀಸ್ವಾಮಿಗಳವರು ಆರಿಸಿ ಸ್ಥಳಕ್ಕೆ ಸ್ವಾಮಿಗಳ ಅಪ್ಪಣೆಯಂತೆ ಅನಂತನಾರಾಯಣಪುರವೆಂಬ ಹೆಸರಿಟ್ಟು ಅಲ್ಲಿ ಸುಶೋಭಿತವಾಗಿ ದೇವಸ್ಥಾನವನ್ನು ಕಟ್ಟಿಸುತ್ತಿರುವಾಗ್ಯೆ 1851ನೇ ಇಸವಿ (1773 ಶಕ ಸಾಧಾರಣ ಸಂ। ಪುಶ್ಯ ಬ 30 ದಿನ) ಶ್ರೀ ಸುಮತೀಂದ್ರ ಯತಿವರ್ಯರು ಆಲಪ್ಪಿಯಲ್ಲಿ ಸಮಾಧಿಸ್ಥರಾಗಿ ಅವರ ಶಿಷ್ಯ ಶೀಮದ್ ಭುವನೇಂದ್ರ ತೀರ್ಥರು ಅಧಿಕಾರಕ್ಕೆ ಬಂದದ್ರಿಂದ ಅವರಿಗೆ ತ್ರಾವಂಕೂರು ಅರಸರು 1775–1853ನೇ ಇಸವಿ ಪರಿಧಾವಿ ಸಂ।ರದ ಜೇಷ್ಠ ಶುದ್ಧ ಅಷ್ಟಮಿ ದಿನ ಬರಕೊಂಡ ವಿಜ್ಞಾಪನಾಪತ್ರಕ್ಕನುಸರಿಸಿ ಅದೇ ತಿಂಗಳಲ್ಲಿ ಆಲಪ್ಪಿ ಅನಂತನಾರಾಯಣಪುರದಲ್ಲಿ ಅರಸರು ಕಟ್ಟಿಸಿಕೊಟ್ಟ ಹೊಸ ದೇವಸ್ಥಾನದಲ್ಲಿ ಕೊಚ್ಚಿ ವೆಂಕಟಪತಿ ಮೂರ್ತಿಯನ್ನು ಶ್ರೀ ಭುವನೇಂದ್ರ ತೀರ್ಥರು ಬಹಳ ವಿಜೃಂಭಣೆಯಿಂದ ಪ್ರತಿಷ್ಠೆ ಮಾಡಿದರು. ತ್ರಾವಂಕೂರು ಅರಸರೂ ಈ ಪ್ರತಿಷ್ಠೆಯಲ್ಲಿ ಧಾರಾಳವಾಗಿ ಖರ್ಚು ಮಾಡಿದ್ದಲ್ಲದೇ ಆ ದೇವರ ನಿತ್ಯನೈಮಿತ್ಯಕ ಖರ್ಚಿಗಾಗಿ ಸಾಲಿಯಾನ ರು. 12000 ಉತ್ಪನ್ನ ಸಿಕ್ಕುವ ಭೂಮಿಯನ್ನು ಕೊಟ್ಟರು.

ಆ ಪ್ರತಿಷ್ಠೆಯಾದ ಸ್ವಲ್ಪ ಕಾಲದಲ್ಲಿ ಕೊಚ್ಚಿಯ ಜನರು, 1853ನೇ ಫೆಬ್ರವರಿ ತಿಂ. 6ನೇ ದಿನ ಆ ದೇವಸ್ಥಾನದಿಂದ ಆ ಮೂರ್ತಿಯನ್ನು ವಿಚಿತ್ರ ರೀತಿಯಲ್ಲಿ ಕದ್ದುಕೊಂಡು ಹೋಗಲು ಕೊಚ್ಚಿಯ ಆ ಕಾಲದ ಅರಸನು ಬಹಳ ಉತ್ತೇಜನ ಕೊಟ್ಟಿದ್ದರಂತೆ.

ಯಾಕಂದ್ರೆ ಆ ಮೂರ್ತಿಯು ಕೊಚ್ಚಿಯಿಂದ ಆಲಪ್ಪಿಗೆ ಹೋದ ಹಾಗಾಯ್ತು ಆಲಪ್ಪಿ ಊರು ಅಭಿವೃದ್ಧಿಯಾದಂತೆ ಕೊಚ್ಚಿಯ ಊರು ಹೀನಸ್ಥಿತಿಗೆ ಬಂದದ್ದಲ್ಲದೆ ಅರಸನಿಕೇತನದಲ್ಲಿ ಬಹಳ ಕಷ್ಟ ಉಂಟಾಯಿತು. ಇದರ ಪರಿಹಾರ ಆ ಮೂರ್ತಿಯನ್ನು ಪುನಹಾ ಕೊಚ್ಚಿಗೆ ತಂದು ಪ್ರತಿಷ್ಠೆ ಮಾಡಿಸಿದ್ರೆ ಮಾತ್ರವೇ ಆದೀತು ಹೊರತು ಬೇರೆ ಉಪಾಯವಿಲ್ಲೆಂತ ಜ್ಯೋತಿಷ್ಯರು ಕೊಚ್ಚಿಯ ಅರಸರಿಗೆ ಹೇಳಿದ್ರಿಂದ ಕೊಚ್ಚಿಯ ಅರಸರು ಕೊಚ್ಚಿಯ ಜನರಿಗೆ ತಾವು ಕೂಡಾ ತ್ರಾವಂಕೂರ ಅರಸರು ಮಾಡಿದಂತಯೇ ಹೊಸ ದೇವಸ್ಥಾನ ಕಟ್ಟಿಸಲಿಕ್ಕು ಇನ್ನು ಬೇರೆ ವಿಧವಾಗಿಯೂ ತುಂಬ ಸಹಾಯ ಮಾಡುತ್ತೇನೆಂತ ಬಹಳ ಉತ್ತೇಜನ ಮಾಡಿದ್ರಿಂದಲೂ ಕದ್ದು ತರುವದೊಂದೇ ಉಪಾಯ ಹೊರತು ಬೇರೆ ಉಪಾಯವಿಲ್ಲದ್ರಿಂದಲೂ ಹಾಗೆ ಕದ್ದುತಂದರು. ಈ ಸಂಗ್ತಿ ಮರುದಿನ ಆಲಪ್ಪಿಯಲ್ಲಿಯೂ ತ್ರಾವಂಕೋರಿನಲ್ಲಿಯೂ ಎಲ್ಲರ ತಿಳುವಳಿಕೆಗೆ ಬಂದು ಅರಸರು ಬಹಳ ಕಳವಳಗೊಂಡು ಮೂರ್ತಿಯು ಕೊಚ್ಚಿಗೆ ಹೋಗಿದೆಯೆಂಬುದು ಎಲ್ಲರ ತಿಳುವಳಿಕೆಗೆ ಬಂದು ಮೂರ್ತಿಯನ್ನು ವಾಪ್ಸು ಆಲಪ್ಪಿಗೆ ಕಳುಹಿಸಬೇಕೆಂತ ತ್ರಾವಂಕೂರಿನ ಅರಸರು ಕೊಚ್ಚಿ ಅರಸರಿಗೆ ಪತ್ರ ವ್ಯವಹಾರ ನಡೆಯಿಸಿ ಫಲಕಾಣದೇ ತ್ರಾವಂಕೂರಿನ ಅರಸರು 1856ನೇ ಇಸ್ವಿಯಲ್ಲಿ ಕೊಚ್ಚಿ ರಾಜ್ಯದ ಮೇಲೆ ಯುದ್ಧಕ್ಕಾಗಿ ತನ್ನ ಸೈನ್ಯವನ್ನು ಕಳುಹಿಸಿದ ನಂತ್ರ ಕೊಚ್ಚಿಯ ದಿವಾನರು ಮೂರ್ತಿಯನ್ನು ವಾಪ್ಸು ಕೊಡುತ್ತೇವೆಂತ ಉತ್ತರ ಬರೆದು ಯುದ್ಧವನ್ನು ತಾತ್ಕಾಲಿಕವಾಗಿ ನಿಲ್ಲಿಸಿ 1857ನೇ ಇಸಪಿ ಜನವರಿ 28ನೇ ದಿವಸ ಅದೇ ನಮೂನೆಯಲ್ಲಿ ತಯಾರಿಸಿದ ಹೊಸ ಮೂರ್ತಿಯನ್ನು ಆಲಪ್ಪಿಗೆ ಕಳುಹಿಸಿ ಕೊಟ್ಟಿದ್ದನ್ನು ನೋಡಿ ಅದು ನಿಜವಾದ ಮೂರ್ತಿಯನ್ನು ಕೂಡಲೇ ಕಳುಹಿಸದಿದ್ರೆ ಪುನಃ ಸೈನ್ಯ ಕಳುಹಿಸುವುದಾಗಿ ಉತ್ತರ ಕಳುಹಿಸಿದ್ರಿಂದ ಕೊಚ್ಚಿ ದಿವಾಣರು ಕೂಡಲೇ ಜನವರಿ 31ಕ್ಕೆ ಬೇರೊಂದು ಮೂರ್ತಿಯನ್ನು ಆಲಪ್ಪಿಗೆ ಕಳುಹಿಸಿದರು. ಅದು ಕೂಡ ಕೃತಕವೆಂತ ಆಲಪ್ಪಿ ಯವರು ನಿಶ್ಚಯಿಸಿ ಯುದ್ಧವನ್ನೇ ಮಾಡುವದೆಂತ ತ್ರಾವಂಕೂರ ಸರ್ಕಾರದವರು ತಯಾರಾಡುತ್ತಿದ್ದಾಗ್ಯೆ ಇಂಗ್ಲಿಷ್ ಕಂಪೆನಿಯ ರೆಸಿಡೆಂಟರು ಉಭಯ ಸರಕಾರಗಳ ಸಮ್ಮತಿಯಿಂದ ಈ ಪಿವಾದವನ್ನು ಮದ್ರಾಸ ಸರಕಾರದವರ ತೀರ್ಮಾನಕ್ಕಾಗಿ ಕಳುಹಿಸಿದರು.

ಆ ಸರಕಾರದವರು ಮೂರ್ತಿಯು ಯಾರ ಹಕ್ಕಿನದ್ದೆಂಬ ಸಂಗ್ತಿಯನ್ನು ಇತ್ಯರ್ಥ ಮಾಡುವುದನ್ನು ತಾತ್ಕಾಲಿಕವಾಗಿ ಬಾಕಿ ಇಟ್ಟು ಸ್ವಾಧೀನಗಾರರಾದ ತ್ರಾವಂಕೂರ ಸರಕಾರದ ಸ್ವಾಧೀನದಲ್ಲಿದ್ದದನ್ನು ಕದ್ದು ತಂದಿರುವದರಿಂದ ನಿಜವಾದ ಮೂರ್ತಿಯನ್ನು ತ್ರಾವಂಕೂರ ಸರಕಾರದವರಿಗೆ ಕೊಚ್ಚಿ ಸರಕಾರದವರು ವಾಪಸ್ ಕೊಡಬೇಕಂತ

26–9–1857ರಲ್ಲಿ ನಂ. 825ನೇ ಹುಕುಂ ಕಳುಹಿಸಿದ ಪ್ರಕಾರ ನಿಜವಾದ ಮೂರ್ತಿಯನ್ನು ಕೊಚ್ಚಿಯವರು ತ್ರಾವಂಕೂರದವರಿಗೆ ವಾಪಸ್ ಕೊಟ್ಟದ್ದನ್ನು ಪರೀಕ್ಷಿಸಿ ನಿಜವಾದ್ದೆಂತ ಒಪ್ಪಿ ಇಟ್ಟುಕೊಂಡರು. ಆನಂತ್ರ ಮೂರ್ತಿಯು ಕೊಚ್ಚಿಯವರ ಹಕ್ಕಿನದೆಂತಲೂ ಅವರು ಕೊಚ್ಚಿ ಅರಸನ ಧಾಳಿಗಾಗಿ ಭಯಪಟ್ಟು ಆಲಪ್ಪಿ ತಂದು ಅಮಾನತು ಇಟ್ಟು ಪೂಜೆ ಮಾಡುತ್ತಿದ್ದರೇ ಹೊರ್ತು ಮೂರ್ತಿಯನ್ನು ತ್ರಾವಂಕೂರ ಸರಕಾರಕ್ಕೆ ಬಿಟ್ಟುಕೊಡಲಿಲ್ಲವಾದರಿಂದ ಅದನ್ನು ತ್ರಾವಂಕೂರ ಸರಕಾರದವರು ಕೊಚ್ಚಿಯವರಿಗೆ ವಾಪಸ್ ಕೊಡಬೇಕಂತ ತಾ. 29–8–1858ರಲ್ಲಿ ನಂ. 592ನೇದಾಗಿ ಆಖ್ಯೆರ ತೀರ್ಮಾನ ಕೊಟ್ಟ ಪ್ರಕಾರ ಮೂರ್ತಿಯನ್ನು ತ್ರಾವಂಕೂರದವರು ಕೊಚ್ಚಿಯವರಿಗೆ ವಾಪಸ್ ಕೊಟ್ಟರು.

ಇದು ಸಿಕ್ಕಿದ ನಂತ್ರ ಕೊಚ್ಚಿಯ ಮಹಾಜನರು ದೇವಸ್ಥಾನವನ್ನು ಪುನಃ ಹೊಸತುಪಡಿಸಿ ಅದರಲ್ಲಿ ಈ ಮೂರ್ತಿಯನ್ನು ಪ್ರತಿಷ್ಠಿಸಬೇಕಂತ ನಿಶ್ಚಯಿಸಿದಾಗ ಕೊಚ್ಚಿಯಲ್ಲಿದ್ದ ವೆಂಕಟೇಶ್ವರ ಶೆಣ್ಯೈಯೆಂಬವರು ದೇವಸ್ಥಾನದ ಹಕ್ಕು ಪೂರ್ಣವಾಗಿ ತನ್ನದೇ ಹೊರತು ಮಹಾಜನರದ್ದಲ್ಲಾ ಎಂತ ವಿವಾದ ಹೇಳಿ ಆತಂಕಿಸಿದ್ರಿಂದ ಕೊಚ್ಚಿಯ ಮಹಾಜನರು ಮಾಧವ ಕಿಣಿಯೆಂಬ ಗೃಹಸ್ಥರನ್ನು ತಮ್ಮ ಪ್ರತಿನಿಧಿಯಾಗಿ ನೇಮಿಸಿ ಅಧಿಕಾರ ಪತ್ರ ಕೊಟ್ಟು ಈ ವಿವಾದವನ್ನು ಕೋರ್ಟಿನ ಇತ್ಯರ್ಥಕ್ಕಾಗಿ ದಾವೆ ದಾಖಲು ಮಾಡಿದ್ರು, ಕೋರ್ಟಿನವರು 1872ನೇ ಇಸ್ವಿಯಲ್ಲಿ ಸದ್ರಿ ದೇವಸ್ಥಾನವು ಮಹಾಜನರ ಹಕ್ಕಿನದ್ದೆಂತ ತೀರ್ಮಾನಿಸಿದ್ರಿಂದ ವೆಂಕಟೇಶ್ವರ ಶೆಣ್ಯೈಯವರು ತಮ್ಮ ಸ್ವಾಧೀನವಿದ್ದ ದೇವಸ್ಥಾನದ ಸ್ಥಿರ ಚರ ಎಲ್ಲಾ ಸೊತ್ತುಗಳನ್ನು ಮಹಾಜನರ ಪ್ರತಿನಿಧಿಯಾದ ಮಾಧವ ಕಿಣಿಯವರ ಸ್ವಾಧೀನ ಬಿಟ್ಟು ಕೊಟ್ಟರು.

ಹಾಗಾದ ನಂತ್ರ ಪುನಃ ವೆಂಕಟೇಶ್ವರ ಶೆಣ್ಯೈಯವರು ತಮ್ಮ ಹಕ್ಕನ್ನು ಕೊಚ್ಚಿಯ ರಾಜರಲ್ಲಿ ಪ್ರದರ್ಶಿಸಿದ್ದರಿಂದ ಅವರು ಸದ್ರಿ ದೇವಸ್ಥಾನ ಮತ್ತು ಸೊತ್ತುಗಳನ್ನು ವೆಂಕಟೇಶ್ವರ ಶೆಣ್ಯೈಯವರ ಸ್ವಾಧೀನವೇ ಬಿಟ್ಟುಕೊಡತಕ್ಕದ್ದೆಂತ ಹುಕುಂ ಕೊಟ್ರು, ಈ ಹುಕುಮಿನ ಮೇಲೆ ಮಹಾ ಜನರ ಕಡೆಯಿಂದ ಬ್ರಿಟಿಷ್ ರೆಸಿಡೆಂಟರಲ್ಲಿ ಅಪೀಲಾಗಿ ರೆಸಿಡೆಂಟರು ಇದರ ಚೌಕಾಸಿ ಮಾಡಿ ರಿಪೋರ್ಟ್ ಮಾಡ್ಲಿಕ್ಕೆ ರಾಮ ಕಿಣಿಯೆಂಬವರನ್ನು ನೇಮಿಸಿದರು. ಅವರ ರಿಪೋರ್ಟ್ ಪ್ರಕಾರ ರೆಸಿಡೆಂಟರು 1876ರಲ್ಲು ಕಾಶೀ ಮಠದ ಸ್ವಾಮಿಗಳು (ಶ್ರೀ ಭುವನೇಂದ್ರ ತೀರ್ಥರು) ಕೊಚ್ಚಿಯ ದಿವಾಣ ಶಂಕುಣ್ಣಿಮೆನನ್, ಕೊಚ್ಚಿ ಮಹಾ ಜನರ ಅಧಿಕಾರ ಹೊಂದಿನ ಪ್ರತಿನಿಧಿ (ಮಾಧವ ಕಿಣಿ) ಮತ್ತು ಪೊನ್ನಾನಿಯ ತಹಶೀಲ್ದಾರರು ಈ ನಾಲ್ವರನ್ನು Arbitrator ರಾಗಿ ನೇಮಿಸಿ ಅವರ ತೀರ್ಮಾನಕ್ಕೆ ಬಿಟ್ಟರು.

ಈ ನಾಲ್ವರು ಒಟ್ಟಾಗಿ ಸದ್ರಿ ದೇವಸ್ಥಾನವು ಕೊಚ್ಚಿಯ 'ಸಂಕೇತ'ದಲ್ಲಿ ವಾಸಿಸುವ ಎಲ್ಲಾ ಮಹಾಜನರ ಹಕ್ಕಿನದ್ದೆಂತ ತೀರ್ಮಾನಿಸಿದ್ರಿಂದ ಮಹಾಜನರು ದೇವಸ್ಥಾನವನ್ನು ಪುನಃ 1881ರಲ್ಲಿ ಹೊಸತುಪಡಿಸಿ ತಯಾರಿಸಿದ್ರಿಂದ ಅವರ ಅಪೇಕ್ಷೆಯಂತೆ ಕಾಶೀ ಮಠಾಧೀಶ ಶ್ರೀ ಭುವನೇಂದ್ರ ತೀರ್ಥರು ಆ ದೇವಸ್ಥಾನದಲ್ಲಿ ತಾ.11ನೇ ಮೇ 1881ನೇ ವಿಷು ಸಂ॥ರದ ವೈಶಾಖ ಶು. 12ಯು ಬುಧವಾರ ಶ್ರೀ ವೆಂಕಟಪತಿ ದೇವರನ್ನು ಪ್ರತಿಷ್ಠಿಸಿದರು. ಈ ಪ್ರಕಾರ ಕೊಚ್ಚಿಯ ಶ್ರೀ ವೆಂಕಟಪತಿ ಮೂರ್ತಿಯನ್ನು ಶ್ರೀ ಭುವನೇಂದ್ರ ತೀರ್ಥರು 1853ನೇ ಇಸ್ವಿಯಲ್ಲಿ ಒಂದಾವರ್ತಿ ಆಲಪ್ಪಿಯಲ್ಲಿಯೂ ಅದೇ ಮೂರ್ತಿಯನ್ನು ಇನ್ನೊಂದಾವರ್ತಿ 1881ರಲ್ಲಿ ಕೊಚ್ಚಿಯಲ್ಲಿಯೂ ಪ್ರತಿಷ್ಠಿಸಿದ್ದರು.

ಇದರ ಮುಂಚೆ 1866ನೇ ಇಸವಿಯಲ್ಲಿ ಶ್ರೀ ಭುವನೇಂದ್ರ ತೀರ್ಥ ಸ್ವಾಮಿಗಳು ತಮ್ಮ ಬಿರುದು ಬಾವಲಿಗಳ ಸಮೇತ ಶಿವಮೊಗ್ಗ ಜಿಲ್ಲೆ ನಗರಕ್ಕೆ ಹೋಗಿದ್ದರು. ಅವರು ಅಲ್ಲಿ ತಲ್ಪಿದ ನಂತ್ರ ಶೃಂಗೇರಿ ಮಠದ ಶಿಷ್ಯರು ಅವರು ಬಿರುದುಗಳ ಸಮೇತ ನಗರಕ್ಕೆ ಬಂದದ್ದು ಸರಿಯಲ್ಲಾ ಎಂಬದಾಗಿ ಮೈಸೂರು ಸರಕಾರಕ್ಕೆ ಅರ್ಜಿ ಮಾಡಿದ್ರಿಂದ ಅವರು ಬಿರುದುಗಳನ್ನು ಹಚ್ಚಿಕೊಂಡು ಹೋಗಕೂಡದೆಂತ ಸುಪರಿಂಟೆಂಡೆಂಟರು ಹುಕುಂ ಮಾಡಿದ್ರಿಂದ ಶ್ರೀ ಭುವನೇಂದ್ರ ತೀರ್ಥರ ಕಡೆಯಿಂದ ಮೈಸೂರ ಜುಡಿಶಿಯಲ್ ಕಮಿಶನರಿಗೆ ಆಪಿಲಾಗಿ ಸದ್ರಿ ಕಮಿಶನರು ತನ್ಖಿ ಮಾಡಿ ಹಾಗೆ ಬಿರುದುಗಳನ್ನು ಹಚ್ಚಿಕೊಂಡು ಹೋಗಬಹುದೆಂತ ಕ್ರಿಮಿನಲ್ ಮಿಸ್ಸ. ಅಪೀಲು ನಂಬ್ರ 1/1867ರಲ್ಲಿ ತಾ. 18-5-1867ರಲ್ಲಿ ಮಾಡಿದ ಹುಕುಂ ಪ್ರಕಾರ ಬಿರುದು ಬಾವಲಿಗಳನ್ನು ಹಚ್ಚಿಕೊಂಡು ವಾಪ್ಸು ಬಂದರು. ಆನಂತರ ಶ್ರೀ ಕಾಶೀ ಮೂಲಮಠಕ್ಕೆ ಯಾತ್ರೆ ಬೆಳೆಸಿ ವಾಪ್ಸು ಬಂದಿದ್ದಾರೆಂತ ತಿಳಿದು ಬರುತ್ತದೆ.

ಆನಂತರ ಕೆಲವು ಕಾಲ ಮಂಜೇಶ್ವರ ಮಠದಲ್ಲಿದ್ದು ಕೊಚ್ಚಿ ನಿವಾಸಿಯಾಗಿದ್ದ ಅನಂತ ಮಹಾಲೇ ಮತ್ತು ಅವರ ಪತ್ನಿ ಗಂಗಾಬಾಯಿಯವರಲ್ಲಿ ಶಾ. ಶ. 1707 ಕ್ರೋಧನ ಸಂ॥ರದ ಆಶ್ವಿಜ ಬ॥ 4 ರವಿವಾರ ರೋಹಿಣಿ ನಕ್ಷತ್ರದಲ್ಲಿ ಜನಿಸಿದ ಪೂರ್ವಾಶ್ರಮದಲ್ಲಿ ಗಿರಿಮಹಾಲೆ ಎಂಬ ಹೆಸರಿದ್ದ ವಟುವನ್ನು ಮಂಜೇಶ್ವರ ಮಠದಲ್ಲಿ ಧಾತು ಸಂ॥ರದ ಜ್ಯೇಷ್ಠ ಶು॥ 10 (ತಾ. 6-6-1876) ಸನ್ಯಾಸಾಶ್ರಮ ಕೊಡಿಸಿ ಶ್ರೀ ವರದೇಂದ್ರ ತೀರ್ಥರೆಂಬ ನಾಮಾಭಿಧಾನ ಮಾಡಿ ಗುರು ಉಪದೇಶ ಕೊಟ್ಟು ಶಿಷ್ಯ ಸ್ವೀಕಾರ ಮಾಡಿದರು. ಕೆಲವುಕಾಲ ಶಿಷ್ಯರನ್ನು ಜೊತೆಯಲ್ಲಿಟ್ಟುಕೊಂಡು ವಿದ್ಯಾಭ್ಯಾಸ ಮಾಡಿಸಿ ಆನಂತರ ಉಚ್ಚವಿದ್ಯಾಭ್ಯಾಸಕ್ಕಾಗಿ ಕಾಶಿಯಲ್ಲಿ ಇಟ್ಟರು.

ಇವರ ಗುರುಗಳು ಶ್ರೀ ಸುಮತೀಂದ್ರ ತೀರ್ಥರು ಮಣೇಲದಲ್ಲಿದ್ದ 4 ಜನ ಗೃಹಸ್ಥರು ಜಾತಿ ವಿಭಿನ್ನರಾದವರ ದಹನ ಸಂಸ್ಕಾರ ಮಾಡಿದ ತಪ್ಪಿಗಾಗಿ ಅಮಾನತು ಪಡಿಸಿಟ್ಟಿದ್ದರು. ಆ ಪೈಕಿ ಒಬ್ಬರು ಅವರ ಮಗನ ಸಮೇತ ಶ್ರೀ ಭುವನೇಂದ್ರ ತೀರ್ಥ ಸ್ವಾಮಿಗಳು ಮಂಗ್ಳೂರಲ್ಲಿದ್ದಾಗ ಸುಮಾರು 1877 AD ಸಮಯ ತಮಗೆ ತಕ್ಕವಾದ ಪ್ರಾಯಶ್ಚಿತ್ತ ಮಾಡಿಸಿ ಜಾತಿಯಲ್ಲಿ ಸೇರಿಸಿಕೊಳ್ಳುವಂತೆ ಅರಿಕೆ ಮಾಡಿಕೊಂಡಾಗ್ಯೆ ಶ್ರೀಪಾದಂಗಳವರು ಮಂಗ್ಳೂರ ದೇವಸ್ಥಾನಕ್ಕೆ ಸಮಾಜದ ಗೃಹಸ್ಥರನ್ನು ಕರೆಯಿಸಿ ಆಪಾದಿತರ ನಡೆ ಮುಂತಾದ ವಿಷಯದಲ್ಲಿ ಕೂಲಂಕುಶವಾದ ತನ್ಕಿ ನಡ್ಸಿದ್ದಲ್ಲದೇ ಸಮಾಜದವರ ಅಭಿಪ್ರಾಯದಂತೆ ಅವರಿಗೆ ಶಾಸ್ತ್ರದಂತೆ ಪ್ರಾಯಶ್ಚಿತ್ತ ಕೊಡ್ಸಿ ಮುದ್ರಾಧಾರಣೆ ಮಾಡಿಸಿ ಸಮಾಜದಲ್ಲಿ ಸೇರಿಸಿಕೊಂಡದ್ದನ್ನು ಕೆಲವು ಪ್ರಮುಖರು ಆಕ್ಷೇಪಿಸಿ ಸಿವಿಲ ಸಬ ಕೋರ್ಟಿನಲ್ಲಿ ಶ್ರೀಪಾದಂಗಳವರ ಮೇಲೆ ವ್ಯಾಜ್ಯ ದಾಕ್ಲು ಮಾಡಿದರಂತೆ. ಹಾಗೆ ಇತ್ಯರ್ಥ ಮಾಡುವ ಸಂಪೂರ್ಣ ಅಧಿಕಾರ ಶ್ರೀಪಾದಂಗಳವರಿಗೆ ಉಂಟೆಂತಲೂ ಅವರು ಮಾಡಿದ್ದು ನ್ಯಾಯವಾದ್ದೆಂತಲೂ ಮಂಗ್ಳೂರ ಸಬಕೋರ್ಟಿನಲ್ಲಿ ಆದ ತೀರ್ಪಿನ ಮೇಲೆ ಮದ್ರಾಸ ಹೈಕೋರ್ಟಿಗೆ ಆದ ಅಪೀಲಿನಲ್ಲಿಯೂ ಸಬಕೋರ್ಟಿನ ತೀರ್ಪು ಕಾಯಂ ಮಾಡಲ್ಪಟ್ಟಿತಂತೆ.

ಈತನ್ಮಧ್ಯೆ ಶ್ರೀಪಾದಂಗಳು ಕೊಚ್ಚಿಗೆ ಹೋಗಿ ಶ್ರೀ ವೆಂಕಟಪತಿ ದೇವರ ಪುನಃ ಪ್ರತಿಷ್ಠೆಯನ್ನು 1881ರಲ್ಲಿ ನೆರವೇರಿಸಿ ಅಲ್ಲಿಂದ ಶ್ರೀ ಕಾಶೀ ಕ್ಷೇತ್ರಕ್ಕೆ 1881ರಲ್ಲಿ ಸೆಪ್ಟೆಂಬರ್–ಒಕ್ಟೋಬರ್ ತಿಂಗಳಲ್ಲಿ ಪ್ರಯಾಣಿಸಿ ಅಲ್ಲಿಯ ಕಾರ್ಯಗಳನ್ನು ಪೂರೈಸಿ ಅಲ್ಲಿಂದ ಪ್ರಯಾಗದಲ್ಲಿರುವ ಸ್ವಮಠಕ್ಕೆ ದಯಮಾಡಿ ಮಠದ ಹಕ್ಕಿನ ಕೆಲವು ಸ್ಥಳವನ್ನು ಆಕ್ರಮಿಸಿದ ಸೈಬ ಇಕ್ರಮುದ್ದೀನ ಮತ್ತು ಅವನ ಒಳಗೆ ಅನುಭವಿಸುತ್ತಿದ್ದ ಒಕ್ಲು ಅಲಹಾಬಾದ ಕೋರ್ಟಿನಲ್ಲಿ ವ್ಯಾಜ್ಯ ದಾಕ್ಲು ಮಾಡಿ ತಾ 8–5–1883ರಲ್ಲಿ ಸ್ಥಳಸ್ವಾಧೀನತೆ ಬಗ್ಗೆ ಡಿಕ್ರಿ ಪಡೆದು ಅಲ್ಲಿಂದ ಶ್ರೀ ಕಾಶೀ ಕ್ಷೇತ್ರಕ್ಕೆ ಬಂದು ಅಲ್ಲಿ ವಿದ್ಯಾಭ್ಯಾಸ ಮಾಡುತ್ತಿದ್ದ ತಮ್ಮ ಶಿಷ್ಯ ವರದೇಂದ್ರ ತೀರ್ಥರನ್ನು ಸಂಗಡ ಕರಕೊಂಡು ಅಲ್ಲಿಂದ ದಕ್ಷಿಣಕ್ಕೆ ಬರಲು ಹೊರಟು ಬರುವಾಗ್ಯೆ ದಾರಿಯಲ್ಲಿ ಖಾನಾಪುರ ಭೇಟಿಯಾದ ಶ್ರೀ ಕೈವಲ್ಯಮಠದ ಶ್ರೀ ಆತ್ಮಾನಂದ ಸರಸ್ವತೀ ಸ್ವಾಮಿಗಳವರ ಆಗ್ರಹದ ಆಮಂತ್ರಣದಂತೆ ಖಾನಾಪುರ ಅವರ ಮಠದಲ್ಲಿ ಸ್ವಲ್ಪ ದಿನ ಉಳಕೊಂಡು ಮುಂದರಿಸಿ ಬರುತ್ತಾ ಶ್ರೀ ಗೋಕರ್ಣಮಠದ ಶ್ರೀ ಪದ್ಮನಾಭ ತೀರ್ಥರನ್ನು ಬಿಳಗಿಯಲ್ಲಿ ಭೇಟಿಯಾಗಿ ಅಲ್ಲಿಂದ ಮುಂದರಿಸಿ ಭಟ್ಕಳಕ್ಕೆ ದಯಮಾಡಿ ಅಲ್ಲಿ ಮುಂಚೆ ಯಾದವೇಂದ್ರ ತೀರ್ಥ ಸ್ವಾಮಿಗಳಿಗೆ ಭಟ್ಕಳದ ಜೋಗಮಲ್ಯರು

ಕೊಟ್ಟ ಹೊಂಡದ ಕೇರಿಯಲ್ಲಿದ್ದ ಮಠವು ಬಹಳ ಜೀರ್ಣವಾಗಿದ್ರಿಂದಲೂ ಮಳೆಗಾಲದಲ್ಲಿ ತುಂಬುವ ನೀರಿನ ದೆಶೆಯಿಂದ ಅಲ್ಲಿಗೆ ಹೋಗಿ ಬರುವದು ಪ್ರಯಾಸವೆಂಬದ್ರಿಂದಲೂ ಆ ಮಠವನ್ನು ರಸ್ತೆಯ ಬದಿಯಲ್ಲಿ ಕಟ್ಟಿಸಬೇಕೆಂತ ಆಲೋಚಿಸಿ ಸ್ಥಳಹುಡುಕುತಿದ್ದಾಗ್ಯೆ ಸಂಸ್ಥಾನದ ಶಿಷ್ಯವರ್ಗದ ಪೈಕಿ ಭಟ್ಕಳದಲ್ಲಿದ್ದ ಚರಡಯ್ಯ ಪ್ರಭುರ ದಾಯಾದಿಯಾಗಿದ್ದ ನಿಸ್ಸಂತತಿಯಾದ ಒಂದು ವಿಧವೆ ಹೆಂಗಸು ಚರಡಯ್ಯ ಪ್ರಭುರು ಒಪ್ಪಿಗೆ ಕೊಟ್ಟರೆ ತನ್ನ ಮನೆಯಡಿ ಸ್ಥಳ ಮತ್ತು ಬೇರೆ ಕೆಲವು ಭೂಮಿಯನ್ನು ಕೂಡಾ ಮಠಕ್ಕೆ ಬಿಟ್ಟು ಕೊಡ್ಲಿಕ್ಕೆ ಒಪ್ಪಿದ್ರಿಂದ ಅವಳ ದಾಯಾದಿ ಚರಡಯ್ಯ ಪ್ರಭುರನ್ನು ಶ್ರೀ ಭುವನೇಂದ್ರ ತೀರ್ಥ ಸ್ವಾಮಿಗಳು ವಿಚಾರಿಸಿದಾಗ್ಯೆ ಚರಡಯ್ಯ ಪ್ರಭುಗಳು ಅವಳ ಮಾತ್ರವಲ್ಲ ತನ್ನ ಆಸ್ತಿಯನ್ನು ಕೂಡಾ ಮಠಕ್ಕೆ ಬಿಟ್ಟುಕೊಡುವ ಸಂದರ್ಭ ಒದಗಿದೆ – ತನಗೆ ಪ್ರಾಯ 60 ವರ್ಷ ಕಳೆದು ತನ್ನ ಪತ್ನಿಗೆ ಪ್ರಾಯ 55 ಆಗುತ್ತಿದ್ದಾಗ್ಯೂ ಇಷ್ಟರವರೆಗೆ ಮಕ್ಕಳಿಲ್ಲದ್ರಿಂದ ತಾನು ಕೂಡಾ ನಿಸ್ಸಂತತಿಯವನಾದ್ರಿಂದ ತನ್ನ ಆಸ್ತಿಯನ್ನು ಕೂಡಾ ಶ್ರೀಪಾದಂಗಳವರಿಗೆ ಒಪ್ಪಿಸುವುದಾಗಿ ಹೇಳಿಕೊಂಡಾಗ್ಯೆ ಶ್ರೀಪಾದಂಗಳವರು ನಿರಾಶರಾಗಬಾರದು, ಸಂತತಿ ಕೊಡುವುದು ಶ್ರೀದೇವರು, ಅವನು ಅನುಗ್ರಹಿಸುವದಾದ್ರೆ ಪ್ರಾಯದ ಆತಂಕವಿಲ್ಲ ಎಂತ ಅಪ್ಪಣೆ ಕೊಡಿಸಿದಾಗ್ಯೆ ಚರಡಯ್ಯ ಪ್ರಭುಗಳು "ಬೇಯಿಸಿದ ಭತ್ತಕ್ಕೆ ಮೊಳೆ ಬರುವುದುಂಟೆ?" ಎಂದರಂತೆ – ಶ್ರೀ ಸ್ವಾಮಿಗಳು ನಾಳೆ ಮಧ್ಯಾಹ್ನ ಶ್ರೀ ಮಠಕ್ಕೆ ಪೂಜೆಯ ಸಮಯ ದಂಪತಿಗಳು ಬರಬೇಕಾಗಿ ಅಪ್ಪಣೆ ಕೊಟ್ಟಂತೆ ಮರುದಿನ ಅವರಿಬ್ಬರೂ ಬಂದಿರುತ್ತಿದ್ದರು.

ಶ್ರೀ ಸ್ವಾಮಿಗಳು ಶ್ರೀ ದೇವರಿಗೆ ನೈವೇದ್ಯ ಮಾಡುವ ಅನ್ನದಿಂದ ಸ್ವಲ್ಪ ಅನ್ನ ತೆಗೆದು ಪಿಂಡ ಮಾಡಿ ಮಂತ್ರರ್ಶಿಸಿ ಶ್ರೀ ದೇವರಿಗೆ ಭಕ್ತಿ ಪೂರ್ವಕ ನಿವೇದಿಸಿ ಇಟ್ಟುಕೊಂಡಿದ್ರಂತೆ. ನೈವೇದ್ಯ ಮಂಗಳಾರತಿ ವಗ್ಯೆರೆ ಮುಗಿಸಿ ತೀರ್ಥ ಪ್ರಸಾದ ವಿತರಣೆ ಮಾಡುವಾಗ್ಯೆ ಚರಡಯ್ಯ ಪ್ರಭು ಮತ್ತವರ ಪತ್ನಿಯನ್ನು ಕರೆದು ಪ್ರಭೂರೀಗೆ ತೀರ್ಥ ಪ್ರಸಾದ ಕೊಟ್ಟು ನಂತ್ರ ಅವರ ಪತ್ನಿಗೆ ತೀರ್ಥ ಕೊಟ್ಟು ಪ್ರಸಾದರೂಪವಾಗಿ ಹೂವು ಗಂಧ ಮಂತ್ರಾಕ್ಷತೆಯೊಡನೆ ಮಂತ್ರರ್ಶಿಸಿಟ್ಟ ಅನ್ನಪಿಂಡವನ್ನು ಕೊಟ್ಟು ಅದನ್ನು ಮನೆಗೆ ಕೊಂಡು ಹೋಗಿ ಭಕ್ಷಿಸಿದ್ರೆ ಒಂದು ವರ್ಷದೊಳಗೆ ಶ್ರೀ ದೇವರು ತೊಟ್ಲು ತೂಗಿಸುತ್ತಾನೆ. ಶ್ರೀ ದೇವರಲ್ಲಿ ಸಂಪೂರ್ಣ ಭಕ್ತಿಯಿಟ್ಟು ಪಿಂಡ ಭಕ್ಷಣೆ ಮಾಡು ಎಂತ ಅಪ್ಪಣೆ ಕೊಟ್ಟರೆಂತಲೂ ಆ ಪ್ರಕಾರ ಅವರಿಗೆ ಗಂಡು ಮಗ ಹುಟ್ಟಿ ಈಗಲೂ ಜೀವಂತರಾಗಿದ್ದಾರೆ. ಅವರ ಹೆಸರು ರಾಮಪ್ರಭು ಎಂತ ಆಗಿರುತ್ತದೆ. ಅವರಿಗೆ ಹುಟ್ಟಿದ ಗಂಡು ಮಕ್ಕಳು ಸಹಾ ಇದ್ದಾರೆ.

ಚರಡಯ್ಯ ಪ್ರಭು ಮತ್ತು ಆ ವಿಧವೆ ಹೆಂಗ್ಸು ಅವರ ಮನೆ ಅಡಿಸ್ಥಳವನ್ನು ಮತ್ತು ಬೇರೆ ಕೆಲವು ಆಸ್ತಿಯನ್ನು ಚರಡಯ್ಯ ಪ್ರಭುರು ಅವರ ಸ್ವಂತದ ಕೆಲವು ಆಸ್ತಿ ಶ್ರೀಪಾದಂಗಳವರಿಗೆ ಸುಮಾರು 1883 ಯಾ 1884ರಲ್ಲಿ ಬಿಟ್ಟು ಕೊಟ್ಟದ್ರಿಂದ ಶ್ರೀಪಾದಂಗಳವರು ಭಟ್ಕಳದಲ್ಲಿ 2 ವರ್ಷಗಳ ಕಾಲ ಉಳಕೊಂಡು ಮಠವನ್ನು ಈಗ ಇರುವ ಸ್ಥಳದಲ್ಲಿ ಹೊಸತಾಗಿ ಕಟ್ಟಸಿದ್ದಲ್ಲದೇ ಶಿರಾಲಿಯಲ್ಲಿರುವ ಶ್ರೀ ಮಹಾಗಣಪತಿ ಮಹಾಮಾಯಾ ದೇವಸ್ಥಾನದಲ್ಲಿ ಮಹಾಮಾಯ ದೇವರ ವಿಗ್ರಹವನ್ನು ಪುನಃ ಪ್ರತಿಷ್ಠೆ ಮಾಡಿದರು.

ಶ್ರೀಪಾದಂಗಳವರು ಭಟ್ಕಳದಲ್ಲಿದ್ದಾಗ್ಯೆ ಒಬ್ಬ ಮುಸಲ್ಮಾನರ ಗಂಡು ಮಗನಿಗೆ ಸರ್ಪದಂಶವಾಗಿ ಆತನು ನಿಶ್ಚೇಷ್ಟಿತನಾಗಿ ಬಿದ್ದಿರುವಾಗ್ಯೆ ಅವನ ತಂದೆ ಶ್ರೀ ಸ್ವಾಮಿಗಳಿಗೆ ಬಹಳ ಹೇಳಿಕೊಂಡು ಮರಕಿದಿಂದ್ರ ಸ್ವಾಮಿಗಳವರ ಔಷಧೋಪಚಾರದಿಂದ ಬದುಕಿಕೊಂಡನಂತೆ. ಶ್ರೀ ಸ್ವಾಮಿಗಳವರು ಭಟ್ಕಳದ ಮಠದ ಕೆಲ್ಸವನ್ನು ಮುಗ್ಸಿ ಹಳೇ ಮಠದಲ್ಲಿದ್ದ ದೇವರನ್ನು ಹೊಸತಾಗಿ ಕಟ್ಟಿಸಿದ ಮಠದಲ್ಲಿ ಪುನಃ ಪ್ರತಿಷ್ಠೆ ಮಾಡಿಸಿ 1886ನೇ ಇಸ್ವಿಯಲ್ಲಿ ಸುಮಾರು ಮೇ ತಿಂಗಳಲ್ಲಿ ಬಸ್ರೂರ ಮಠಕ್ಕೆ ತಮ್ಮ ಶಿಷ್ಯ ಸ್ವಾಮಿಗಳ ಸಮೇತ ದಯಮಾಡಿಸಿದರಂತೆ.

ಬಸ್ರೂರ ಮಠವನ್ನು ಪ್ರವೇಶಿಸಿ ದೇವರ ಪ್ರದಕ್ಷಿಣೆ ಬಂದು ಶ್ರೀ ದೇವರ ಮತ್ತು ಶ್ರೀ ಕೇಶವೇಂದ್ರ ಸ್ವಾಮಿಗಳ ಸಮಾಧಿಯ ಎದ್ರುಗಡೆಯಲ್ಲಿರುವ ಖಾಲಿಸ್ಥಳವೆ ನಮಗೆ ಎಂತ ಅಪ್ಪಣೆ ಕೊಡಿಸಿದ್ರಂತೆ. ಬಸ್ರೂರ ಮಠವನ್ನು ಕೂಡಲೇ ಹೊಸತುಪಡಿಸಲಿಕ್ಕೆ ಪ್ರಾರಂಭಿಸಿ ಕಲ್ಲು ಮತ್ತು ಮರಗಳನ್ನು ಸಂಗ್ರಹಿಸಲು ಪ್ರಾರಂಭಿಸಿದರಂತೆ. ಆ ವರ್ಷದ ಒಕ್ಟೋಬರ್ ತಿಂಗಳಲ್ಲಿ ಅವರೀಗೆ ಸಣ್ಣ ಕಾಯಿಲೆ ಪ್ರಾರಂಭಿಸಿ ಅದೇ ವ್ಯಯ ಸಂ।ರದ ಮಾರ್ಗಶಿರ ಶು 1ದ ದಿವಸ (1886ನೇ ನವಂಬರ್ ತಾ. 26ನೇ ಶುಕ್ರವಾರ) ಪಾರ್ಥಿವ ಶರೀರವನ್ನು ವಿಸರ್ಜಿಸಿ ಪರಂಧಾಮವನ್ನೈದು ಅವರು ಮುಂಚೆ ತೋರಿಸಿದ ಸ್ಥಳದಲ್ಲಿಯೇ ಸಮಾಧಿಸ್ಥರಾದರು. ಆಗ್ಯೆ ಅಲ್ಲಿ ಹಾಜರಿದ್ದ ಅವರ ಶಿಷ್ಯ ಶ್ರೀವರದೇಂದ್ರತೀರ್ಥರು ಅವರ ಉತ್ತರಕಾರ್ಯಗಳನ್ನು ಅತೀವ ವಿಜೃಂಭಣೆಯಿಂದ ಮುಗ್ಸಿದ್ದಲ್ಲದೇ ಅವರು ಪ್ರಾರಂಭಿಸಿದ ಬಸ್ರೂರ ಮಠದ ಕಟ್ಟಡಗಳನ್ನು ಪೂರ್ಣಪಡಿಸಿದರು.

ಈ ಮೇರೆಗೆ ಬಸ್ರೂರ ಶ್ರೀ ಕಾಶೀಮಠದಲ್ಲಿ ಮೊದಲಿದ್ದ ಶ್ರೀ ಕೇಶವೇಂದ್ರ ತೀರ್ಥರ ಹಳೆ ವೃಂದಾವನದ ಎದುರಲ್ಲಿ ಶ್ರೀ ಭುವನೇಂದ್ರ ತೀರ್ಥ ಸ್ವಾಮಿಗಳವರ ವೃಂದಾವನ ಸ್ಥಾಪಿತವಾಯಿತು. ಶ್ರೀ ಭುವನೇಂದ್ರ ತೀರ್ಥರು ಸಂಸ್ಕೃತದಲ್ಲಿ

ಮಹಾಪಂಡಿತರು ಹಾಗೂ ವೈದ್ಯಶಾಸ್ತ್ರದಲ್ಲಿಯೂ ಪ್ರವೀಣರು. ಮಹಾವೈರಾಗ್ಯ ಸಂಪನ್ನರು. ಸಂಪೂರ್ಣ ಸಾತ್ವಿಕ ಸ್ವಭಾವದವರು. ದಯಾರ್ದ್ರರು ಮತ್ತು ದೇವರಲ್ಲಿ ಬಹಳ ಭಕ್ತಿಯುಳ್ಳವರಾದ್ದರಿಂದ ಅವರ ಬಾಯಿಯಿಂದ ಉಚ್ಚರಿಸಲ್ಪಟ್ಟ ಮಾತುಗಳನ್ನು ಶ್ರೀ ದೇವರು ನಡಿಸಿದ್ದಾನೆ. ನಿಸ್ಸಂತತಿಯಾದವರಿಗೆ ಪಿಂಡಗಳನ್ನು ಮಂತ್ರರ್ಶಿಸಿ ಕೊಟ್ಟದ್ದರಿಂದ ಅನೇಕರಲ್ಲಿ ಸಂತಾನೋತ್ಪತ್ತಿಯಾಗಿದೆ. ಕಾರ್ಕಳದಲ್ಲಿ ಶ್ರೀಮಂತರಾಗಿದ್ದ ಕುಕ್ಕುಂದೂರ ಪದ್ಮನಾಭ ಕಾಮತರಿಗೆ ಸಂತಾನವಿಲ್ಲದಿರುವಾಗ್ಯೆ ಅವರು ಅನುಗ್ರಹಿಸಿದ ಮಂತ್ರಪಿಂಡದಿಂದ ಸಂತಾನವಾದ್ದಂತೆ – ಪದ್ಮನಾಭ ಕಾಮತರು ಸಂಸ್ಕೃತ ಪಾಠಶಾಲೆ ಸ್ಥಾಪಿಸುವ ಬಗ್ಗೆ ಪಾದಕಾಣಿಕೆ ಮಾಡಿದ ರೂಪಾಯಿ ಹತ್ತು ಸಾವಿರವನ್ನು ಅವರ ಹತ್ತವೇ ವಾಪ್ಸು ಕೊಟ್ಟು ವೃದ್ಧಿಸಿ ಪಾಠಶಾಲೆ ಮಾಡಬೇಕಾಗಿ ಅಪ್ಪಣೆಕೊಟ್ಟಂತೆ ಅವರ ಮಗ ಸುಬ್ರಾಯ ಕಾಮತರು ವೃದ್ಧಿಸಿ ಪಾಠಶಾಲೆ ಮಾಡಿದರಂತೆ.

ಶ್ರೀಭುವನೇಂದ್ರ ತೀರ್ಥರು. ಸಮಾಜದ ಉದ್ಧಾರಕ್ಕಾಗಿ ಬಹಳ ಶ್ರಮಪಟ್ಟಿದ್ದಾರೆ. ಅವರೊಡನೆ ದೊಡ್ಡ ಪುಸ್ತಕ ಸಂಗ್ರಹವಿತ್ತು. ಆ ಸಂಗ್ರಹಕ್ಕೆ ಅವರ ಶಿಷ್ಯರಾದ ಶ್ರೀಮದ ವರದೇಂದ್ರ ತೀರ್ಥಸ್ವಾಮಿಗಳು ಅನೇಕ ಪುಸ್ತಕಗಳನ್ನು ಸೇರಿಸಿ ಬಸ್ರೂರಲ್ಲಿ ಶ್ರೀ ಭುವನೇಂದ್ರ ಗ್ರಂಥ ಸಂಗ್ರಹಾಲಯವೆಂಬದೊಂದು ಕಟ್ಟಡ ಕಟ್ಟಿಸಲಿಕ್ಕೆ ಆಲೋಚಿಸಿ ಶ್ರೀ ಮಠದ ಸಮೀಪದಲ್ಲಿ ನೆಲವನ್ನು ಸರಿಪಡಿಸಿ ಇಟ್ಟದ್ದು ಹಾಗೆಯೇ ಉಂಟು. ಈ ಬಸ್ರೂರ ಮಠವನ್ನು ಮತ್ತು ಭಟ್ಕಳ ಮಠವನ್ನು ವಿದ್ಯಮಾನ ಸ್ವಾಮಿಗಳವರಾದ ಶ್ರೀ ಸುಧೀಂದ್ರತೀರ್ಥರು ಒಂದೆರಡು ವರ್ಷಗಳ ಈಚೆಗೆ ಸಂಪೂರ್ಣವಾಗಿ ಹೊಸತು ಪಡಿಸಿದರು.

ಹಾಗೆಯೇ ಶ್ರೀ ಕೇಶವೇಂದ್ರ ತೀರ್ಥ ಸ್ವಾಮಿಗಳವರ 2ನೇ ಶಿಷ್ಯರಾದ ಶ್ರೀ ಯಾದವೇಂದ್ರ ತೀರ್ಥ ಸ್ವಾಮಿಗಳ ಸಮಾಧಿಯಿರುವ ಬಸ್ರೂರಿಂದ 4 ಮೈಲು ದೂರದಲ್ಲಿರುವ ಹೆಮ್ಮಾಡಿ ಮಠವನ್ನು ಸುಮಾರು 10 ವರ್ಷಗಳ ಹಿಂದೆ ವಿದ್ಯಮಾನ ಸ್ವಾಮಿಗಳವರು ಹೊಸತು ಪಡಿಸಿದ್ದುಂಟು– ಈ ಬಸ್ರೂರು ಮಠದ ಸುತ್ತುವರಿಯಲ್ಲಿ ಮಠದ ಹಕ್ಕಿನ ಸುಮಾರು 15 ಎಕ್ರೆ ಸ್ಥಳವಿದೆ. ಹೀಗಿರುವುದರಿಂದ ಇಲ್ಲಿರುವ 2 ಸ್ವಾಮಿಗಳ ಸಮಾಧಿಗಳ ರಕ್ಷಣೆಯಲ್ಲಿ ಶ್ರೀ ಭುವನೇಂದ್ರ ಬಾಲಕಾಶ್ರಮವನ್ನಾಗಲೀ ಗ್ರಂಥಾಲಯವನ್ನಾಗಲೀ ಸ್ಥಾಪಿಸಿ ಅವರ ಸ್ಮರಣೆಯನ್ನು ಜೀವಂತಗೊಳಿಸುವದು ತುಂಬಾ ಶ್ರೇಯಸ್ಕರವಾಗಿದೆ ಹಾಗೂ ಬಸ್ರೂರಿನ ಅಭಿವೃದ್ಧಿಗೂ ಸಾಧಕವಾಗಿದೆ.

ಬಸ್ರೂರಿನಲ್ಲಿ ಮುಂಚೆ ಇರುತ್ತಿದ್ದ ಸ್ಥಿತಿಯನ್ನು ಮೇಲೆ ವಿವರಿಸಿದ್ದೇನೆ. ಅದರಲ್ಲಿ ಹೇಳಿದಂತೆ 1544ರ ಸಮಯ ಬಸ್ರೂರಿಗೆ ಬಂದು ನೆಲಸಿದ ನಮ್ಮ ಜನರು ಊರಿನ ಹೊರಗೆ ಪೂರ್ವಭಾಗಗಳಲ್ಲಿ ವಸತಿಮಾಡಿಕೊಂಡಿದ್ದರಷ್ಟೆ ಸುಮಾರು 1700ನೇ ಇಸ್ವಿಯ ನಂತ್ರ ಊರಲ್ಲಿ ಒಳಗೆ ವಾಸಿಸಿದ್ದವರು ಅವರವರು ವಾಸಿಸಿರುತ್ತಿದ್ದ ತಮ್ಮ ಮನೆಗಳನ್ನು ಮಾರಾಟ ಮಾಡಿ ಪರ ಊರುಗಳಿಗೆ ಹೋಗಲು ಪ್ರಾರಂಭಿಸಿದಾಗ್ಯೆ ಅಂಥವರ ಮನೆಗಳಿದ್ದ ಸ್ಥಳಗಳನ್ನು ನಮ್ಮ ಜನರು ಕ್ರಯಕ್ಕೆ ಪಡೆದು ತಮ್ಮ ತಮ್ಮ ಮನೆಗಳನ್ನು ಮತ್ತು ಅವರವರ ಕುಲದೇವರಾದ ಶ್ರೀ ದಾಮೋದರ, ಶ್ರೀ ಶಾಂತೇರಿ ಕಾಮಾಕ್ಷಿ ರಾಮನಾಥ ಮತ್ತು ಮಹಾಲಸಾ ನಾರಾಯಣಿಯೆಂಬ ಮೂರು ದೇವಸ್ಥಾನಗಳನ್ನು ಊರೊಳಗೆ ಕಟ್ಟಿಸಿದ್ದಲ್ಲದೇ ಊರಿನ ಹೊರಗಿನ ಮುಂಚಿನ ವಸತಿಯಲ್ಲಿ ಉಳಿದ "ಶ್ರೀ ವರದರಾಜವೆಂಕಟರಮಣ ದೇವಸ್ಥಾನ" ದ ಪ್ರಧಾನ ದೇವರ ವಿಗ್ರಹಗಳನ್ನು ಶ್ರೀ ಕಾಶೀಮಠದಲ್ಲಿಯೂ ಉತ್ಸವಮೂರ್ತಿಗಳನ್ನು ಶ್ರೀ ಗೋಕರ್ಣ ಮಠದಲ್ಲಿಯೂ ತಂದಿಟ್ಟು ಆ ದೇವರ ಬಗ್ಗೆ ಹೊಸ ದೇವಸ್ಥಾನ ಕಟ್ಟಿಸಬೇಕೆಂತ ಆಲೋಚಿಸುತ್ತಿರುವಾಗ್ಯೆ ಶ್ರೀ ಕಾಶೀಮಠದ ಶ್ರೀ ಮಾಧವೇಂದ್ರ ತೀರ್ಥ ಸ್ವಾಮಿಗಳವರು ಬಸ್ರೂರಿಗೆ ಬಂದವರು ಇನ್ನು ಬಸ್ರೂರಿನಲ್ಲಿ ಹೊಸ ದೇವಸ್ಥಾನ ಕಟ್ಟುವ ಅಗತ್ಯವಿಲ್ಲ, ಇದ್ದ ದೇವಸ್ಥಾನ ವ ಮಠಗಳೇ ಸಾಕು, ಗುರುಪುರದಲ್ಲಿ ದೇವಸ್ಥಾನವಿಲ್ಲದೇ ಅಲ್ಲಿಯವರು ಹೊಸತಾಗಿ ದೇವಸ್ಥಾನ ಕಟ್ಟಲಿಕ್ಕೆ ಪ್ರಾರಂಭಿಸಿದ್ದಾರೆ, ಇಲ್ಲಿರುವ ನಿಮ್ಮ ದೇವರನ್ನು ಅವರೀಗೆ ಕೊಟ್ಟು ಪ್ರತಿಷ್ಠಿಸುವುದು ಅನುಕೂಲವೆಂತ ಅಪ್ಪಣೆ ಕೊಟ್ಟದ್ರಿಂದ ಬಸ್ರೂರಿನ ಹತ್ತು ಸಮಸ್ತರು ಆ ದೇವರ ಅರ್ಚಕರೊಡನೆ ಆಲೋಚಿಸಿ ಅವರ ಅಭಿಪ್ರಾಯದಂತೆ ಶ್ರೀ ವರದರಾಜವೆಂಕಟರಮಣ ದೇವರನ್ನು ಅದರ ಮುಂಚಿನ ಅರ್ಚಕರ ಸಮೇತ ಗುರುಪುರದವರು ಅಲ್ಲಿ ತೆಗೆದುಕೊಳ್ಳಲಿಕ್ಕೆ ಒಪ್ಪುವದಾದರೆ ಕೊಡಬಹುದೆಂತ ಮಾಡಿದ ವಿಜ್ಞಾಪನೆಯಂತೆ ಶ್ರೀ ಸ್ವಾಮಿಗಳವರು ಗುರುಪುರದ ಗೃಹಸ್ಥರನ್ನು ಬಸ್ರೂರಿಗೆ ಕರೆಯಿಸಿ ಇಲ್ಲಿಯವರ ಅಭಿಪ್ರಾಯ ತಿಳಿಯಪಡಿಸಿದಾಗ್ಯೆ ಅವರು ಸಂತೋಷಪಟ್ಟು ಒಪ್ಪಿದ್ರಿಂದ ಶ್ರೀ ಮಾಧವೇಂದ್ರ ತೀರ್ಥ ಸ್ವಾಮಿಗಳವರು ಈ ಮೂರ್ತಿಗಳನ್ನು ಗುರುಪುರಕ್ಕೆ ಒಯಿದು ಅಲ್ಲಿ ಪ್ರತಿಷ್ಠೆ ಮಾಡಿದರಂತೆ. ಇದು ಸುಮಾರು ಕ್ರಿ. ಶ. 1743–1744ರಲ್ಲಿ ಆಗಿರಬಹುದೆಂತ ಕಾಣುತ್ತದೆ.

ಇದಾಗುವ ಸ್ವಲ್ಪ ಕಾಲದ ಮುಂಚೆ ಬಸ್ರೂರ ಪೇಟೆ ಮಧ್ಯದಲ್ಲಿ 'ವೆಂಕಟೇಶ ಪ್ರಭು' ಎಂಬವರು "ಶ್ರೀ ಹನುಮಂತ" ದೇವರನ್ನು ಪ್ರತಿಷ್ಠಿಸಿದರೆಂತ ಕಂಡುಬರುತ್ತಿದೆ. ಕಾಲಕ್ರಮೇಣ ಬಸ್ರೂರಿನಲ್ಲಿ ಜನಸಂಖ್ಯೆ ಕಡಿಮೆಯಾಗುತ್ತಾ ಬಂದು ನಮ್ಮವರು ಅನೇಕರು ಈ ಊರು ಬಿಟ್ಟು ಜೀವನೋಪಾಯಕ್ಕಾಗಿ ಬೇರೆ ಬೇರೆ ಊರುಗಳನ್ನು ಸೇರಿಕೊಂಡರು.

ಈಗ ಬಸ್ರೂರಿನಲ್ಲಿ ನಮ್ಮ ಜನರದ್ದು ಅಗ್ರಹಾರಗಳಲ್ಲಿ ದೊಡ್ಡ ಕೆರೆಗಳು 2 ಹೊರಗೆ 1 ಹೀಗೆ 3 ಕೆರೆಗಳು 1. ಶ್ರೀ ಕಾಶೀಮಠ 2. ಗೋಕರ್ಣಮಠ 3. ಶ್ರೀ ಕಾಶೀಮಠದ ಎದುರಿನಲ್ಲಿರುವ ಶ್ರೀ ರಾಮಚಂದ್ರ ದೇವಸ್ಥಾನ 4. ಪೇಟೆಯಲ್ಲಿರುವ ಶ್ರೀ ಹನುಮಂತ ದೇವಸ್ಥಾನ 5. ಶ್ರೀ ಮಹಾಲಸಾ ನಾರಾಯಣಿ ದೇವಸ್ಥಾನ 6. ಶ್ರೀ ಶಾಂತೇರಿ ಕಾಮಾಕ್ಷಿ ದೇವಸ್ಥಾನ 7. ಶ್ರೀ ದಾಮೋದರ ದೇವಸ್ಥಾನ ಹೀಗೆ 7 ದೇವಸ್ಥಾನಗಳುಂಟು. ಈ ಪೈಕಿ 3ನೇ ದೇವಸ್ಥಾನಕ್ಕೆ ರೂಪಾಯಿ 19–00 ಮತ್ತು 4ನೇ ದೇವಸ್ಥಾನಕ್ಕೆ ರೂ. 14–00 ಸಹಾ ಸರಕಾರದಿಂದ ತಸ್ತಿಕು ಸಿಕ್ಕುತ್ತದೆ. ಮೇಲೆ ಕಾಣಿಸಿದ 7 ದೇವಸ್ಥಾನದಲ್ಲಿರುವ ವೈದಿಕ ಅರ್ಚಕರ ಬಿಡಾರಗಳ ಹೊರತಾಗಿ ಊರಿನಲ್ಲಿ ನಮ್ಮ ಜನರ ಮನೆಗಳು 23 ಇರುತ್ತದೆ. ದ್ರಾವಿಡ ಬ್ರಾಹ್ಮಣರ ಮನೆಗಳು ಸುಮಾರು 40 ಇರಬಹುದು.

ಇಲ್ಲಿ ಮುಂಚೆ ಪ್ರಥಮದ ಕನ್ನಡ ಜಿಲ್ಲಾ ಕಲೆಕ್ಟರರಾದ ಕೇಪ್ಟನ್ ಮನ್ರೋ ದೊರೆಯ ಖಚೇರಿ ಇತ್ತು. ಅವರೇ ಕಲ್ಲಿನಿಂದ ಕಟ್ಟಿಸಿದ ಆಳವಾದ ಅಗಲವಾದ Munro Well ಎಂತ ಕರೆಯುವ ಬಾವಿಯುಂಟು. 18ನೇ ಇಸ್ವಿಯಲ್ಲಿ ಶ್ರೀ ಕಾಶೀಮಠದ ಶ್ರೀ ಸುರೇಂದ್ರತೀರ್ಥ ಶ್ರೀಪಾದಂಗಳವರು ಬಿರುದು ಬಾವಲಿಗಳ ಸಮೇತ ಮಲಬಾರ ಕಡೆಯಿಂದ ಮಂಜೇಶ್ವರಕ್ಕೆ ಬರುತ್ತಿದ್ದಾಗ್ಯೆ – ಶೃಂಗೇರಿ ಮಠದವರು ಮತ್ತು ಉಡುಪಿಯ 8 ಮಠಗಳವರು ತಕರಾರು ಮಾಡಿ ಆ ತಕರಾರಿನ ಕುರಿತು ಎಲ್ಲಾ ಮಠದವರಿಗೆ ಬಸ್ರೂರಿಗೆ ಬರುವಂತೆ ಕಲೆಕ್ಟರರಾದ ಮನ್ರೋ ದೊರೆಗಳು ನೋಟೀಸು ಕೊಟ್ಟು ಕರೆಯಿಸಿ ದರ್ಯಾಪ್ತು ಮಾಡಿ ಆಗಿನ ಸುಮತೀಂದ್ರ ಮಠ ಅಂದ್ರೆ ಈಗ ಶ್ರೀ ರಾಘವೇಂದ್ರ ಸ್ವಾಮಿಗಳ ಮಠವೆಂತ ಕರೆಯಲ್ಪಡುವ ಮಠಕ್ಕೆ ಇರುವ ಬಿರುದುಗಳನ್ನು ಧರಿಸಿಕೊಳ್ಳುವ ಅಧಿಕಾರ ಶ್ರೀ ಕಾಶೀಮಠಕ್ಕೆ ಉಂಟೆಂತ ತಾರೀಕು 20–6–1800ನೇ ದಿನ ತೀರ್ಮಾನಿಸಿ ಇಡೀ ಕಾನಡಾ ಜಿಲ್ಲೆಯಲ್ಲಿ ಪ್ರಕಟಿಸುವಂತೆ ಕೊಟ್ಟ ತೀರ್ಪು ಶ್ರೀ ಕಾಶೀಮಠದಲ್ಲಿದೆ.

ಮನ್ರೋ ದೊರೆಯ ಕಚೇರಿ ಸ್ಥಳದಲ್ಲಿ ಈಗ ಬಸ್ರೂರ ಹಿಂದು ಹಾಯರ ಎಲಿಮೆಂಟರಿ ಶಾಲೆ ಇದೆ. ಇದು ಖಾಸಗಿಯಾಗಿ ನಡೆಸಲ್ಪಡುವ ಶಾಲೆಯಾಗಿ ಇದರ ಕೆಳಗಿನ ಕ್ಲಾಸುಗಳ ಮಕ್ಕಳ ವಿದ್ಯಾಭ್ಯಾಸಕ್ಕಾಗಿ ಇದರ ಶಾಖೆಯು ಇದೇ ಊರಿನ ಮೂಡಕೇರಿಯಲ್ಲಿ ಇದೆ. ಇದಲ್ಲದೇ ಪ್ರೈಮರಿ ಕ್ಲಾಸುಗಳ ಬಗ್ಗೆ 1 ಮಿಶನ್ ಶಾಲೆ ಮುಸಲ್ಮಾನರ ಬಗ್ಗೆ ಬೋರ್ಡಿನಿಂದ ನಡೆಸಲ್ಪಡುವ ಪ್ರೈಮರಿ ಶಾಲೆ, ಮತ್ತು ಇತ್ತೀಚೆಗೆ ಊರವರು ಕಟ್ಟಿಸಿಕೊಟ್ಟಿರುವ ಕಟ್ಟಡ ಸಮೇತ ಇರುವ ಸುಮಾರು 6 ಎಕ್ರೆ ಸ್ಥಳದಲ್ಲಿ ಬೋರ್ಡಿನಿಂದ ನಡೆಸಲ್ಪಡುವ ಹೈಸ್ಕೂಲ್ ಕೂಡಾ ಉಂಟು. ಸರಕಾರದವರು ಸ್ವಾತಂತ್ರ್ಯ ಹೊಂದಿದ ನಂತ್ರ ರೇಡಿಯೋ ಇಡುವಗೋಸ್ಕರ ಒಂದು ಕಟ್ಟಡ ಮತ್ತು ಮೆಟರ್ನಿಟಿ

ಹೋಮ ಎಂಬ ಹೆರಿಗೆ ಕಟ್ಟಡ ಸಹಾ ಕಟ್ಟಿಸಿದ್ದುಂಟು. ಊರಿನಲ್ಲಿ ಶ್ರೀ ಮಹಾಲಿಂಗೇಶ್ವರ ದೇವಸ್ಥಾನದಲ್ಲಿ ವರ್ಷಂಪ್ರತಿ ರಥೋತ್ಸವ ದೀಪೋತ್ಸವ ವಗೈರೆ ನಡೆಯುತ್ತಿದೆ. ಕ್ರೈಸ್ತರಿಗೆ ಪ್ರೊಟೆಸ್ಟಾಂಟರ ಇಗರ್ಜಿ, ರೋಮನ ಕೆಥೋಲಿಕರಿಗೆ ಇನ್ನೊಂದು, ಮುಸಲ್ಮಾನರಿಗೆ ಜುಮ್ಮಾ ಮಹಜೀದೀ ಮತ್ತು ಇತರ ಹಿಂದು ದೇವಸ್ಥಾನಗಳು 15 ಸಹಾಯಿವೆ. ಊರು ದೊಡ್ಡದಾಗಿ 7 ಕೇರಿಗಳುಂಟು. ಎಲ್ಲಾ ಜಾತಿಯವರು ಸೇರಿ ಸಂಖ್ಯೆ 3000 ಇರಬಹುದು.

ಶ್ರೀ ಕಾಶೀಮಠದ ಉತ್ತರಕ್ಕೆ ಶ್ರೀ ಆದಿನಾಥೇಶ್ವರ ದೇವಸ್ಥಾನವೂ, ಪೂರ್ವಕ್ಕೆ ಶ್ರೀ ರಾಮಚಂದ್ರ ದೇವಸ್ಥಾನವೂ, ಸಮೀಪದಲ್ಲಿಯೇ ಹಿಂದು ಹಾಯರ ಎಲಿಮೆಂಟರಿ ಶಾಲೆ, ಮಿಶನ್ ಶಾಲೆ, ಬೋರ್ಡ್ ಹೈಸ್ಕೂಲ್ ಮತ್ತು ಗೋಕರ್ಣ ಮಠ ಸಹಾ ಇದ್ದಾಗ್ಯೂ ಮಧ್ಯದಲ್ಲಿ ತುಂಬಾ ಕಾಶೀಮಠದ ಖಾಲಿ ಸ್ಥಳ ಮತ್ತು ಸರ್ಕಾರಿ ಸ್ಥಳ ಕೂಡಾ ಇರುತ್ತದೆ. ಮಠದಸಮೀಪದಲ್ಲಿ ಮೂಡ್ಕೆರಿಕೆರೆ ಮತ್ತು 1 1/2 ಫರ್ಲಾಂಗ ಉತ್ತರದಲ್ಲಿ ವಾರಾಹಿ ಎಂಬ ದೊಡ್ಡ ಹೊಳೆ ಸಹಾ ಇರುತ್ತದೆ. ಈ ಹೊಳೆಯು ಪಶ್ಚಿಮಕ್ಕೆ ಹೋಗುವಲ್ಲಿ ಈ ಹೊಳೆಗೆ "ಮಾಂಡವಿ" ಎಂಬದಾಗಿ ಗೋವೆಯಿಂದ ಬಂದು ನೆಲಸಿದ ನಮ್ಮವರು ಇಟ್ಟ ಹೆಸರು. ಈಗ ಪೂರ್ವ ಪಶ್ಚಿಮ ಮೈಲುವರೇಗೆ ಕಾಯಂ ಆಗಿ ನಡೆಯುತ್ತಿದೆ. "ಮಾಂಡವಿ" ಎಂಬ ಹೆಸರಿನ ದೊಡ್ಡ ಹೊಳೆಯು ಗೋವಾ ರಾಜ್ಯ ಮುಖ್ಯ ಪಟ್ಟಣದಿಂದ ಪಂಜಿಮ ಶಹರಿಗೆ ತಾಗಿ ಉತ್ತರಕ್ಕಿರುವದ್ರಿಂದ ಅಲ್ಲಿಂದ ಬಂದವರು ಬಸ್ರೂರಲ್ಲಿ ಉತ್ತರಕ್ಕಿರುವ ಈ ನದಿಗೆ ಆ ಹೆಸರಿಟ್ಟರೆಂತ ತಿಳಕೊಳ್ಳಬಹುದು. ಈ ನದಿಯು ಇಲ್ಲಿಂದ ಸುಮಾರು 3 1/2 ಮೈಲು ಪಶ್ಚಿಮಕ್ಕೆ ಬೇರೆ ನದಿಗಳ ಕೂಡುವಿಕೆಯಿಂದ ಸಮುದ್ರಕ್ಕೆ ಸೇರುವಲ್ಲಿ ಗಂಗಾವಳಿ ಎಂಬ ಹೆಸರಿನ ಬಂದರ ಈಗ ಉಂಟಾಗಿದೆ. ಮುಂಚೆ ಈ ನದಿಯು ಬಹಳ ಕಂತವಾಗಿರುವುದರಿಂದ ಬಸ್ರೂರ ವರೆಗೆ ದೊಡ್ಡ ಹಡಗುಗಳು ಬರುತ್ತಿದ್ದು ಬಸ್ರೂರೇ ಬಂದರಾಗಿತ್ತು. ಕ್ರಮೇಣ ಈ ಹೊಳೆಗೆ ಘಟ್ಟದಿಂದ ಮಳೆಗಾಲದಲ್ಲಿ ಹರಿದು ಬಂದ ಮಣ್ಣು ತುಂಬಿ ಈಗ ದೊಡ್ಡ ದೋಣಿಗಳು ಹೋಗುವದೇ ಕಷ್ಟವಾಗಿದೆ. ಈಗ ಈ ಊರಿಗೆ ಮೋಟರ್ ಬಸ್ಸುಗಳು ಲೋರಿಗಳು ನಡೆದಾಡುವುದರಿಂದ ಇಲ್ಲಿಂದ ಮಂಗ್ಳೂರಿಗೆ ಸೀದಾ ಹೋಗುವ ಅನುಕೂಲ ಉಂಟಾಗಿದೆ. ಈಗ ಕುಂದಾಪುರದಲ್ಲಿ ಈ ಹೊಳೆಗೆ ಅಡ್ಡವಾಗಿ ಸೇತುವೆಗಳನ್ನು ಮಾಡುತ್ತಿರುವುದರಿಂದ 2 ವರ್ಷಗಳ ನಂತರ ಇಲ್ಲಿಂದ ಸೀದಾ ಭಟ್ಕಳ ಹೊನ್ನಾವರ ಕಾರ್ವಾರಗಳಿಗೆ ಹೋಗಲು ಅನುಕೂಲವಾಗುತ್ತದೆ. ಒಟ್ಟಾರೆಯಿಂದ ಹೇಳುವುದಾದರೆ

ಈಗ ಈ ಊರಿನಲ್ಲಿ ಶಾಂತವಾದ ಹಳ್ಳಿಯ ವಾತಾವರಣವೂ ಪಟ್ಟಣದ ಅನುಕೂಲತೆಗಳೂ ಇವೆ.

ಆದುದರಿಂದ ಇಲ್ಲಿಯ ಶಾಂತ ವಾತಾವರಣದಲ್ಲಿ ಶ್ರೀ ಕಾಶೀಮಠದಲ್ಲಿ "ಶ್ರೀ ಭುವನೇಂದ್ರ ಬಾಲಕಾಶ್ರಮ"ವನ್ನು ಶ್ರೀಮತ್ ಸುಧೀಂದ್ರತೀರ್ಥ ಶ್ರೀಪಾದಂಗಳವರು ಸ್ಥಾಪಿಸಲು ಆಲೋಚಿಸಿರುವುದು ಎಲ್ಲಾ ದೃಷ್ಟಿಯಿಂದಲೂ ಅತ್ಯಂತ ಯೋಗ್ಯವಾಗಿದೆ.

(ಟೇಬಲ್)

..............copper plaque - disciple -----Raghunandan Tirth Vader the disciple of ---Mithra Vader the disciple of ---Mithra Vader in favour of nermost beloved Yadavendra Tirtha Vader Konkanastha Kashimath page 15 granting

2. Original Rayasapathra Sri Surendra Tirtha on 2nd day of dark half of the month Magha of the year Plava (saka year 1463) AD Page 4A

3. Gift deed executed on Monday 15th (full moon ) of Vaishakha of the year Parabhava (sakha 1529) granted by Joga Mallya, Son of Anantha Mallya of Bhatkal in favour of Shree Yadavendra Tirtha Shripad Vader desciple of Sree Vijayendra Thirtha Vader. The disciple of Surendra Tirtha Sripad Vader in respect of a Temple known as Tirumala and some other lands page 18 Tirtha Sripad copper plate inscription by Sathabhinava Tirtha Sripad Vader (of the Uttaradi Math) in favour of Raghavendra Thirtha disciple of Upendra Thirtha Sripad Vader (Kashi Math) on the 5th of dark half of the year Durmathi Saka 1643 granting all the Peraefermiyas by Uttaradi math with the power of performing mudra dharana etc. as exercised by him hither to etc.

ಶಾಲಿವಾಹನ ಶಕ 1472ನೇ ಸೌಮ್ಯ ಸಂ।ರದ ಆಶಾಢ ಬ 5 ಯು ಇಂದುವಾರ ಶ್ರೀ ಮನ್ಮಹಾಮಂಡಲೇಶ್ವರ ಸಾಳುವ ಕೃಷ್ಣ ದೇವರಸರು ಲೋಟವರಿ (ಲೋಟರ್ರಿ)

ಗ್ರಾಮದ ವತ್ಸ ಗೋತ್ರದ ಸಾಂತು ಕಿಣಿಯರ ಮಗ ನರ್ಸಕಿಣಿಯವರಿಗೆ ಹೆಗ್ರೆ ಗ್ರಾಮವನ್ನು ಅರಸರಿಗೆ ಆ ಗ್ರಾಮಕ ಹಡವ ಕಾಣಿಕೆಯನ್ನು ಕೊಟ್ಟು ಪಡಕೊಂಡರೆಂತ ಕಾಣುವ ದಸ್ತೈವಜಿನ ನಕ್ಲು –

ಮತ್ತು ಗೋಕರ್ಣದಲ್ಲಿ ಕೋಟಿತೀರ್ಥದ ತೆಂಕಲು ಇರುವ ಮಠವನ್ನು ಮೇಲೆ ಹೇಳಿದ ಅರಸರು ಶಕ 1573ನೇ ಸಾಧಾರಣ ಸಂ।ರದ ಜೇಷ್ಠ ಬ5ಲ್ಲು ಸದ್ರಿ ನರ್ಸಕಿಣಿಯರಿಗೆ ಮೂಲಸಾಧನ ಪತ್ರ ಬರೆದುಕೊಟ್ಟರು.

ಸದ್ರಿ ಹೆಗೆರೆ ಭೂಮಿ ಮತ್ತು ಮೇಲೆ ಹೇಳಿದ ಮಠವನ್ನು ಗೋಕರ್ಣಮಠದ ಜೀವೋತ್ತುಮ ತೀರ್ಥರಿಗೆ ದಾನಶಾಸನ ಬರಕೊಟ್ಟರು ಎಂತ ಗೋಕರ್ಣ ಮಠದಲ್ಲಿರುವ ರಿಕಾರ್ಡುಗಳಿಂದ ಕಾಣುತ್ತದೆ. ಅದರ ನಕ್ಲು ಅಥವಾ ಕಾಲ ಮಠದ ರೆಕಾರ್ಡಿನಲ್ಲಿ ಇಲ್ಲ.

ಬ್ರಹತ ಜೀವೋತ್ತಮ ತೀರ್ಥರು ಶಕವರ್ಶ 1522ರ ಮುಂಚೆ (ವಾದಿರಾಜ ತೀರ್ಥರ ಮುಕ್ತಿ 1522ರಲ್ಲಿ) ಅವರ ಶಿಷ್ಯರಾದ ಜೀವೋತ್ತುಮ ತೀರ್ಥರ ಹೆಸರಿನಲ್ಲಿದ್ದ ಪಾರ್ಶಿ ಬರಹದ ದಾಖ್ಲೆಗಳು 1540 ಶಕ)ರಿಂದ ಸಿಕ್ಕುತ್ತವೆ. ಅವರು ಮುಕ್ತರಾದದ್ದು ಶಕ 1560ನೇ ಕಾರ್ತಿಕ ಬ 7 ಯೆಂಬುದು ದಾಖ್ಲೆಯಿಂದ ಕಂಡುಬರುತ್ತದೆ. ಅವರ ದಾಖ್ಲೆಗಳಲ್ಲಿ ಯಾವುದರಲ್ಲಿಯೂ ಅವರ ಗುರುಗಳ ಹೆಸರು ಕಾಣುವುದಿಲ್ಲ.

ಶಾ. ಶಕ 1512ರಲ್ಲಿ ಕೊಚ್ಚಿ ದೇವಸ್ಥಾನದಲ್ಲಿ ಆದ ಸಭೆಗೆ ಚಿಕ್ಕ ಜೀವೋತ್ತಮ ಸ್ವಾಮಿಗಳ ಅನುವಾದ ಪ್ರಕಾರ ಭಟ್ಕಳದ ಪ್ರತಿನಿಧಿಗಳು ಹೋಗಿದ್ದರೆಂತ ಕಾಣುವದ್ರಿಂದಲೂ ಅವರ ಗುರುಗಳು ದೊಡ್ಡ ಜೀವೋತ್ತಮರು ಅದ್ರ ಮುಂಚೆಯೇ ಮುಕ್ತರಾಗಿರಬಹುದೆಂಬಂತೆ ಕಾಣುತ್ತದೆ.

ಅಣುಜೀವೋತ್ತಮರು ಶಕ 1560ರಲ್ಲಿ ಮುಕ್ತರಾಗಿದ್ದರೆಂಬುದು ಸ್ಪಷ್ಟ ಶಕ 1512ರಲ್ಲು ಅವರಿಗೆ 22 ವರ್ಷ ಪ್ರಾಯ ಹಿಡಿದರೆ ಮುಕ್ತರಾಗುವಾಗ್ಯೆ 70 ವರ್ಷವಾಗುತ್ತದೆ. ದೊಡ್ಡ ಜೀವೋತ್ತಮರು 1510ರಲ್ಲಿ ಮುಕ್ತರಾಗಿರಬಹುದು. ಶಕ 1716 ಆನಂದ ಸಂ।ರದ ಮಾರ್ಗಶಿರ ವದ್ಯ 5ಲ್ಲು ಉತ್ತರಾದಿ ಮಠದ ಸತ್ಯಪರೀಕ್ಷಾ ತೀರ್ಥರ ಶಿಷ್ಯ ಸತ್ಯವರ ತೀರ್ಥ ಶ್ರೀಪಾದವಡೇರು ಅಶೇಷ ಮಹಾಜನಾಂಗಗಳಿಗೆ ಕಳುಹಿಸಿದ ರಾಯಸಪತ್ರದಲ್ಲಿ ಗೋಕರ್ಣ ಮಠದ ಲಕ್ಷ್ಮೀಕಾಂತ ತೀರ್ಥರು ನಮ್ಮ ಸ್ವಾಮಿಗಳ ಅನುಗ್ರಹಕ್ಕೆ ಪೂರ್ಣಪಾತ್ರರು, ಪರಂಪರಾ ನಮ್ಮ ಸಂಸ್ಥಾನಕ್ಕೆ ಹೊಂದಿದವರು ಎಂಬದಾಗಿ ವಗ್ಯೆರೆ ಬರೆದಿರುವದ್ರಿಂದ ಉತ್ತರಾದಿ ಮಠದ ಪರಂಪರೆಗೆ ಸೇರಿದವರೆಂತ ಸ್ಪಷ್ಟವಾಗುತ್ತದೆ.

## 02. ಸಾರಸ್ವತ ಬ್ರಾಹ್ಮಣರ ಗೋತ್ರ ಪ್ರವರಗಳು

ಸಾರಸ್ವತ ಬ್ರಾಹ್ಮಣರ ಗೋತ್ರ ಪ್ರವರಗಳು ಈಗ ತಿಳಿದು ಬಂದ ಮಟ್ಟಿಗೆ ಈ ಕೆಳಗೆ ಕೊಟ್ಟಿದೆ. ಇನ್ನು ಕೆಲವು ಗೋತ್ರಗಳು ಇದ್ದಾವೆಯಂತ ಕೇಳುತ್ತದೆ.

| ಗೋತ್ರ | ಪ್ರವರಾ |
|---|---|
| 1. ವತ್ಸ | ಭಾರ್ಗವ, ಚ್ಯಾವನ, ಅಪ್ನವಾನ್, ಔರವ, ಜಾಮದಗ್ನ್ಯ |
| 2. ಕೌಂಡಿಣ್ಯ | ವಾಸಿಷ್ಠ – ಮೈತ್ರಾವರುಣ – ಕೌಂಡಿಣ್ಯ |
| 3. ಕೌಶಿಕ | ವೈಶ್ವಾಮಿತ್ರ – ಅಘಮರ್ಷಣ ಕೌಶಿಕ |
| 4. ಭಾರದ್ವಾಜ | ಅಂಗೀರಸ ಬಾರ್ಹಸ್ಪತ್ಯ ಭಾರದ್ವಾಜ |
| 5. ವಾಸಿಷ್ಠ | ವಾಸಿಷ್ಠ ಇಂದ್ರಪ್ರಮದ ಆಭರಸ್ವತ್ (ತ್) |
| 6. ಜಾಮದಗ್ನ್ಯ | ಭಾರ್ಗವ ಚ್ಯಾವನ ಆಪ್ನವಾನ್ ಔರವ ಜಾಮದಗ್ನ್ಯ |
| 7. ಮುದ್ಗಲ | ಆಂಗೀರಸ – ಭಾರ್ಮ್ಯಾಶ್ವ, ಮೌದ್ಗಲ |
| 8. ಅತ್ರಿ (ಅತ್ರಿ) | ಆತ್ರೇಯ – ಅರ್ಚನಾನಸ – ಶ್ಯಾವಾಶ್ವ |
| 9. ಕುತ್ಸ ಶಂಖಪಿಂಗ | ಆಂಗೀರಸ, ಆಂಬರೀಷ, ಯೌವನಾಶ್ವ |
| 10. ಗೌತಮ | ಆಂಗೀರಸ – ಅಯಾಸ್ಯ, ಗೌತಮ |
| 11. ಆಂಗೀರಸ | ಆಂಗೀರಸ |
| 12. ನೈಧ್ರುವ | ಕಾಶ್ಯಪ – ಅವತ್ಸಾರ – ನೈಧ್ರುವ |
| 13. ಕಾಶ್ಯಪ | ಕಾಶ್ಯಪ – ಅವತ್ಸಾರ – ನೈಧ್ರುವ |
| 14. ವಿಶ್ವಾಮಿತ್ರ | ವಿಶ್ವಾಮಿತ್ರ – ದೇವರಾತ – ಔದಲ |
| 15. ಶಾಂಡಿಲ್ಯ | ಶಾಂಡಿಲ – ಅಸಿತ – ದೇವಲ |
| 16. ಧನಂಜಯ | ವೈಶ್ವಾಮಿತ್ರ–ಮಾದುಚ್ಛಂದಸ–ಧಾನಂಜಯ |
| 17. ಸಾಂಖ್ಯಾಯನ | ಗೋಮ, ವಸು – ಸಾಂಖ್ಯಾಯನ |
| 18. ಗಾರ್ಗ್ಯ | ಅಂಗಿರಸ – ಬಾರ್ಹಸ್ಪತ್ಯ ಭಾರಧ್ವಾಜ – ಗಾರ್ಗ್ಯ |

19. ವೈನ್ಯ
20. ಹರ್ಷ
21. ಹಾರಿತ

| **ಪೂರ್ವ ಕಾಲದ ಹೆಸರು** | **ಈಗಿನ ಹೆಸರು** |
|---|---|
| ವಿದೇಹ ದೇಶ, ಮಿಥಿಲಾ, ಉತ್ತರ ಬಿಹಾರ | ಇದ್ರಲ್ಲಿ ಈಗಿನ ದರ್ಭಾಂಗ, ಚಂಪರಾನ್, ಉತ್ತರ ಮುಜಪುರ ಜಿಲ್ಲೆಗಳು ಕೂಡುತ್ತವೆ. |

ಇದಕ್ಕೆ ತಿರಹೂತ್ ಯಾನೆ ತ್ರಿಹೋತ್ರಲಪುರ ಎಂದು ಹೆಸರು

| | |
|---|---|
| ವಿದರ್ಭ ದೇಶ | ಈಗಿನ ಬಿಹಾರ |
| ಕುರುಜಾಂಗಲ | ಈಗಿನ ಡಿಲ್ಲಿ ಪ್ರಾಂತ್ಯ |
| ಪಾಂಚಾಲ ದೇಶ | ಪಾರವಾಲ |
| ಅಂಗದೇಶ | ಬಂಗಾಲ ಪ್ರಾಂತ್ಯದ ದರ್ಭಾಂಗ, ಪಶ್ಚಿಮಭಾಗ |
| ವಂಗ ದೇಶ | ಬಂಗಾಲ ಪ್ರಾಂತ್ಯದ ಪೂರ್ವ ಭಾಗ |
| ಗಾಂಧಾರ | ಅಪಘಾನಿಸ್ಥಾನದ ಕಂದಹಾರ ಅಂದ್ರೆ |

ಮನುಸಂಹಿತೆಯಲ್ಲಿ ಕಾಣುವ ಗಡಿಗಳು –
ಪೂರ್ವಕ್ಕೆ ಪೂರ್ವ ಸಮುದ್ರ ಪಶ್ಚಿಮಕ್ಕೆ ಪಶ್ಚಿಮ ಸಮುದ್ರ
ಉತ್ತರಕ್ಕೆ ಹಿಮಾಲಯ ಪರ್ವತ ದಕ್ಷಿಣಕ್ಕೆ ವಿಂಧ್ಯಾ ಪರ್ವತ.
ಈ ಮಧ್ಯ ಇರುವ ಪ್ರದೇಶ ಮಗಧ ದೇಶ ದಕ್ಷಿಣ ಬಿಹಾರ

ಮಗಧ ದೇಶದ ಅರಸನಾಗಿದ್ದ ಜರಾಸಂಧನ ರಾಜಧಾನಿಯಾಗಿದ್ದ ಗಿರಿವ್ರಜವೆಂಬ ಪಟ್ಟಣವು ಈಗಣ ಬಿಹಾರ ಪ್ರಾಂತ್ಯದ ಪಾಟ್ನಾ ಜಿಲ್ಲೆಯ ಬಿಹಾರ ಎಂಬ ಊರಿನ

ಸಮೀಪ ಕೆಲವು ಮೈಲುಗಳ ಒಳಗೆ ಹಾಳು ಬಿದ್ದದ್ದು ಕಾಣುತ್ತದೆ. ಈ ಪಟ್ಟಣದ ಸುತ್ತಯಿರುವದೆಂಬ ಮಹಾಭಾರತದಲ್ಲಿ ಹೇಳುವ ವೈಹಾರಾ, ವೃಶವ, ಋಷಿಗಿರಿ, ಛರ, ಚೈತಕ, ಎಂಬ 5 ಗುಡ್ಡಗಳು ಅಲ್ಲಿ ಈಗಲೂ ಕಾಣಬಹುದು.

| | |
|---|---|
| ಇಂದ್ರಪ್ರಸ್ಥ | ಈಗಿನ ಡಿಲ್ಲಿ ಪಟ್ಟಣ; ಇದು ಯಮುನಾ ನದಿ ತೀರ |
| ಹಸ್ತಿನಾಪುರ | ಇಂದು ಗಂಗಾನದಿ ತೀರದಲ್ಲಿತ್ತು. |
| ಮಾಹಿಷ್ಮತಿ ನಗರ | ನರ್ಮದಾ ನದಿಯ ಉತ್ತರ ತೀರದಲ್ಲಿ ಈಗ ಮಂಡಲಾ ಎಂಬ ಊರು |

## 03. ಕುಂಭಕೋಣಮಠದಿಂದ ಕಾಶೀಮಠಕ್ಕೆ ಕೊಟ್ಟ ತಾಮ್ರಶಾಸನ

ಇದು 5 1/2ಇಂಚು ಅಗಲ, 9 ಇಂಚು ಉದ್ದದ ತಾಮ್ರದ ತಗಡಿನ ಮೇಲೆ ಕೆತ್ತಿಸಿದೆ. ಬರಹಾ ದೇವನಾಗರಿ, ಅಕ್ಷರ ಭಾಷೆ ಕನ್ನಡದಲ್ಲಿ ಉಂಟು.

ಶ್ರೀ ರಾಮಚಂದ್ರಃ

ಶ್ರೀಮತ್ ಪರಮಹಂಸ ಪರಿವ್ರಾಜಕಾಚಾರ್ಯರಾದ ಪದವಾಕ್ಯ ಪ್ರಮಾಣಪಾರಾವಾರಾ ಪಾರಂಗತ ಸರ್ವತಂತ್ರರಾದ ಶ್ರೀ ಮದ್ವೈಷ್ಣವಸಿದ್ಧಾಂತ ಪ್ರತಿಷ್ಠಾಪನಾಚಾರ್ಯರಾದ ಶ್ರೀಮತ್ ರಘುಪತಿ ವೇದವ್ಯಾಸದೇವರ ದಿವ್ಯ ಶ್ರೀ ಪಾದ ಪದ್ಮಾರಾಧಕರಾದ ಶ್ರೀಮತ್‌ಜಿತಾಮಿತ್ರ ವರ್ಯ ತೀರ್ಥ ಶ್ರೀಪಾದವಡೇರ ಕರಕಮಲ ಸಂಜಾತರಾದ ಶ್ರೀಮತ್ ರಘುನಂದನ ತೀರ್ಥ ಶ್ರೀಪಾದ ವಡೇರ ವರಕುಮಾರಕರಾದ ಶ್ರೀಮತ್ ಸುರೇಂದ್ರ ತೀರ್ಥ ಶ್ರೀಪಾದ ವಡೇರು

ಅಸ್ಮತ್ ಪರಮಪ್ರಿಯರಾದ ಕೊಂಕಣಸ್ಥ ಕಾಶೀಮಠದ ಯಾದವೇಂದ್ರ ತೀರ್ಥವಡೇರಿಗೆ ಪ್ಲವಸಂವತ್ಸರದ ಮಾಘ ಶುದ್ಧ 5ಮಿಯಲ್ಲು ನಾವು ಬರೆಸಿಕೊಟ್ಟ ತಾಮ್ರಶಾಸನವೇನೆಂದ್ರೆ, (ಶಕ 1464 ಕ್ರಿ. ಶ. 1542)

ನೀವು ನಮ್ಮ ಸಂಸ್ಥಾನದಲ್ಲಿ ಬಂದು ದೇವರ ಸಂದರ್ಶನಾದಿಗಳನ್ನು ಮಾಡಿಕೊಂಡು ನಮ್ಮ ಅನುಗ್ರಹಕ್ಕೆ ಪಾತ್ರರಾದ ಕಾರಣ ನಿಮಗೆ ನಿಮ್ಮ ಶಿಷ್ಯ ಪರಂಪರೆಗೆ ದೇಶಸಂಚಾರಗಳು ಮಾಡುವಾಗ್ಯೆ ವಿಭವಾದಿಗಳ ಧರಸಿಕೊಂಡು ಸಂಚರಿಸುವ ಹಾಗೆ ಅಪ್ಪಣೆ ಕೇಳಿಕೊಂಡ ಸಂಬಂಧ ತಾವು ಉಚಿತವಾಗಿ ಕೊಟ್ಟ ರಾಮದೇವರು ೧ ವ್ಯಾಸ ಪ್ರತಿಮೆ ೧ ಸಾಲಗ್ರಾಮ ೧ ಅಪ್ಪಣೆ ಕೊಟ್ಟ ವಿವರ ಪಾಲಕಿ ೧ ಶ್ವೇತಛತ್ರ ೧ ಉಭಯಚಾಮರ ೧ ಉಭಯಾಸನ ೧ ಉಭಯದೀವಟಿಗೆ ೧ ಧವಳ ಶಂಖ ೧ ನಗಾರಿ ೧ ಪಾಠಕರು ೧ ತಾಳಗಳು ಮುಂತಾದ ನಮ್ಮ ಸಂಸ್ಥಾನಕ್ಕೆ ಉಂಟಾದ ಆಶೇಷ ಬಿರುದುಗಳು ಧರಿಸಿಕೊಂಡು ನಿಮ್ಮ ವರ್ಗದ ಆಶೇಷ ಬ್ರಾಹ್ಮಣರಿಗೆ ಮಂತ್ರ ಮುದ್ರಾಧಾರಣೆ ಮಾಡುವ ರೀತಿ ಅಪ್ಪಣೆಕೊಟ್ಟು ಇದ್ದೇವೆ. ಅದೇ ರೀತಿ ಉತ್ತರೋತ್ತರ ನಡಕೊಂಬೊದು. ನಿಮಗೆ ಎಲ್ಲಾದರೂ ವಿವಾದ ಬಂದರೆ ನಾವೇ ಪರಿಹರಿಸಿಕೊಟ್ಟೇವು. ಇದೇ ರೀತಿ ನಮ್ಮ ಪರಂಪರೆಯವರು ನಮ್ಮ ಪರಂಪರೆಯರೀಗೆ ನಡೆಸಿಕೊಂಡಾರು. ಇದಕ್ಕೆ ವಿರೋಧ ನಡಕೊಂಬವರು ಗುರುದ್ರೋಹಿಗಳೇ ಸರಿ. ನಿಮ್ಮ ಸಂಸ್ಥಾನ ನಡಿಸುವ ಸಾಭಿಮಾನ ನಮ್ಮ ಶಿಷ್ಯ ಪರಂಪರೆಗೆ ಹೊರತು ಬೇರೆ ಇಲ್ಲ. ನಿಮ್ಮಲ್ಲಿ ಚಾತುರ್ಮಾಸ್ಯದಲ್ಲಿ ಅಧಿಕರಾದರೆ ಮರ್ಯಾದೆ

ರೀತಿ ನಡಕೊಂಡಾರು. ಬಹುಶಃ ಶ್ರೀ ರಘುಪತಿ ವೇದವ್ಯಾಸ ದೇವರ ಪೂಜೆ ಮಾಡಿದವರಾದ ಕಾರಣ ಸಕಲ ವಿಷಯದಲ್ಲಿ ನೀವು ನಮ್ಮವರೆಂದು ನಿರ್ಣಯ ಮಾಡಿದ್ದೇವೆ. ನೀವು ನಮ್ಮಲ್ಲಿ ಸಾಭಿಮಾನ ಇಟ್ಟು ವ್ಯವಹರಿಸಬೇಕು. ನಿಮಗೆ ನಾವು ಕೊಟ್ಟಿದ್ದೇನು ಅದೆಯೋ ಅದನ್ನು ತಿರುಗಿ ನಮ್ಮ ಪರಂಪರೆಯವರೀಗೆ ನಿಮಗೆ ಯಾವದೊಂದು ಕೇಳದ ಕಾರಣವಿಲ್ಲ ಹಾಗೆ ಬರಸಿಕೊಟ್ಟ ತಾಮ್ರ ಶಾಸನ. ದಾನಪಾಲನಯೋರ್ಮಧ್ಯೆ ದಾನಾಚ್ಛ್ರೇಯೋನುಪಾಲನಮ್. ಕೊಟ್ಟ ಭಾಷೆ. ಇಂತಿ ನಾರಾಯಣ ಸ್ಮರಣೆ.

## 04. ಉತ್ತರಾದಿಮಠದಿಂದ ಕಾಶೀಮಠಕ್ಕೆ ಕೊಟ್ಟ ತಾಮ್ರಶಾಸನ

(ಸುಮಾರು 4 ಇಂಚು ಅಗಲ, 18 ಇಂಚು ಉದ್ದ, ನಾಗರಿ ಬರಹಾ, ಕನ್ನಡ ಭಾಷೆ)

ಶ್ರೀ ರಾಮಚಂದ್ರಾಯ ನಮಃ

ಶ್ರೀಮತ್ಪರಮಹಂಸ ಪರಿವ್ರಾಜಕಾಚಾರ್ಯರ್ತ್ಯಾದ್ಯನೇಕಗುಣಸಂಪನ್ನರಾದ ಶ್ರೀಮದ್ರಾಮಚಂದ್ರದೇವರ ದಿವ್ಯಶ್ರೀಪಾದಪದ್ಮಾರಾಧಕರಾದ ಶ್ರೀಮತ್ ಸತ್ಯಾಭಿನವತೀರ್ಥ ಶ್ರೀಪಾದ ವಡೇರ ಕರಕಮಲಸಂಜಾತರಾದ ಶ್ರೀಮತ್ಸತ್ಯಾಧೀಶತೀರ್ಥ ಶ್ರೀಪಾದಂಗಳು ಶಾಲಿವಾಹನ ಶಕ 1603ನೇ ಸಾವಿರದ ಆರ್ನೂರ ಮೂರನೆಯ ದುರ್ಮತಿ ಸಂ। ರದ ಕಾರ್ತಿಕ ಬಹುಳ ಪಂಚಮಿಯಲ್ಲಿ ಶ್ರೀಮದುಪೇಂದ್ರತೀರ್ಥ ಶ್ರೀಪಾದಂಗಳ ಕರಕಮಲಸಂಜಾತರಾದ ಶ್ರೀಮದ್ ರಾಘವೇಂದ್ರತೀರ್ಥ ಶ್ರೀಪಾದಂಗಳಿಗೆ ಬರಸಿಕೊಟ್ಟ ತಾಮ್ರ ಸಾಧನ ಪಟ್ಟಿ ಕ್ರಮವೆಂತೆಂದರೆ, ನೀವು ಪೂರ್ವದಲ್ಲಿ ವಿಜಯೇಂದ್ರ ಸ್ವಾಮಿಗಳಾರಭ್ಯ ಕುಂಭಕೋಣಮಠಸೇರಿಕೊಂಡು ಇದ್ದೀರಿ.

ವಿಜಯೇಂದ್ರ ಸುಧೀಂದ್ರ ರಾಘವೇಂದ್ರರು ನಿಮ್ಮ ಹಿರೇರಿಗೆ ನಡೆಸಿದ ಮರ್ಯಾದಿಯನ್ನು ಯೋಗೀಂದ್ರ ವಡೇರು ಕೊಚ್ಚಿಗೆ ಬಂದಾಗ ನಿಮಗೆ ನಡಿಸಿದಿಲ್ಲಾದ ಕಾರಣ ನಿಮಗೂ ಅವರಿಗೂ ವಿರೋಧವಾಯಿತು. ಅದೇ ಸಮಯದಲ್ಲಿ ನಮ್ಮ ಸ್ವಾಮಿಗಳು ಅನಂತಶಯನ ಜಾತ್ರೆಗೆ ಬಂದದ್ದನ್ನು ಕೇಳಿ ನೀವು ಕಾರ್ಕಳ ಅನಂತಭಟ್ಟರಿಗೆ ನಿಮ್ಮ ಯಾವ ಅಭಿಪ್ರಾಯ ಹೇಳಿ ಆತನ ನಮ್ಮ ಸ್ವಾಮಿಗಳ ಸಮೀಪಕ್ಕೆ ಕಳಿಸಿದಿರಿ. ನಮ್ಮ ಸ್ವಾಮಿಗಳು ನಿಮ್ಮ ಅಭಿಪ್ರಾಯ ತಿಳಿದು ನಿಮ್ಮ ಮನೋರಥ ಸಿದ್ಧ ಮಾಡೇವು ಎಂತ ವೆಂಕಟಭಟ್ಟರ ಕೈಯಿಂದ ರಾಯಸ ಕಳುಹಿಸಿದರು. ಆಮೇಲೆ ನೀವು ಕೊಂಕಣ ವರ್ಗದ ಆಶೇಷಬ್ರಾಹ್ಮಣ ಮಹಾಜನಗಳ ಪತ್ರ ಸಹಾ ತ್ರಣಾಮಲದಲ್ಲಿ ನಮ್ಮ ಸ್ವಾಮಿಗಳ ಸಮೀಪಕ್ಕೆ ಬಂದು, ನಾವು ಸರ್ವಾತ್ಮನಾ ಯೋಗೀಂದ್ರ ವಡೆರ ಬಿಟ್ಟೆವು. ನೀವು ಮೂಲ ಸಂಸ್ಥಾನಾಧಿಪತಿಗಳಾದ ಕಾರಣ ನಿಮ್ಮ ಸೇರಬೇಕು ಎಂತ ಬಂದಿದ್ದೇವೆ. ನೀವು ಸಾಸಷ್ಟಿ, ಅಂತ್ರೋಜಿ, ಭಟಕೊಳ, ಬಸ್ರೂರೂ, ಕೊಚ್ಚಿ ಮೊದಲಾದಲ್ಲಿದ್ದ ಕೊಂಕಣವರ್ಗದ ಆಶೇಷ ಬ್ರಾಹ್ಮಣರಮೇಲೆ ದಯಮಾಡಿ ಮಂತ್ರಮುದ್ರಾಧಾರಣಾ ಮಾಡಬೇಕು ಎಂದು ಹೇಳಿಕೊಳ್ಳಲಾಗಿ ನಮ್ಮನ್ನು ಆಶೇಷರಿಗೆ ಮಂತ್ರಮುದ್ರಾಧಾರಣೆ ಮಾಡಬೇಕು ಎಂತ ಕಳುಹಿಸಿದರು. ನಿಮಗೂ ಪಲ್ಲಕಿ, ಛತ್ರ, ಸುರೆಪಾನ, ಚಾಮರ ಮೊದಲಾದ ಆಶೇಷ ಬಹುಮಾನ ಮಾಡಿ ಕಳುಹಿಸಿದರು. ನಾವು ನಮ್ಮ ಸ್ವಾಮಿಗಳ ಆಜ್ಞಾನುಸಾರ ಬಂದು ಆಶೇಷರಿಗೆ ಮಂತ್ರಮುದ್ರಾಧಾರಣೆ ಮಾಡಿದೆವು. ಮುಂದಕ್ಕೂ ಇದೇ ರೀತಿಯಿಂದ

ಉತ್ತರೋತ್ತರ ಆಶೇಷರಿಗೆ ಮಂತ್ರಮುದ್ರಾಧಾರಣೆ ಮಾಡಿಕೊಂಡು ಬಂದೇವು. ನೀವು ಪೂರ್ವದಲ್ಲಿ ದಾವಪ್ರಕಾರ ಮಂತ್ರಮುದ್ರಾಧಾರಣೆ ಮಾಡುತ್ತಾ ಇದ್ದೀರಿ ಅದೇ ಪ್ರಕಾರ ಉತ್ತರೋತ್ತರ ಮಂತ್ರಮುದ್ರಾಧಾರಣೆ ಮಾಡಿಕೊಂಡು ಬರೋೀರು. ನಾವು ನೀವು ಕೂಡಿ ಬಂದಾಗ ನಿಮ್ಮಲ್ಲಿ ಚಾತುರ್ಮಾಸ್ಯ ಸ್ವಲ್ಪವಾದರಿ ನಿಮಗೆ ಮುದ್ರಾಧಾರಣೆ ಮಾಡಿ ನಾವು ಆಶೇಷರಿಗೆ ಮುದ್ರಧಾರಣೆ ಮಾಡಬೇಕು. ನಿಮ್ಮಲ್ಲಿ ಅಧಿಕವಾದರೆ ನಿಮ್ಮ ಕೂಡಿಸಿಕೊಂಡು ಆಶೇಷರಿಗೆ ಮುದ್ರಾಧಾರಣೆ ಮಾಡಬೇಕು. ನಮ್ಮ ಸ್ವಾಮಿಗಳು ನಿಮಗೆ ಮಾಡಿದ ಬಹುಮಾನ ಉತ್ತರೋತ್ತರ ನಡಸೇವು. ನಿಮಗೆ ಎಲ್ಲಿ ಆದರೂ ವಿವಾದ ಬಂದರೆ ಪರಿಹರಿಸಿಕೊಟ್ಟೇವು. ಇದೇ ರೀತಿ ನಮ್ಮ ಪರಂಪರೆಯಲ್ಲಿ ನಿಮ್ಮ ಪರಂಪರಿಗೆ ನಡೆಸಿಕೊಟ್ಟೇವು.

ಇತೀ,

ಆನಂದ ಸಂವತ್ಸರದಾ ಆಶ್ವೀಜ ಶು ೫ ಲ್ಲೂ ಶ್ರೀ ಮಕ್ಕೆಳದಿ ಸೋಮಶೇಖರ ನಾಯಕರೂ ಅರಮನೆ ಶೀಮೆಗಡಿಗಳಾ ಕೊಚ್ಚಿ ಠಾಣೆದಾರು. ಪಾರುಪತ್ಯಗಾರರಿಗೆ ಬರಸಿಕಳುಹಿದ ಕಾರ್ಯ ಅದಾಗಿ ಕುಂಭಕೋಣ ಮಠದ ಸ್ವಾಮಿಗಳು ಕೊಂಕಣೆಗಾರ ಗುರುಗಳಾದ ಕಾಶೀಮಠದ ಸನ್ಯಾಸಿಗಳಿಗೆ ಪ್ರಾಕುಪಲ್ಲಕಿ, ಶ್ವೇತಛತ್ರ, ಸುರೇಪಾನು, ಧವಳ ಶಂಖ, ತಾಳಗಳು ಮುಂತಾದ ಬಿರುದುಗಳು ಹಚ್ಚಿಸಿಕೊಂಡು ನಿಮ್ಮ ನಿಮ್ಮ ಗಡಿಗಳಲ್ಲಿ ಅವರ ಶಿಷ್ಯ ವರ್ಗದವರಿಗೆ ವಿಚಾರಿಸುವಲ್ಲಿ ಅಡ್ಡಿಗಳು ಬಂದರೆ ಪರಿಹರಿಸಿಕೊಡುವುದು.

ನಿಮ್ಮ ನಿಮ್ಮ ಹವಾಲೆ ಸೀಮೆಗಳಲ್ಲಿ ಗಡಿಗಳಲ್ಲಿ ಅಟ್ಟಕರಾಗದ ರೀತಿ ನಡೆಸಿಕೊಂಡು ಬರುವುದು.

(ಇದು ಶಾಲಿವಾಹನ ಶಕ 1659 ಆಗುತ್ತದೆ ಕ್ರಿ. ಶ. 1734 ಇವರು 2ನೆ ಸೋಮಶೇಖರ ನಾಯ್ಕರು) ರಾಜಸ್ಥಾನದ ಮೊಹರು ಉಂಟು ಇದನ್ನು (ಇಸವಿ ಸರಿ ಕಾಣುವುದಿಲ್ಲ. ಆದಾಗ್ಯೂ ಬಹುಶಃ 1866)ನೇ ಇಸ್ವಿ ಎಪ್ರಿಲ್ ತಾ 11ರಲ್ಲಿ ನಗರದಲ್ಲಿ ವೆಂಕಟರಮಣ ಆಚಾರ್ಯರು ಹಾಜರು ಮಾಡಿದ್ದು–

ವೆಂಕಟರಮಣ ಆಚಾರ್ಯನ ರುಜು ಉಂಟು

## 05. ಕೆಪ್ಟನ್ ಮನರೋ ದೊರೆಗಳು ಕೊಟ್ಟ ಹುಕುಂ

ಶ್ರೀ ಕಾಶೀಮಠದ ಸುರೇಂದ್ರ ತೀರ್ಥ ಸ್ವಾಮಿಗಳವರಿಗೆ ತಾ 20ನೆ ಜುನ 1209ನೇ ಇಸವಿ (1800ನೇ ಇಸವಿ) ಕಾನಡಾ ಜಿಲ್ಲಾ ಪ್ರಿನ್ಸಿಪಾಲ ಕಲೆಕ್ಟರರಾದ ಕೆಪ್ಟನ್ ಮನರೋ ದೊರೆಗಳು ಕೊಟ್ಟ ಹುಕುಮಿನ ನಕ್ಲು –

ಕೊಡಿಯಾಲ, ವ ಬಂಟವಾಳ, ವ ಕಾರ್ಕಳ, ವ ಮೂಡಬಿದ್ರೆ, ವ ಮಂಜೇಶ್ವರ, ವ ಬೇಕಲ, ವ ಪುತ್ತೂರು, ವ ಕಡಬಾ, ವ ಮೂಲ್ಕಿ, ವ ಬಿಳಸಾವರ, ವ ಬಾರ್ಕೂರು, ವ ಕುಂದಾಪುರ, ವ ಹೊನ್ನಾವರ, ವ ಅಂಕೋಲಾ, ವ ಬಿಳಗಿ, ವ ಬಿನೋಶಿ (ಬನವಾಸಿ), ವ ಸೊಂಧಾ, ವ ಸೋಪಾ, ಈ ತಾಲ್ಲುಗಳ ತಹಶೀಲ್ದಾರ, ವ ಶಿರಸ್ತೆದಾರ ವ ಗೌಡ ಶ್ಯಾನುಭೋಗ, ಪಡ ಆಲೆ ಇವರುಗಳಿಗೆ ಮಾಲುಮ್ ಬಾದದರವಿಲ್ಲಾ

ಕೊಂಕಣಿಗಳ ಸನ್ಯಾಸಿ ಕಾಶಿ ಮಠದವರಾದ ಸುರೇಂದ್ರ ತೀರ್ಥರಿಗೆ, ಉಡ್ಪಿ ಎಂಟು ಮಠದವರಿಗೂ, ವ ಶೃಂಗೇರಿ ಮಠದವರಿಗೆ ಕೂಡಾ, ಮರ್ಯಾದೆ ಸಂಬಂಧ ವ್ಯಾಜ್ಯೆಯಿರುವ ವಿಷಯದಲ್ಲಿ ಬಸ್ರೂರ ಊರಲ್ಲಿ ದರ್ಯಾಪ್ತು ಮಾಡಿ ಸುಮತೀಂದ್ರ ಮಠದವರು ಕೊಂಕಣಶಿಷ್ಯವರ್ಗದವರಿಗೆ ಬರೆದುಕೊಟ್ಟ ದಸ್ತೈವಜು ಪ್ರಕಾರ ಆ ತಪ್ಸೀಲು ಪಾಲಕಿ, ಶ್ವೇತಛತ್ರ 1, ಉಭಯಚಾಮರ, ಉಭಯ ದಿವಟಿ, ಉಭಯಾಸನ, ಧವಳಶಂಖ, ತಾಳ, ವಗ್ಯೆರೆ ಸುಮತೇಂದ್ರ ಮಠಕ್ಕೆ ನಡೆಯತಕ್ಕ ಮರ್ಯಾದೆ ಪ್ರಕಾರ ನಡಕೊಂಡು ಬರುವ ಹಾಗೆ ಹುಕುಂ ಕೊಟ್ಟಿದ್ದೇವೆ. ಈ ಪ್ರಕಾರ ಗೋಕರ್ಣ ಮಠದ ಸಂನ್ಯಾಸಿ ರಾಮಚಂದ್ರ ತೀರ್ಥರಿಗೆ ಮೇಲೆ ಬರೆದ ಮರ್ಯಾದೆ ಪ್ರಕಾರ ನಡಕೊಂಡು ಬರುವ ಹಾಗೆ ಹುಕುಂ ಕೊಟ್ಟಿದ್ದೇವೆ. ಇದು ಹೊರತು ರಸ್ತೆಯಲ್ಲಿ ತೋರಣಕಟ್ಟತಕ್ಕಂಥಾದ್ದು ಬೇರೆ ಮಠದವರು ಅಲ್ಲ ಎಂತ ತಕರಾರು ಬಂದದ್ರಿಂದ ತೋರಣಕಟ್ಟತಕ್ಕ ಅವಶ್ಯವಿಲ್ಲ.

ಅವರವರ ಪೇಟೆ ಸ್ಥಳದಲ್ಲಿ ಪ್ರಸಿದ್ಧ ದೇವಸ್ಥಾನದ ಎದುರ್ನಲ್ಲಿ ತಮ್ಮ ತಮ್ಮ ಮಠದವರು ಪಲ್ಲಕಿಯಲ್ಲಿ ಕೂತುಕೊಂಡು ಹೋಗುವುದಕ್ಕೆ ಎಲ್ಲಿ ಯಾವ ಯಾವ ಕಾಯಿದೆ ನಡಿಯುತ್ತಾ ಇದೆಯೋ, ಆ ಕಾಯ್ದೆ ಪ್ರಕಾರ ಇದು ನಡಿಯಬೇಕು. ಇದಕ್ಕೆ ಹೆಚ್ಚಾಗಿ ನಡೆಯಬಾರದು. ಮೇಲೆ ಬರೆದಂತಾ ಮರ್ಯಾದೆ ಪ್ರಕಾರ ಬಂದ್ರೆ ಯಾರೂ ಅಭ್ಯಂತರ ಪಡಿಸಕೂಡದು. ಅಂತ ತಾಕೀತು ಮಾಡ್ಸಬೇಕು. ತಿಳಿಯುವುದು, ಬ – ತಾರೀಕು 20ನೇ ಜೂನ್ 1209ನೇ ಫಸಲಿ ಮೋಕಾ ಬಿಲಾ ಪಟ್ಟದ್ದು, ಶಿರಸ್ತೇದಾರ್ ಜಿಲ್ಲಾ ಕಾನಡಾ

(ಮುಂದಿನ ಪುಟ ಸ್ಪಷ್ಟ ಇಲ್ಲ)

## 06. ಜೋಗಮಲ್ಯನು ಬರಕೊಟ್ಟ ದಾನಶಾಸನ

ಶ್ರೀ ಯಾದವೇಂದ್ರ ತೀರ್ಥಶ್ರೀಪಾದ ವಡೇರಿಗೆ ಭಟ್ಕಳ ಅನಂತ ಮಲ್ಯನ ಮಗ ಜೋಗಮಲ್ಯನು ಬರಕೊಟ್ಟ ದಾನಶಾಸನದ ನಕ್ಲು -

ನಮಸ್ತುಂಗ ಶಿರಶ್ಚುಂಬಿ ಚಂದ್ರ ಚಾಮರ ಚಾರವೇ
ತ್ರೈಲೋಕ್ಯ ನಗರಾರಂಭ ಮೂಲಸ್ತಂಭಾಯ ಶಂಭವೇ ॥

ಸ್ವಸ್ತಿ ಶ್ರೀ ಜಯಾಭ್ಯುದಯ ಶಾಲಿವಾಹನ ಶಕ ವರುಷ 1529ನೇಯ ಪರಾಭವ ಸಂ। ವೈಶಾಖ ಶು 15ಯು ಸೋಮವಾರದಲ್ಲಿ ಶ್ರೀಮತ್ಪರಮಹಂಸ ಪರಿವ್ರಾಜಕಾಚಾರ್ಯ ಪದವಾಕ್ಯ ಪ್ರಮಾಣ ಪಾರಾವಾರಪಾರಂಗತ ಸರ್ವತಂತ್ರ ಸ್ವತಂತ್ರರಾಗಿ ಶ್ರೀಮದ್ವೈಷ್ಣವ ಸಿದ್ಧಾಂತ ಪ್ರತಿಷ್ಠಾಪನಾಚಾರ್ಯರಾದ ಶ್ರೀಮದ್ರಾಮಚಂದ್ರ ದೇವರ ದಿವ್ಯ ಶ್ರೀಪಾದಪದ್ಮಾರಾಧಕರಾದ ಶ್ರೀಮತ್ಸುರೇಂದ್ರ ತೀರ್ಥ ಶ್ರೀಪಾದವಡೇರ ಕರಕಮಲಸಂಜಾತರಾದ ಶ್ರೀಮದ್ವಿಜೇಂದ್ರ ತೀರ್ಥ ಶ್ರೀಪಾದ ವಡೇರ ವರಕುಮಾರಕರಾದ ಶ್ರೀಯಾದವೇಂದ್ರ ತೀರ್ಥ ಶ್ರೀಪಾದ ವಡೇಯರಿಗೆ - ಭಟ್ಕಳದ ಅನಂತ ಮಲ್ಯನ ಮಗ ಜೋಗ ಮಲ್ಯನು ಕೊಟ್ಟ ಧರ್ಮಸಾಧನ

ಭಾಷಾಕ್ರಮವೆಂತೆಂದರೆ ಪ್ರಾಕು ನನ್ನ ತಂದೆ ಅನಂತಮಲ್ಲರು ನಮ್ಮ ಗ್ರಾಮದ ಕಾಮಾಕ್ಷಿ ದೇವತೆಯ ದೇವಸ್ಥಾನವನ್ನು ಕಟ್ಟಿಸಿ ಆಮೇಲೆ ನಾನು ಆಳುತಲಿದ್ದ ಮನೆಯ ಕೇರಿಯ ಸ್ಥಳಗಳಲ್ಲಿ ನಾನು ಕಟ್ಟಿಸಿದ ವಿಷ್ಣು ಸ್ಥಾನ ತಿರುಮಲ ದೇವಸ್ಥಾನಕ್ಕೆ ಗಡಿ. ಮೊದಲು ಕಾಮಾಕ್ಷಿ ದೇವತೆಯ ದೇವಸ್ಥಾನದ ಗೋಡೆ, ಗಡಿ ತೆಂಕಲು ನಾನು ಈ ಸ್ಥಳಕ್ಕೆ ಇಕ್ಕಿದ ಪಾಗಾರಗಡಿ, ಪಡವಲು ನಡವರಾಜಬೀದಿ ಇಂತು ಚತುರ್ಗಡಿಯಿದೊಳಗುಳ್ಳ ತಿರುಮಲ ದೇವರ ದೇವಸ್ಥಾನ. ಅಲ್ಲಿ ಇದ್ದ ದಿಂಡಿ ಉತ್ಸವದ ತಿರುಮಲ ದೇವರು, ದೇವರ ಉಪಕರ್ಮ ಮುಂತಾದ ಪೂಜೆ ಸಂಗ್ರಹವನ್ನು ನಾನು ನಿಮಗೆ ದಾನಧಾರಾಪೂರ್ವಕ ಪೂಜೆ ಮಾಡುವತೇಕೊಟ್ಟೆನು. ಆ ದೇವರ ಸನ್ನಿಧಿಯಲ್ಲು ನಡೆವ ವಿನಿಯೋಗಕ್ಕೆ ಪ್ರಾಕು ನನ್ನ ತಂದೆ ಅನಂತ ಮಲ್ಲೆರು ಹುಟ್ವಳ್ಳಿಯಲ್ಲಿ ಧರ್ಮಕ್ಕೆ ಬಿಡುವರೆ ಮಾಡಿಕೊಂಡು ಧರ್ಮಸಾಧನದ ಸ್ಥಳಂಗಳೊಳಗೆ ತಾಂಬನಲ್ಲಿ ನಾಳ್ಕಂಡಗದ್ದೆ ಮುಡಿ ೨॥, ಗೋಳೀಅಡಿಕೊಡಗೇ ತಕ್ಕೆ ಮುಡಿ ಕುಡಾಗದ್ದೆ ಮುಡಿ ೩ ಅಕ್ಷರದಲ್ಲು ಗದ್ದೆ ಮುಡಿ ಮೂರು ಹತ್ತು ಹಾನಗೆ ಕಟ್ಟಿದ ಗೇಣಿ ವರುಷ ವಂದಕ್ಕೆ ಅಕ್ಕಿ ಮುಡಿ ೧೩ ಅಕ್ಷರದಲ್ಲು ಹದಿಮೂರುವರೆ ಮುಡಿ ಅಕ್ಕಿಗೆ ನನ್ನ ತಂದೆ ಅನಂತ ಮಲ್ಲೆರ ಹೆಸರಲ್ಲು ದೇವಸ್ಥಾನದ ತಿರುಮಲ ದೇವರ ಸನ್ನಿಧಿಯಲ್ಲಿ ನಡೆವ ಅಂಗರಂಗ ನೈವೇದ್ಯ

ಅನ್ನ ಸತ್ರ ಮುಂತಾಗಿ ನಡವ ಧರ್ಮದ ವಿವರ –

ತಿರುಮಲ ದೇವರ ಅಮೃತಪಡಿಗೆ ಅಕ್ಕಿ ಮುಡಿ ೫ ದ್ವಾದಶಿ ೧ರ ಅಕ್ಕಿ ಹಾನೆ ||| ಜನ ೧೨ರ ಲೆಕ್ಕ ದ್ವಾದಶಿ ೧ರ ಹಾನೆ ೯ಲ್ಲು – ದ್ವಾದಶಿ ೧೫ರ ಅಕ್ಕಿ ಮುಡಿ ೩|೫ ಕಾರ್ತಿಕ ಮಾಸದ ಹರಿಜಾಗರ ೧೫ರ ಅಕ್ಕಿ ಮುಡಿ ||| ಉತ್ತಾನ ದ್ವಾದಶಿಗೆ ರಾತ್ರಿಗೆ ಮಹಾ ಉತ್ಸವಕ್ಕೆ ಅಕ್ಕಿ ಮುಡಿ ೧ ಕಾರ್ತಿಕ ಶು ೧೫ ವನಭೋಜನದ ಉತ್ಸವಕ್ಕೆ ಅಕ್ಕಿ ಮುಡಿ ೧ ಏಕಾದಶಿ ಜಾಗರ ೨೪ರ ಎಣ್ಣೆ ಹಾನೆ ೯ರ ಅಕ್ಕಿ ಮುಡಿ ೧ ಕಾರ್ತಿಕ ಮಾಸ, ವೈಶಾಖ ಮುಂತಾದ ಮಾಸಂಗಳಲ್ಲಿ ರಾತ್ರೆ ನಾಗ ಪುರಾಣ ದೀಪಕ್ಕೆ ಎಣ್ಣೆ ಹಾನೆ ೫ರ ಅಕ್ಕಿ ಮುಡಿ ||| ಸಹಾ ಅಕ್ಕಿ ಮುಡಿ ೧೩ ಹಾನೆ ೫ ಧನುರ್ಮಾಸದಲ್ಲಿ ಪ್ರಾತಸ್ನಾನದ ನೈವೇದ್ಯಕ್ಕೆ ದಿನ ೧೫ರ ಅಕ್ಕಿ ಮುಡಿ ೧೩|| ಅಕ್ಷರದಲ್ಲಿ ಹದಿಮೂರುವರೆ ಮುಡಿ ಅಕ್ಕಿಯ ಧರ್ಮವನ್ನು ನಡಿಸಿ ಬಂದಿರಿ. ದೇವಸ್ಥಾನದ ತಿರುಮಲದೇವರ ಸನ್ನಿಧಿಯಲ್ಲಿ ಬರೆದ ಪ್ರಮಾಣಿ ನ ಉತ್ಸಹಂಗಳಲ್ಲಿ ನಾನೂ ಸ್ಥಾನಿಕರೂ ಬಂದು ಮಾಡಿದಂಥಾ ಧರ್ಮವನ್ನು ಕೃಷ್ಣಾರ್ಪಣವನ್ನು ಮಾಡಿ ಕಾಲಕಾಲಕ್ಕೆ ನಡೆದು ಬಂದೇನು. ಮರ್ತುಮಲ್ಲೆರು ತಮ್ಮ ತಂದೆ ನಾರಾಯಣ ಮಲ್ಲೆರ ಹೆಸರಲ್ಲು ನಡೆದ ನಂದಾದೀಪ್ತಿಗೆ ಹಿರಿ ಅಂತ ಶೆಟ್ಟಿ ಕೇರಿಯ ಎಂಟು ಮನೆಗಳ ಬಿಟ್ಟ ಸಂಬಂಧ ಈ ಸ್ಥಳವನ್ನು ದೇವರ ಧರ್ಮಕ್ಕೆ ಬರೆದು ಆಳಿಕೆಗೆ ಬಂದ ಸಂಬಂಧ ಆ ಮೂಲಗಾರತಿ ಈರಮ್ಮಾ ಸೆಟ್ಟಿ ತೆರುವ ತೆರು ಗ 2–0 ಕಾಮಾಕ್ಷಿ ದೇವತೆಯ ಸನ್ನಿಧಿಯಲ್ಲು ನಡೆವ ನಂದಾದೀಪ್ತಿಗೆ ನೆಲೆದೆರಿಂದ || ಈ ಸ್ಥಳದ ತೆರು ಅರಮನೆಗೆ ಸಲ್ಲುವದು. 2 ಸಹಾಯೆರಡು ಯೆಳಣ ಆಡದ ತೆರಂನು ತಿರುಮಲ ದೇವರಿಂದ ಕೊಡಿಸಿ ಕೊಟ್ಟು ನಾರಣಮಲ್ಲರ ಹೆಸರ ನಂದಾದೀಪ್ತಿಯನ್ನು ನಡಶಿಬಂದಿರಿ. ಈ ದೇವಸ್ಥಾನದಲ್ಲಿ ನೀವು ಇಹಲ್ಲಿ ತನಕ ಪೂಜೆ ಮಾಡಿಸಿ ಬಂದಿರಿ. ಒಂದು ಸಮಯಕ್ಕೆ ನೀವು ತೀರ್ಥ ಯಾತ್ರೆಗೆ ತೆರಳಿದರೆ ನನಗೆ ಅನುಕೂಲವಾದ ನಮ್ಮ ವರ್ಗದ ಬ್ರಾಹ್ಮಣರೀಗೆ ಕಟ್ಟು ಮಾಡುವಿರಿ. ಈ ದೇವಸ್ಥಾನದ ಜೀರ್ಣೋದ್ಧಾರ ಉತ್ತರೋತ್ತರ ರೂಢಿಯನ್ನು ಮಾಡಿಸಿ ಬಂದಿರಿ. ಈ ದೇವಸ್ಥಾನದ ಆದಿಪತ್ಯವನ್ನು ಸ್ಥಾನಿಕರಾಗಿ ಇದ್ದ ನಾವೇ ನೋಡಿಬಂದೆವು. ಈ ಬರೆದ ಪ್ರಮಾಣಿನಲ್ಲಿ ನಿಮ್ಮ ಶಿಷ್ಯ ಪರಂಪರೆಯಾಗಿ ನನ್ನ ಸಂತತಿಯವರ ಕೂಡಿಕೊಂಡು ಇದ್ದು ಬಂದಿರಿ ಎಂದು ಕೊಟ್ಟ ಸಾಧನ. ಇಂತೊಪ್ಪುವುದಕ್ಕೆ ಸಾಕ್ಷಿಗಳು – ನಾರಣಪ್ರಭುಗಳ ಮಗ ಲಕಬಾಳ ಪ್ರಭು, ಲಕರಸ ಕಮತಿರ ಮಗ ಲಕರಸ ಕಮತಿ ಕರ್ತುವಿನ ವಪ್ಪಿ ತಾ ಕರ್ತು ಬರಹಾ–ಸಾಕ್ಷಿಗಳ ಬರಹಾ ಇಂತಿವರ ಉಭಯ ಅನುಮತದಿಂದ ಬರದಾತ ರವಳಪ್ಪ ಶಾನುಭೋವರ ಮಗ ಕಾವಯನ ಬರಹದ ಸಾದನಾ. (ಯಥಾನಕಲು)

(ನೋಟ್ಸ್)

ಈ ದಾಕ್ಲೆಯಲ್ಲಿ ಕಾಣುವ ಯಾದವೇಂದ್ರ ಸ್ವಾಮಿಗಳವರು ಕೊಂಕಣಸ್ಥ ಬ್ರಾಹ್ಮಣವರ್ಗದಲ್ಲಿ ಕುಂಭಕೋಣಮಠದ ವಿಜಯೇಂದ್ರ ತೀರ್ಥರು (ಸುರೇಂದ್ರ ತೀರ್ಥರ ಶಿಷ್ಯರು) ಸ್ವೀಕರಿಸಿದ ಶಿಷ್ಯ ಸ್ವಾಮಿಗಳಾಗಿರುತ್ತಾರೆ. ಯಾದವೇಂದ್ರ ತೀರ್ಥರಕ್ಕಿಂತ ಮುಂಚೆ ಕೊಂಕಣಸ್ಥ ಬ್ರಾಹ್ಮಣ ವೈಷ್ಣವ ವರ್ಗದಲ್ಲಿ ಸನ್ಯಾಸಾಶ್ರಮ ಯಿರಲಿಲ್ಲ ಎಂತ ಕಾಣುತ್ತದೆ.-

ಶ್ರೀ ಶಾಲಿವಾಹನಶಕ ೧೭೦೮ನೇ ವಿಶ್ವಾವಸು ಸಂ। ರದ ಆಶಾಡ ಶು ೩ ಶನಿವಾರ ಆಶ್ಲೇಷಾ ನಕ್ಷತ್ರ ಈ ದಿನ ಸುಮತೀಂದ್ರ ಮಠದ (ಕುಂಭಕೋಣ) ಶ್ರೀ ಮದ್ವರದೇಂದ್ರ ತೀರ್ಥ ಶ್ರೀಪಾದಂಗಳವರು ಪುಣೆಯಲ್ಲಿ ನಾರಾಯಣ ಪೇಟೆಯಲ್ಲಿ ಹೊಸತಾಗಿ ಜಾಗ ತಗೆದುಕೊಂಡು ಮಠ ಕಟ್ಟಿಸಿ ಅಲ್ಲಿ ಇರುತ್ತಿರುವಾಗ್ಯ ನಮ್ಮ ಕಾಶೀಮಠದ ಶ್ರೀಮದ್ರಾಜೇಂದ್ರ ತೀರ್ಥ ಶ್ರೀಪಾದಂಗಳವರು ಕಾಶಿಯಾತ್ರೆಗೆ ಹೋಗುತಾ ಇಲ್ಲಿಗೆ ಅಂದ್ರೆ ಪುಣೆಗೆ ಬಂದಾಗ ಸನ್ಮಾನ ಪುರಸ್ಸರವಾಗಿ ಕರೆ ಕಳುಹಿಸಿದರಿಂದ ಭೇಟಿಯಾದ ಪ್ರಕಾರ ನಾವು ಅವರ ಮಠಕ್ಕೆ ಹೋಗುವಾಗ್ಗೆ ಅವರ ಆದ್ಯಂತ ವಿದ್ವಾಂಸರು ಪುರೋಹಿತರು ಪಾರಪತ್ಯಗಾರ ರಾಯಸದವರು ಮುಂತಾದ ಬ್ರಾಹ್ಮಣರು ಮಠದ ಹೊರಗೆ ಬೀದಿಗೆ ಬಂದು ಸಾಷ್ಟಾಂಗ ನಮಸ್ಕಾರ ಮಾಡಿ ಒಳಗೆ ಕರಕೊಂಡು ಹೋಗಿ ಆಮೇಲೆ ನಾವು ಅವರಿಗೆ ನಮಸ್ಕಾರ ಮಾಡೋದೇ ನಮಗೆ ಕ್ಷೇಮಾಲಿಂಗನ ಎಂದರೆ ಆಗೋದೇ ಪ್ರಕ್ಷಾಲನೆ ಮಾಡಿದ ಮೇಲೆ ಮಂತ್ರಾಕ್ಷತೆ ನಮಗೆ ಕೊಟ್ಟು ನಮ್ಮ ಕೈಯಿಂದ ತಮ್ಮ ಬಗ್ಗೆ ವಿದ್ವಾಂಸರಿಗೆ ಪುರೋಹಿತ್ಯ ಪಾರಪತ್ಯಗಾರ ರಾಯಸದವರು ಮುಂತಾದವರಿಗೆ ಊರಿನವರಿಗೆ ಸಹಾ ಪೂರ್ವ ಮರ್ಯಾದಾನುಸಾರವಾಗಿ ಮಂತ್ರಾಕ್ಷತೆಕೊಡಿಸಿ ಸಮಸ್ತರಿಗೂ ನಮ್ಮ ಸಂಗಡ ಕೊಟ್ಟು ಬಿಡಾರಕ್ಕೆ ಮುಟ್ಟಿಸಿದರು. ಅವರು ನಮಗೆ ವೆಚ್ಚ ಶಾಲ ಜೋಡಿ ೧ ರೊಕ್ಕ ಪುತ್ತಳಿ ೨ ಬ್ರಾಹ್ಮಣದಕ್ಷಿಣೆ ರೂ. ೫-೦ ಶೂದ್ರರಿಗೆ ರೂಪಾಯಿ ೧-೦ ಅವರು ನಮಗೆ ಕೊಟ್ಟ ಶಾಲು ೧ ಕಾಣಿಕೆಗೆ ಕೊಟ್ಟ ಫಲವಸ್ತು ಅದೇ ನಮಗೆ ತಿರುಗಿ ಕೊಟ್ಟಿದ್ದಾರೆ.

## 07. ಫಾರ್ಶಿ ಭಾಷೆಯಲ್ಲಿ ಕ್ರಯಪತ್ರ

ಕಾಶಿಯಲ್ಲಿ ಶ್ರೀಮದುಪೇಂದ್ರತೀರ್ಥ ಸ್ವಾಮಿಗಳು ಮಠದ ಬಗ್ಗೆ ಸ್ಥಳ ಕ್ರಯ ಪಡೆದ ಕ್ರಯಪತ್ರ ಫಾರ್ಶಿ ಭಾಷೆಯಲ್ಲಿ ಫಾರ್ಶಿ ಬರಹದಲ್ಲಿ ಉಂಟು. ಅದರ ಭಾಷಾಂತರ ಪುತ್ತೂರ ವಕೀಲ ಬೈಲೂರ ಶಿವರಾಮ ಹೊಳ್ಳರಿಂದ ಮಾಡಿಸಿದ ಯಥಾ ನಕ್ಲು ಮೂಲ ಪ್ರತಿಯ ನಕಲು

ಬಿಸ್ಮಿ ಸಭಾನ್ವಾ basmisubhahan

Mardi nafiz - ul tasraf mukhambis ism o nasab - i -Khan gangadis Rewat ibn Biswanath rawath ibn narain rawat dar ul - qaza - i bald Banarasi hazir amod aitraf narmed ki yak haveli khushlagar, yak rawaq sharqiru - yah yak khanki masaqap ba jule o baranka mah sahana ki arzash sizhah Zerahhi o tanlash Bisst o sih zin ahhi o qata duzam taulash hazdah o new zira ahli arhash yardan nim zira ahli waqa dar Brahma ghat and wum bald mazkurah

hahadood bahadood arba

Shargi

Alutasil liaghat

minhu albab o ba aizarab

Uagrubi

mutusil Bahal

shimali

kharaj vishwamitra

O baz Barambhatata

ghat mazhur

jamubi bu durga ghat

mashoor

baja meena haqoogo muragi kash o ma kulla qalilo kashir hass giha ou menha mamlukah maqbuzah man ast

Chananehat ta dar mahal rasraf malkana I - khud daram khaliyam arz al - gair mamanja jua zan - ul - bi babizlah mublaq pravasad o bist o yak rupia

al nisaf minhu rakeed ul asi 2 saḍo shast neem adad rupia ki maar quimati an murakhas kard badust Upivdra Tirth, bil Sonar Bhat Bin Martha Bhat dakhan koknan farokhtam biyan sahiyan fahizan lazuman

Mulajaman

Arian an alma ani mutazilabila yogn khahist

lagaroor

.bila ijbar

ikrah

mustari mazkur

beija master ra

ba mublaq mazkur

ba tah vuqbhat I khad hasui nameed

O taqabaz badlaen Bain ul tarfain al mush larrain

waqa shud Zamon ruh sharayi bar baya mastoor amawaqa ayad

O kana zahika Mahazoor al adool war Ilaquat

Balarukh

Bist nuham

mah safar

Khatam

Alla bil khair wall tam 1A35

(Left seal) Rakhal Shah

Hamja Niawatulla

(Right seal) (illegible)

In the name of the praised Apers capable of selling known by the name of Jagdish Rawat son of Biswanth Rawat, son of Naraina Rawath in the edministrative town of Benarese being present makes it known that a house "Khushlakar " a portics east faced, a compartment means having a wooden celling and veranon with court yard whose width is 13 ild many ziras and length 23 ordinary zeras and the second portion seven ten and half ordinary zira and breadth eleven and half ordinary zira situated in Brahma ghat within the town aforesaid bounded by four

east

adjoining ghat and from this the gate and the drain west adjoining channel

North Kharaz (inlet) Biswamitr and the aforesaid Brahmatala Ghat South by the side of the famous Durga ghat with all the rights amd appurtenced and with all the small and l and the great which is in it or form it which is in my ownership and possession

Therefore till the time of sale of which I am the owner

free from the objections of others fit to be sold, for the price of 521 five hundred and twenty one rupees

half of which of the original price 2 hundred and sixty and half numbera rupees.

That is but of the price if intrusted in the hands of Upendra Thirth and son of Sonar Bhat son of

Marthau Bhat souther Konkani I have sold by sale trulu validly appropreately completely free from ambiguous meanings without deceitful desire without conceit

and without farce

and without un willingness and the within buyer

to the within seller

for the said price

with my own desire

there shall be confirmed and possession mis head to the purchaser

shall be established

and guarentee and legal deed upon the seller within shall be a fact

and this don

By the department of justice and revenue

dated twenty nine

Month Safar

End

May god give goodness and great wealth 1A35

Rukhin Shah Hamja

Niamtulla

ಇದು ಸುಮಾರು ಕ್ರಿ ಶ. 1626ನೇ ಜನವರಿ ತಾ. 7 ಆಗಬಹುದು. ಕಾಶಿಮಠ ಇರುವ ಸ್ಥಳ ಕ್ರಯಪತ್ರ ೧೦೩೫ನೆ ಹಿಜರಿಯ ಆರಂಭ ೧೬೨೫ ಸಪ್ಟಂಬ್ರ ೨೩ ಇವಕ್ಕೆ ಕೂಡಿಸಬೇಕಾದ್ದು ಮೊಹರಂ ದಿನ ೩೧-ದಿನ ೨೯ ಕೂಡಾ ೬೦ ದಿನಗಳು – ಅಂದ್ರೆ ೧೬೨೫ ನವಂಬರ್ ೨೨ನೇ ತಾರೀಕು ಆಗುತ್ತದೆ.

## 08. ಕಾಶಿಮಹಾರಾಜರು ಕಳುಹಿಸಿದ ಪತ್ರ

ಶ್ರೀ ಜ್ಞಾನೇಂದ್ರ ತೀರ್ಥ ಸ್ವಾಮಿಗಳಿಗೆ ಕಾಶಿಮಹಾರಾಜರು ಕಳುಹಿಸಿದ ಪತ್ರದ ನಕಲು

श्रीरामजी

सिधि श्रीमहाराजधिराज महाराजा श्रीसवाइ ईश्वर संघजी देववचनात ग्यान इंद्र सिष स्वामी माधवेंद्र का दिस्येसुप्रसादवंच्या अमप्रेचि श्री कासीजी मैथांका मठके पासिराजमंदिरकानाळ कामी जायगाछीसो अबप्रव पंडित रामचंद्र जी काळिच्यासौथामीनेटकरी छैसो चक्र जमा सौ ब्रामणौ ब्रमपराज्य जो सरकार का मुतसदीर्घासौमुजां हिमतहोसी सीमिती का तीवदि संवत १८०३

ಇದು ವಿಕ್ರಮಶಕ 1803 ಆಗಿರುತ್ತದೆ. ಇದು ಕ್ರಿ.ಶ. 1746 ಆಗುತ್ತದೆ.

ಶಾಲಿವಾಹನ ಶಕ 1664ನೇ (ಕ್ರಿ.ಶ. 1742) ದುಂದುಭಿ ಸಂ। ರದ ಪುಶ್ಯ ಶು। 11ರಲ್ಲು ಕಾಶೀಮಠದ ಶ್ರೀಮತ್ ಮಾಧವೇಂದ್ರ ತೀರ್ಥ ಶ್ರೀಪಾದಂಗಳವರೀಗೆ ಮಳಲಿ ಬಾಬಭಟ್ರ ಮಗ ನಾರಾಯಣನು ಬರಕೊಟ್ಟ ದಾನಪತ್ರಿಕೆ, (ಕೊಡಿಯಾಲದ ಪೇಟೆಯುಲ್ಲಿ ವಡೇರಮಠದ ಕೇರಿಯುಲ್ಲು ಒಂದು ಮನೆ ಹಿತ್ಲು ಕೂಡ ದಾನಮಾಡಿಕೊಟ್ಟಿದ್ದಾಗಿ) ಹಿಜರಿ ಶಕ 1116ನೇ ರಜಿಬ 22ರಲ್ಲು ಸೊರಭಟ್ರಮಗ ಕೃಷ್ಣ ಭಟ್ರ ಮಗ ರಾಘವ ತೀರ್ಥರು (ಇವರ ಮೈಬಣ್ಣವು ಗೋಧಿಯಂತೆ, ಅಗಲವಾದ ಹಣೆ, ನಡುವೆ ಅಗಲವಾಗಿ ಜಾಗಬಿಟ್ಟಿರುವ ಹುಬ್ಬುಗಳು ವಿಶಾಲವಾದ ಕಣ್ಣುಗಳು ಗಡ್ಡದ ಕೆಲವು ರೋಮಗಳು ನರೆತಿವೆ. ಕಿವಿಯ ಪಾಳೆಗೆ ತೂತುಯಿದೆ. ಬಲಕನ್ನೆಯ ಮೇಲೆ ಮಚ್ಚೆಯಿದೆ. ಸಾಧಾರಣ 55 ವರ್ಷ ಪ್ರಾಯು) ಬನಾರಸಿನ ಮಹಮ್ಮದಾಬಾದಿನಲ್ಲಿರುವ ಕೃಷ್ಣ ಭಟ್ರ ಮಗ ಅನಂತ ಭಟ್ರ ಮಗ ನಾರಾಯಣ ಭಟ್ರಿಗೆ ಬರಶಿಕೊಟ್ಟ ದಾನಪತ್ರ (ಮಠದಲ್ಲಿದ್ದ ಹಿತ್ತಾಳೆ ಮತ್ತು ತಾಮ್ರದ ಪಾತ್ರೆಗಳು ವಸ್ತ್ರಗಳು 2 ಗ್ರಂಥಗಳು ಇತ್ಯಾದಿ) ಕಾಶಿಮಠದ ಸ್ಥಳ ಕಾಶಿ ಅರಸರ ತಾಬೆಯಲ್ಲಿದ್ದದನ್ನು ಜ್ಞಾನೀಂದ್ರ ತೀರ್ಥಸ್ವಾಮಿಗಳ ಸ್ವಾಧೀನ ಬಿಟ್ಟುಕೊಡಬೇಕಾಗಿ ಆದ ಹುಕುಂ ಪಾರ್ಶಿ ಬರಹದಲ್ಲಿ ಉಂಟು. ಅದನ್ನು ಓದಿ ಅರ್ಥ ಮಾಡಲು ಅನುಕೂಲವಾಗಲಿಲ್ಲ. ಅದರಲ್ಲಿ 19 ರಮಜಾನ 1159 ಹಿಜರಿ ಎಂತ ತಾರೀಕು ಅದೆ. ಇದು ಕ್ರಿ.ಶ. 1746ನೇ ಅಕ್ಟೋಬರ್ 19 ಆಗಬಹುದು. ಇದರ ಸರಿಯಾದ ನಕ್ಲು ತರ್ಜುಮೆಯಿದೆ. ಬೂಕಿನಲ್ಲಿ ಮುಂದೆ

ಬರೆದಿದೆ. ಮತ್ತು ಜ್ಞಾನೇಂದ್ರ ಸ್ವಾಮಿಗಳ ವಿಳಾಸ ಹೀಗೆ ಬರೆದಿದೆ.

ಜ್ಞಾನೀಂದ್ರ ತೀರ್ಥ ಇಬ್ನಿ ಮಾಧವೇಂದ್ರ ತೀರ್ಥ, ಇಬ್ನಿ ದೇವೇಂದ್ರ ತೀರ್ಥ, ಇಬ್ನಿ ರಾಘವೇಂದ್ರ ತೀರ್ಥ, ಇಬ್ನಿ ಉಪೇಂದ್ರ ತೀರ್ಥ. ಈ ಹುಕುಮಿನ ನವಾಬ ಅಬುಲ ಮನ್ಸೂರ ಖಾನ ಬಹುದೂರ ಸಫದರ್‌ಜಂಗ ಇವರು ಬಳವಂತ ಸಿಂಗರಾಜ ಇವರಿಗೆ ಬಂತು. ಆ ಪ್ರಕಾರ ಅವರು ಸದ್ರಿ ಹುಕುಮಿನ ಮೇಲೆ ಶ್ರೀ ಜ್ಞಾನೀಂದ್ರ ತೀರ್ಥಸ್ವಾಮಿಗಳು ಸ್ವಹಸ್ತಾಕ್ಷರದಿಂದ ಈ ಕೆಳಗಿನಂತೆ ಬರೆದಿಟ್ಟಿದ್ದಾರೆ.

राजीनामा मनसूरउल्ली (दुर्गाघाट) लिखितं ज्नानींद्र तीर्थ आमची हवेली जागा राजमंदिरच्या कबज्यांत होती त्यास नवाब मनुसूर आल्लिखानाचा परवाना बळवंत शिंगराजाच्या नांवे आलि यावर बळवंत शिंगराजाच्या मारफात हवेली जागा भरून पावलो हा राजीनामा लिहिलिसहि

## 09. ಒಂದು ಪ್ರೋನೋಟು ಮತ್ತು ಕೆಲವು ರಹದಾರಿಗಳು

1798ನೆ ಇಸವಿ ದಶಂಬರ ತಾ. 22ರಲ್ಲು ತಲಚೇರಿಯಲ್ಲಿರುವಾಗ ಶ್ರೀ ಸುರೀಂದ್ರ ತೀರ್ಥ ಸ್ವಾಮಿಗಳು ಕಂಪೆನಿ ಸರಕಾರಕ್ಕೆ ರೂಪಾಯಿ 12,500 ಶೇಕಡಾ 12/ರ ದರದ ಬಡ್ಡಿ ಮೇಲೆ ಸಾಲ ಕೊಟ್ಟು ಪ್ರೋನೋಟು ಬರಿಸಿಕೊಂಡಿದ್ದಾರೆ. ಸದ್ರಿನೋಟು ಮಠದಲ್ಲಿತ್ತು. ಅದರ ಫೋಟೋ ತೆಗೆದು ಶ್ರೀ ಸುಕೃತೀಂದ್ರ ತೀರ್ಥ ಸ್ವಾಮಿಗಳು ಸರಕಾರಕ್ಕೆ ಕಳುಹಿಸಿ ಹಣಕೊಡಿಸಬೇಕಾಗಿ ಅರ್ಜಿ ಮಾಡಿದರು. ಆ ನೋಟು ಬರಕೊಟ್ಟು ಹಣ ಪಡೆದ ಸಂಗ್ತಿ ಸರಕಾರದ ದಾಕ್ಲೆಯಲ್ಲಿ ಕಂಡುಬರಲಿಲ್ಲ ಎಂತ ಹುಕುಂ ಬಂತು ಎಂತ ಹೇಳ್ತಾರೆ. ಅಸ್ಲಿ ನೋಟು ಹಾಜ್ರು ಮಾಡಿ ಅರ್ಜಿ ಕೊಟ್ರೆ ಆಗಬಹುದೆಂತ ಹೇಳುವಾಗ್ಯೆ ಮಠದಲ್ಲಿ ಅಸ್ಲಿ ನೋಟು ಕಾಣೆ ಆಗಿದೆ.

ಈ ಸ್ವಾಮಿರೀಗೆ ಬಿರುದಾವಳಿ ಕುರಿತು ಕೆಪ್ಟನ ಮನ್ರೋ ದೊರೆಗಳು 1209ರ ಪಸ್ಸಲಿ ಜೂನ್ 20ರಲ್ಲು ಕೊಟ್ಟ ಹುಕುಮಿನಲ್ಲಿ ನಕ್ಲು ಹಿಂದೆ ಬರೆದದೆ.

Calicut 7th September 1799

This is to certify to all the company's officers Civil and military in Malabar that Surindra Thirth Sreepad Bishop of the Concanee Brahmin caste has the permission of the president of the commission to pass from Tellicherry to Benarese with his nesessary baggage and attendents in number about 12 Hamalls 1 palanquin with 12 bearers 5 bullocks with drivers 3 horses and etc.

By order of the president of the commission

1801ನೇ ಇಸವಿ ದಶಂಬರ ತಾ. 2ರಲ್ಲು ಬೊಂಬೈ ಕಂಪೆನಿ ಸರಕಾರದ ಮೊಹರು ಇರುವ ರಹದಾರಿ ಇಂಗ್ಲಿಷ್, ಹಿಂದುಸ್ಥಾನಿ, ಉರ್ದುಭಾಷೆಯಲ್ಲಿ ಬರೆದ್ದು ಕಲ್ಯಾಣದ ಹಾದಿಯಾಗಿ ಕಾಶಿ ಯಾತ್ರೆಗೆ ಹೋಗುವ ಬಗ್ಗೆ ಕೊಟ್ಟದ್ದು ಉಂಟು–

14–7–1804 ಜಿಲ್ಲಾ ಬನಾರಸ ಅಧಿಕಾರಸ್ಥಾನದಿಂದ ಬನಾರಸದಿಂದ ಅಲ್ಹಾಬಾದಿಗೆ ಹೋಗುತ್ತಾರೆ. ಅವರ ಜೊತೆಯಲ್ಲಿ ಮ್ಯಾನಾ ಸವಾರಿ ಜನ 3, ಕಾದಿ ಜನರು 3, ಹೆಣ್ಣು ಕುದುರೆಗಳು 3, ಸಂಗಡ ಹೋಗುವ ಬ್ರಾಹ್ಮಣ ಜನ 25 –

1811ನೇ ಇಸವಿ ಅಗೋಸ್ತು ತಾ. 28ರಲ್ಲು ಕಾನಡಾ ಜಿಲ್ಲಾ ಮೇಜಿಸ್ಟ್ರೇಟ್ ಅಧಿಕಾರ ಸ್ಥಾನದಿಂದ ಗೋವೆಗೆ ಹೋಗಲು ಕೊಟ್ಟ ರಹದಾರಿ.

ತಾ. 11–12–1812ಲ್ಲು ಕಾಶಿಯಿಂದ ಗಯಾ ವಿಷ್ಣುಪಾದಕ್ಕೆ ಹೋಗುವಾಗ್ಯೆ ಸುಂಕಮಾಫಿ ಬಗ್ಯೆ ಹುಕುಂ

### ಶ್ರೀಮತ್ ವಿಬುಧೇಂದ್ರ ತೀರ್ಥ ಸ್ವಾಮಿಗಳವರೀಗೆ ರಹದಾರಿ

988 ಕೊಲ್ಲಂ (1812ನೇ ಇಸ್ವಿ) ವೃಶ್ಚಿಕ ತಿಂಗಳು 6ನೇ ದಿನ ಬಡಗುಜಿಲ್ಲಾ ಮೇಜಿಸ್ಟ್ರೇಟ್ ಕೊಡತ್ತಿಯಿಂದ (ಕೋರ್ಟನಿಂದ) ಮಂಗ್ಲೂರ ದಾರಿಯಾಗಿ ಕಾಶಿಗೆ ಹೋಗುವ ಬಗ್ಗೆ ರಹದಾರಿ.

1813ನೇ ಇಸ್ವಿ ಸೆಪ್ಟಂಬರ್ ತಾ. 2ಲ್ಲು ಕಾನಡಾ ಜಿಲ್ಲಾ ಮೆಜಿಸ್ಟ್ರೇಟ್ ಅಧಿಕಾರ ಸ್ಥಾನದಿಂದ ಗೋವೆಗೆ ಹೋಗಲು ಕೊಟ್ಟ ರಹದಾರಿ.

1819ನೇ ಜನವರಿ ತಾ. 2ಲ್ಲು ಕಾನಡಾ ಜಿಲ್ಲಾ ಕಲೆಕ್ಟರ್ ಮೆಜಿಸ್ಟ್ರೇಟ್ ಒನರೆಬಲ ಥೋಮಸ್ ಹೆರಿಸ ಸಾಹೇಬರು ಕಾಶೀ ಯಾತ್ರೆಗೆ ಹೋಗುವ ಬಗ್ಯೆ ಕೊಟ್ಟ ರಹದಾರಿ.

1820 ಇಸ್ವಿ ಜನವರಿ ತಾ. 27ರಲ್ಲು ಇಡೀ ಜೊಂಬಾಯಿ ಪ್ರಾಂತ್ಯವನ್ನು ಸಂಚರಿಸಲು ಜೊಂಬೈ ಸರಕಾರದವರು ಕೊಟ್ಟ ರಹದಾರಿ.

ತಾ. 19–11–1820ರಲ್ಲು ಬನರಾಸ ಜಿಲ್ಲಾ ಕಚೇರಿಯಿಂದ ಊರಿಗೆ ಹೋಗುವ ಬಗ್ಗೆ ರಹದಾರಿ ಇವರ ಸರಂಜಾಮ ಪಾಲಕಿ 2 ಬ್ರಾಹ್ಮಣರು 30 ಬೋಪಿಜನರು 22 ಬೇರೆ ನೌಕರರು 17 ಜಾನವಾರ 15 ಸಣ್ಣ ದೊಡ್ಡ ಹೊರೆಗಳು 37 ಇವರ ಸಂಗಡ ಇವರ ಶಿಷ್ಯರು ಸುಮತೇಂದ್ರ ಸ್ವಾಮಿಗಳು ಇದ್ದರು ಎಂತ ಕಾಣುತ್ತದೆ.

1830ನೇ ಸೆಪ್ಟಂಬರ್ 6ಲ್ಲು ಕಾನಡಾ ಜಿಲ್ಲಾ ಪ್ರಿನ್ಸಿಪಾಲ ಕಲೆಕ್ಟರ್ ಮಿ. ಡಕಿಂನ್ಸನ್ ಸಾಹೇಬರು ರಾಮೇಶ್ವರ ಯಾತ್ರೆಗೆ ಹೋಗುವ ಬಗ್ಗೆ ಕೊಟ್ಟ ರಹದಾರಿ ಕನ್ನಡ ಭಾಷೆಯಲ್ಲಿ ಉಂಟು.

ಈ ರಹದಾರಿಗಳಲ್ಲಿ ಸ್ವಾಮಿಗಳು ತಮ್ಮ ಪಾಲಕಿ ಇತ್ಯಾದಿ ಬಿರುದುಗಳೊಡನೆ ಹೋಗಬಹುದಾಗಿಯೂ ಕೆಲವು ಕುದುರೆಗಳು, ಆಳುಗಳು, ಸಶಸ್ತ್ರ ರೆಪಾತಿಗಳನ್ನು ತಮ್ಮ ಸಂಗಡ ಒಯ್ಯಬರುವಂತೆಯೂ ಇವರು ಹೋದಲ್ಲಿ ಸರಕಾರ ನೌಕರರು ಅಗತ್ಯ ಬಿದ್ದಲ್ಲಿ ಬೇಕಾದ ಅನುಕೂಲತೆಗಳನ್ನು ಇವರ ಖರ್ಚಿನಿಂದ ಒದಗಿಸಿಕೊಡಬೇಕಾಗಿಯೂ ಉಂಟು.

## ರೊಬಿನಸನ್ ಸಾಹೇಬರವರ ರಹದಾರಿ

ಕಾನಡಾ ಜಿಲ್ಲಾ ಮೆಜಿಸ್ಟ್ರೇಟ ರೊಬಿನಸನ್ ಸಾಹೇಬರವರು ರಹದಾರಿ ಆಂಕಿ ರಸ್ತೆ ಮಜ್ಲುಗಳಲ್ಲಿರುವ ಯಾಹೊತ್ತು ಸರಕಾರ ನೌಕರರೀಗೆ ಮಾಲುಂ ಬಂದದರಿವಿಲ್ಲಾ. ಕೊಂಕಣಸ್ಥ ಬ್ರಾಹ್ಮಣ ಜಾತಿಯವರ ಗುರುಗಳಾದ ಕಾಶಿಮಠದ ಶ್ರೀಮದ್ವಸುದೇಂದ್ರ ತೀರ್ಥ ಸ್ವಾಮೀರು ಕುಂದಾಪುರದಿಂದ ಆಗುಂಬೆ ಮಾರ್ಗವಾಗಿ ತಿರುಪತಿ ಯಾತ್ರೆಗೆ ಹೋಗುತ್ತಾರೆ. ಅವರ ಸಂಗಡ ಗಾಡಿ ೨ ಕುದ್ರೆ ೨ ಪಾಲ್ಕಿ ೧ ಬ್ರಾಹ್ಮಣ ಜ ೧೬ ಶೂದ್ರ ಜನ ೧೬ ಸಾಮಾನು ಹೊರೆ ೧೨ ಸಾಹಾಯಿರುತ್ತದೆ. ಅವರೀಗೆ ಮಾರ್ಗದಲ್ಲಿ ವಸ್ತಿಗೆ ಯೋಗ್ಯವಾದ ಸ್ಥಳ ವವಾಜಬಿ ಮೌಲ್ಯಕ್ಕೆ ಜಿನಸುವ ಮಜೂರಿ ಆಳಗಳು ಬೇಕಾಗಿದ್ರೆ ಅದು ಸಾಹಾ ಶಿಕ್ಕುವ ಬಗ್ಗೆ ಆಯಾಯಾ ಮಜ್ಲಲ್ಲಿ ಇರುವ ಸರ್ಕಾರ ಉದ್ಯೋಗಸ್ಥರು ಕುಮುಕ ಮಾಡತಕ್ಕದ್ದು. ಬ ತಾರೀಕು 25ನೇ ಸಪ್ಟಂಬರ ಸಂನ್ 1857ನೇ ಇಸವಿ ಮೊಕ್ಕಾಂ ಮಂಗ್ಳೂರು ಇಂಗ್ಲಿಷ ದಸ್ಕಾತು.

Robinson Asst. Magistrate

# 10. ಶ್ರೀ ಕೇಶವೇಂದ್ರ ಒಡೆಯರಿಗೆ ಬರಕೊಟ್ಟ ದಾನಪಟ್ಟೆ

ಹೆಮ್ಮಾಡಿ ಗೋಪಿನಾಥ ದೇವರ ವಿನಿಯೋಗದ ಬಗ್ಗೆ ಶ್ರೀ ಕೇಶವೇಂದ್ರ ಒಡೆಯರಿಗೆ ನಾರಾಯಣ ಕಮ್ತೀರು ಬರಕೊಟ್ಟ ದಾನಪಟ್ಟೆಯ ನಕಲು –

ಕೃತ್ತಿಕಾ ಮಹಾ ನಕ್ಷತ್ರದಲ್ಲಿ ಬರುವ ಸಂಕ್ರಾಂತಿ ಅಂದರೆ ವೃಷಭ ಸಂಕ್ರಮಣ (ತಾ. ಮೇ 13, 1668) ಕೀಲಕ ಸಂವತ್ಸರದ ಕೃತ್ತಿಕೆ ಸಂಕ್ರಾಂತಿ – ಇದ್ರಲ್ಲಿ ಕಾಣುವ ಕೀಲಕ ಸಂ। ರ ಎಂಬುದು ಶಾ. ಶ. 1590 ಆಗಬೇಕು. ಮುಂಚಿನ ಎಣಿಕೆ 1591. ಶಾ. ಶ. ಈಗಿನ ಪಂಚಾಂಗದಲ್ಲಿ ಕಾಣುವದಕ್ಕಿಂತ 1 ವರ್ಷ ಜಾಸ್ತಿಯಾಗುತ್ತದೆ. ಆದ್ರೆ ಮುಂಚಿನ ಎಲ್ಲಾ ದಾಖಿಲೆಗಳಲ್ಲಿಯೂ ಈಗಲೂ ಕೆಲವು ಪಂಚಾಂಗಗಳಲ್ಲಿಯೂ ಸಹ 1 ವರ್ಷ ಜಾಸ್ತಿ ಹಾಕುತ್ತಾರೆ.

ಪರಾಭವ ಸಂ। ರಕ್ಕೆ ಭಟ್ಕಳ ದಾನಪತ್ರದಲ್ಲಿ 1529 ಹಾಕಿದ್ದಾರೆ.– ಮೊದಲಾಗಿ ಬರೆದ ಅರ್ಥವೃತ್ತಿ ಪತ್ರ ಒಕ್ಕಣೆ ಕ್ರಮವೆಂತೆಂದರೆ ಹೆಮ್ಮಾಡಿ ಮಠ ಕಮತಿ ಮಗ ನಾರಾಯಣ ಕಮತಿಯು................ಮಂಜಿರ ಕಯಾ ಮಾಡಿಕೊಂಡ ಬಾಳ ಬೆಟ್ಟು ಮೂವತ್ತ ಮುಡಿ ಒಳಗೆ ಬಾಳಿನ ಚತುಃಸೀಮೆ ವಿವರ. ಬಡಾ ಹೊದ್ದು, ಸದಾನಂದ ಸೆಟ್ಟಿ ಮಠದ ಗೋಪಿನಾಥ ದೇವರ ದೇವಸ್ವದ ಗಡಿಯಿಂದ ಪಡುವಲು ಮತ್ತು ಬಡಗಲು ಸದಾನಂದ ಸೆಟ್ಟಿ ಮಠದ ಗೋಪಿನಾಥ ದೇವರ ದೇವಸ್ವದ ಗಡಿಯಿಂದ ತೆಂಕಲು, ಮೂಡಲು ವಾಮನ  ಸಂಕಣಿರಗಡಿ. ಕೊಂಕಣಿಗರ ಮಠದ ಗಡಿಯಿಂದ ಪಡುವಲು, ತೆಂಕಲು ವಾಮನ ಸಂಕಣಿರ ಗಡಿಯಿಂದ ಬಡಗಲು. ವಾಮನ ಸಂಕಣಿರ ಗಡಿಯಿಂದ ಪಡುವಲು ಮತ್ತು ತೆಂಕಲು ಸಾಲಗಡಿಯಿಂದ ಬಡಗಲು. ಸಾಲ ಗಡಿಯಿಂದ ತೆಂಕಲು, ಪಡುವಲು, ಕುಪ್ಪಣ್ಣಶೆಟ್ಟಿ ಆರವಾರದ ಗಡಿಯಿಂದ ಮೂಡಲು ............. ದ ಒಳಗೆ ಕಳಿಸಹ ಜಿತ್ತಣಕ್ಕೆ ಗದ್ದೆ ಮುಡಿ 6 ಆರು ಮುಡಿ ಗದ್ದೆ – ಮೂಡ ಹೊದ್ದಿನ ಮನೆ ಅಡಿಬೆಟ್ಟಿನ ಒಳಗೆ ಮೂರೊಂದು ಪಾಲು ತಂಗಿನ ಮರ.................ತೆಂಗಿನಮರ ಫಲ ಸಹ – ಪಡು ಹೊದ್ದಿನ ತೆಂಗಿನ ತೋಟದೊಳಗೆ ಮೂರೊಂದು ಪಾಲು ಸಹಾ ಆರು ಮುಡಿ ಗದ್ದೆ ಕಳಿಸಹಾ ಆರವಾರ ಮಾಡಿ ಕೊಟ್ಟು ಶ್ರೀಮತ್ ಯಾದವೇಂದ್ರ ತೀರ್ಥ ಶ್ರೀಪಾದಂಗಳವರ ಶಿಷ್ಯರಾದ ಕೇಶವ ವಡೇರ ಶ್ರೀಯವರಿಗೆ ಅರ್ಥ ವೃತ್ತಿಗೆ ಕೊಟ್ಟು ನಾನು ಮಾಡಿಕೊಂಡ ಕೈ ಕಟುನು

ಕೊಟ್ಟು ಆರರ್ಥವನು ನಾನು ತೆಗೆದುಕೊಂಡನು ತಮ್ಮ ಮಠದ ಗೋಪಿನಾಥ ದೇವ
ಶಾಂತಿವೃತ್ತಿಗೆ ಬಿಟ್ಟು ಈ ಅರ್ಥ ಬಂದರೂ ವೃತ್ತಿ ಬಂದರೂ ದೇವರೀಗೆ ಈ ಪ್ರಮಾಣೆ
.............ಕೊಡುವಂತಾಗಿಹ ಆದ ಹೊಣೆ ಸೋರೆಪ್ರಭು ಕಟುಬರೆಸಿಕೊಟ್ಟನು ಅಂದು
ಕೊಟ್ಟ ಪತ್ರಕ್ಕೆ ಸಾಕ್ಷಿಗಳು ಹೆಮ್ಮಾಡಿಯ...........ಶಂಕರನಾರಾಯಣ ಮೇಲಾಡಿಯರು
ಕರ್ತುವಿನ ಒಪ್ಪಿತು. ನಾರಾಯಣನ ಸೋರೆಪ್ರಭು – ಸಾಕ್ಷಿಗಳ ಒಪ್ಪಿತು ನಾರ್ಣಪಯನ
ಸಾಕ್ಷಿ ಬರಹಾ ವಾಮನ ಸಂಕಣ ಸಾಕ್ಷಿ ಬರಹಾ.......... ಇನ್ನು ಇವರ ಉಭಯದಲ್ಲಿ
ಬರೆದಾತ ವೆಂಕಟಾದ್ರಿ ಬರಹಾದ ಪಟಾ ಶ್ರೀ

ಇದು ಶಿತಾಳಿವಾಲೆಯಲ್ಲಿ ಉಂಟು. ಬಹಳ ಜೀರ್ಣವಾಗಿದೆ. ಅದರಿಂದ ತೆಗೆದಿಟ್ಟ ನಕ್ಲಿನಿಂದ ಎತ್ತಿ ಬರೆದದ್ದು– (1542 ಮುಂಚಿನ ಎಣಿಕೆ 1541 ಈ ನಡಿನ ಎಣಿಕೆ) ಶಿದ್ಯಾರ್ತಿ ಸಂ। ರದ ಶಾ। ಶ। 1541 ಆಶಾಡಿ ತಿಂಗಳು 19 ಹೋಗುವಾಗ ನಾರಾಯಣ ಮಂಜ, ಶಂಕ್ರನಾರಾಯಣ ಮಂಜ, ವಿಷ್ಣು ಮಂಜ, ನಾರಾಯಣ ಮಂಜ ಕೂಡಾ 4 ಜನರು ಶಂಕ್ರಕಮ್ತಿಗೆ ಬರಕೊಟ್ಟ ಬಿಡಾರವಾರ ಪತ್ರ (ಬಿಡಾರವಾರ ಅಂದ್ರೆ ಸ್ವಾಧೀನತೆ ಸಮೇತ ಅಡವು) ಬಾಶಿವಾಲೆಯಲ್ಲಿರುವದು ಬಹಳ ಜೀರ್ಣವಾಗಿದೆ. ಅದ್ರ ನಕ್ಲು ಗೈರವಿಲೆ ಆಗಿದೆ.

ಮೇಲೆ ಹೇಳಿದ 2 ಅಸ್ಲು ವಾಲೆ ದಾಕ್ಲೆಗಳು ಕುಂ। ಡಿ। ಮ ಮೂಲವ್ಯಾಜ್ಯ ನಂಬ್ರ 283/1874 ವಾದಿ ರಾಮಾಚಾರಿ ಪೌತ್ರಿ ಸಪ್ಲಮೆಂಟಿ ಶೀತಮ್ಮ ವೆಂಕಟರಮಣ ಪ್ರಭು ಭುವನೇಂದ್ರ ತೀರ್ಥ ಸ್ವಾಮಿಗಳು 2 ನರಸಿಂಹ ಭಟ್ಟ / ತೀರ್ಪು 26–6–1876 ಮುನ್ಸಿಪ ಕ ಸುಬ್ರಾವ್.

ಈ ವ್ಯಾಜ್ಯದಲ್ಲಿ ಭುವನೇಂದ್ರ ತೀರ್ಥ ಸ್ವಾಮಿಗಳು ಹಾಜರು ಮಾಡಿದ್ದಾರೆ ಮತ್ತು ಆ ಶಂಕರ ಕಮ್ತಿಗೆ ನಾರಾಯಣ ಮಂಜು ಕೂಡಾ 4 ಜನ ಬರಕೊಟ್ಟ ಕ್ರಯಪತ್ರ ಮತ್ತು ಮೇಲ್ಕಾಣಿಸಿದ ನಕ್ಲಿನ ಬಾಳಚೀಟು ಎಂಬ ನಾರಾಯಣ ಕಂಮ್ತಿ ಬರಕೊಟ್ಟ ವಾಲೆ ದಸ್ತೈವಜು ಸಹ 403/1881 ನೇ ವ್ಯಾಜ್ಯದಲ್ಲಿ ವಾದಿ ಭುವನೇಂದ್ರ ತೀರ್ಥ ಸ್ವಾಮಿಗಳು ಹಾಜರು ಮಾಡಿದ್ದಾರೆ. (ಮತ್ತಿದ್ದು ಸ್ಪಷ್ಟ ಇಲ್ಲ)

## 11. ಹೆಮ್ಮಾಡಿಯ ಗೋಪಿನಾಥ ದೇವಸ್ಥಾನದ ವಿಷಯ

ಹೆಮ್ಮಾಡಿಯಲ್ಲಿ ಪ್ರಾಕಿನಲ್ಲಿ ಅಂದ್ರೆ ಶಾಲಿವಾಹನ ಶಕ 1576 ಆನಂದ ಸಂವತ್ಸರದ ಸಮಯ ಗೋವೆಯಿಂದ ಈ ಪ್ರಾಂತ್ಯಕ್ಕೆ ಬಂದ ನಮ್ಮ ಜನರ ಪೈಕಿ ಸುಮಾರು 40 ಮನೆಯವರು ನೆಲಸಿಕೊಂಡು ಇದ್ದರು. ಇವರು ಇದ್ದ ಸ್ಥಳಕ್ಕೆ ಈಗ ಬಿಣಜೆಗೋಡ ಹಾಡಿಯಂತ ಕರೆಯುತ್ತಾರೆ. ಈ ಸ್ಥಳ ಈಗ ಪೂರಾ ನಮ್ಮದು. ಇದಕ್ಕೆ ಮುಂಚಿನ 'ಚಿನ್ವಾರ ಕಟ್ಟೆ', 'ಕೊಂಕಣೆರ ಕೇರಿ' ಎಂತ ಕರೆಯುತ್ತಿದ್ದರು. ಇದರಲ್ಲಿ ಮುಂಚೆ ಮನೆಗಳು ಇದ್ದ ನೆಲಗಟ್ಟುಗಳು ಬಾವಿಗಳು ಸಹಾ ಇದ್ದಾವೆ. ಇಲ್ಲಿ ಮುಂಚೆ ಗೋಪಾಲಕೃಷ್ಣ ದೇವಸ್ಥಾನ ಇತ್ತು.

ಆ ದೇವಸ್ಥಾನ ಮುಂಚೆಯಿದ್ದ ಸ್ಥಳ ಈಗಿನ ಸರ್ವೆ ನಂಬ್ರ 195/1 ಇದ್ರಲ್ಲಿ ದೇವಸ್ಥಾನ ಇದ್ದ ಗರ್ಭಗೃಹ ಮತ್ತು ಪೌಳಿಗಳು ಸಹ ಇದ್ದ ನಲಗಟ್ಟುಗಳು ಬಾವಿ ಸಹಾ ಉಂಟು. ಇಲ್ಲಿ ದೇವಸ್ಥಾನ ಇರುವಾಗ್ಯೆ ಚಿನ್ವಾರಕಟ್ಟೆ ಗೋಪಿನಾಥ ದೇವರು ಎಂತ ಹೆಸರು ಇರುತ್ತಿತ್ತು. ಈ ದೇವಸ್ಥಾನ ನಮ್ಮ ಜಾತಿಯ ಗೃಹಸ್ಥರು ಧರ್ಮದಾಯದ ಹಣದಿಂದ ಕಟ್ಟಿ ಅದಕ್ಕೆ ಹೆಮ್ಮಾಡಿಯಲ್ಲಿ ಅಕ್ಕಿ ಕಂಚಿನ ಮುಡಿ 32 ಅಂದ್ರೆ ಕೈರೆಮಾನಿಗೆ 48 ಹುಟ್ವಳಿ ಸಿಕ್ಕುವ ಆಸ್ತಿ ತೆಗೆದುಕೊಂಡು ವಿನಿಯೋಗಕ್ಕೆ ಬಿಟ್ಟಿರುತ್ತಿದ್ರು, ಕ್ರಮೇಣ ಇಲ್ಲಿ ವ್ಯಾಪಾರ ಉದ್ಯೋಗ ಕಮ್ಮಿ ಆಗುತ್ತಾ ಬಂದದ್ರಿಂದ ಜಾತಿಯ ಗೃಹಸ್ಥರು ಪರಊರಿಗೆ ಹೋಗಿ ವಾಸ್ತಪಿಸಲಿಕ್ಕೆ ಆರಂಭಿಸಿದರು.

ಹೀಗೆ ಜನಸಂಖ್ಯೆ ಕಡಿಮೆಯಾಗುತ್ತಾ ಹೋಗುವಾಗ್ಯೆ ಶ್ರೀ ಕೇಶವವಡೇರ ಸ್ವಾಮೀರು ಬಸ್ರೂರ್ರಲ್ಲಿದ್ದಾಗ್ಯೆ ಶಾ। ಶ। 1590 ಹೆಮ್ಮಾಡಿಯ ಗೃಹಸ್ಥರು ಹೋಗಿ ಸದ್ರಿ ಗೋಪಾಲಕೃಷ್ಣ ದೇವಸ್ಥಾನ ಮತ್ತು ಅದಕ್ಕಿರುವ ಆಸ್ತಿ ಸಹಾ ಶ್ರೀ ಸ್ವಾಮೀರಿಗೆ ವಹಿಸಿ ಕೊಡುತ್ತೇವೆಂದು ಹೇಳಿಕೊಂಡ್ರು, ಶ್ರೀ ಸ್ವಾಮಿಗಳು ಒಪ್ಪಿದರು. ಆ ಪ್ರಕಾರ ದೇವಸ್ಥಾನ ಮತ್ತು ಆಸ್ತಿಕೂಡಾ ಸ್ವಾಮಿಗಳವರ ಸ್ವಾಧೀನ ಬಿಟ್ಟು ದಾನಪತ್ರ ಬರಕೊಟ್ಟಿರುವುದು ಶಾಲಿವಾಹನ ಶಕ 1590ನೇ ಕೀಲಕ ಸಂ। ದಲ್ಲಿ ಎಂತ ಕಾಣುತ್ತದೆ.

ಆ ನಂತ್ರ ಸ್ವಾಮಿಯರು ಸಹ ಹೆಮ್ಮಾಡಿ ದೇವಸ್ಥಾನದಲ್ಲಿ ಹೋಗಿ ಉಳಕೊಂಡಿರುವಾಗ್ಯೆ ಹತ್ತು ಜನರು ಬಿಟ್ಟು ಕೊಟ್ಟ ಹುಟ್ವಳಿ ದೇವಸ್ಥಾನದ ಮತ್ತು ಸ್ವಾಮೀರ ದೇವರ ವಿನಿಯೋಗಕ್ಕೆ ಸಾಕಾಗುವುದಿಲ್ಲ ಎಂತ ಸ್ವಾಮಿಗಳ ಅಪ್ಪಣೆ ಆದುದರಿಂದ

ನಮ್ಮ ಕುಟುಂಬದ ನಾರಾಯಣ ಕಮ್ತಿರು ಆಗ್ಯೆ ಹೆಮ್ಮಾಡಿಯಲ್ಲಿರುತಿದ್ರು, ಅವರು ಮೂವತ್ತಮುಡಿಯಲ್ಲಿ ಮಂಜರ ಬಗೆಯವರಿಂದ ಕ್ರಯಕ್ಕೆ ಪಡೆದ ಬೀಜವರಿ ಗದ್ದೆ ಮುಡಿ 6 ಅಂದ್ರೆ ಈಗಿನ 40 ಹಾನೆ ಮುಡಿ 18ರ ಗದ್ದೆಗಳು ಹಿತ್ಲಗಳು – ಕಳಿಸಹಾ ಆಚತುರ್ಗಡಿವಳಗಿರುವದನ್ನು ಸ್ವಾಮೀರಿಗೆ ಸದ್ರಿ ಮಠದ ವಿನಿಯೋಗದ ಬಗ್ಯೆ ಬಿಟ್ಟು ಕೊಡಲಿಕ್ಕೆ ಒಪ್ಪಿ ಎಡಭಾಗದಲ್ಲಿ ಕಾಣುವ ನಕ್ಲಿನ ಪಟ್ಟಾ ಬರಕೊಟ್ಟರು. ಸದ್ರಿ ಪಟ್ಟೆಯಲ್ಲಿ ಕಾಣುವ ಆಸ್ತಿ ಎಂಬುದು ಈಗಿನ ಸರ್ವೆ ನಂಬ್ರ 60/3–4–7–8–13–14, 60/3–4–5–6–7, 59/2–3–4–5–7 ಇಷ್ಟು ಆಗಿರುತ್ತದೆ. ಈ ಆಸ್ತಿಗೆ ಈಗ ಇರುವ ಹುಟ್ವಳ್ಳಿ ಅಕ್ಕಿ ಕಂಚಿನ ಮುಡಿ 54 ಅಂದ್ರೆ ಕೈರೆ ಮಾನಿಗೆ 81। ನಗದು ರೂಪಾಯಿ 75–00 ಇರುತ್ತದೆ. ತೀರ್ವೆ ಸಟ್ಲಿಮೆಂಟ್‌ನಲ್ಲಿ ಮೇಲಿದ್ದು 6–0–0 ಕೂಡಾ 54–3–0 ಆಗುತ್ತದೆ. ಇದಕ್ಕೆ ಸೆಸ್ಸು ಕೂಡಾ ತೆರಬೇಕು.

ನಾರಾಯಣ ಕಮ್ತಿರು ಬಿಟ್ಟ ಆಸ್ತಿ ಮತ್ತು ಹತ್ತು ಸಮಸ್ತರು ಬಿಟ್ಟ ಆಸ್ತಿ ಕೂಡಾ ಶ್ರೀ ಕೇಶವ ವಡೇರ ಸ್ವಾಮೀರು ಅರ್ಚಕ ಭಟ್ರ ಸ್ವಾಧೀನ ಬಿಟ್ಟು ವಿನಿಯೋಗಗಳು ಸರಿಯಾಗಿ ನಡಿಸುವಂತೆ ಕಟ್ಟು ಮಾಡಿದರು. ಅವರ ಕಾಲದ ನಂತ್ರದ ಗುರುಗಳು ಆ ವಿಷಯದಲ್ಲಿ ಹೆಚ್ಚಿಗೆ ಜಾಗ್ರತೆ ಮಾಡಲಿಲ್ಲ. ಅರ್ಚಕ ಭಟ್ರು ಆಸ್ತಿಯನ್ನು ಅವರೊಳಗೆ ವಿಭಾಗಿಸಿಕೊಂಡು ಅನುಭವಿಸಿದರು. ಸರ್ಕಾರದಲ್ಲಿ ವರ್ಗ ಆಗಣ ಭಟ್ರ ಹೆಸರಿನಲ್ಲಿಯೇ ದಾಕ್ಲಾಯಿತು. 1ನೇ ಭಾಗದವರು ಅನುಭವಿಸಿದ ಆಸ್ತಿಗೆ 11ನೇ ವರ್ಗ ಎಂತಲೂ 11ನೆ ಭಾಗದವರ ಆಸ್ತಿಗೆ 12ನೇ ವರ್ಗ ಎಂತಲೂ ಭಟ್ರ ಹೆಸ್ರಲ್ಲಿಯೇ ದಾಕ್ಲಾಗಿತ್ತು.

ಆ ಪೈಕಿ 12ನೇ ವರ್ಗದ ಆಸ್ತಿಯ ಲಾವಣಿದಾರನಾದ ಬೆಡಗ ಭಟ್ರು ಸದ್ರಿ ವರ್ಗ ಲಾವಣಿ ಶ್ರೀ ಸುಮತೇಂದ್ರ ಸ್ವಾಮೀರ ಹೆಸ್ರಲ್ಲಿ ರಾಜಿ ಕಬೂಲಿ ಅರ್ಜಿ ತಾ. 18–2–1874ರಲ್ಲಿ ತಾಲ್ಲುಕ ಆಫೀಸಿನಲ್ಲಿ ದಾಕ್ಲು ಮಾಡಿದ್ರಿಂದ ಆ ಪ್ರಕಾರ ಆಸ್ತಿಯ ವರ್ಗ ಲಾವಣಿ ಸ್ವಾಮೀರ ಹೆಸ್ರಲ್ಲಿ ತಬ್ದಿಲಾಯಿತು.

11ನೇ ವರ್ಗದ ಆಸ್ತಿಯ ತೀರ್ವೆಯ ಲಾವಣಿ ಶ್ರೀ ಸುಮತೇಂದ್ರ ಸ್ವಾಮಿಗಳ ಹೆಸ್ರಿಗೆ ತಬ್ದಿಲ ಮಾಡಬೇಕಾಗಿಯೂ ಉಳಿದ ರೂ.11–7–7 ತೀರ್ವೆಯ ಲಾವಣಿ ತನ್ನ ಹೆಸರಲ್ಲಿಯೇ ಉಳಿಸಬೇಕಾಗಿಯೂ ತಾ. 18–2–1874ಲ್ಲಿ ಅರ್ಚಕ ಅನಂತಭಟ್ಟರು ರಾಜಿ ಅರ್ಜಿ ದಾಕ್ಲು ಮಾಡಿದ್ರು, ಆದ್ರೆ ಅಂಶ ತಾ ಆ ದಾಕ್ಲು ಮಾಡಲಾಗುವದಿಲ್ಲವೆಂತ ಹುಕುಂ ಆಗಿ 11ನೇ ವರ್ಗದ ಲಾವಣಿ ಭಟ್ರ ಹೆಸರಲ್ಲಿಯೇ ಉಳಿಯಿತು. ಆಸ್ತಿ ಪೂರಾ ಪೂರ್ವದಂತೆಯೇ ಭಟ್ರ ಸ್ವಾಧೀನವೇ ಉಳಿಯಿತು.

ಸದ್ರಿ ಆಸ್ತಿಯ ಪೈಕಿ 61/13ನೇ ಸ್ಥಳ 8 ಮಾನಿಗೆ ಅಕ್ಕಿ ಹುಟ್ವಳ್ಳಿಯಿರುವುದು ಮತ್ತು 4–8–0 ನಗದಿ ಗೇಣಿಯು 59/4ರೆ ಭಾಗೈತು ಸಹಾ ಮತ್ತು ಹತ್ತು ಸಮಸ್ತರು ಬಿಟ್ಟ ಆಸ್ತಿ ಪೈಕಿ 95/7 ಒಳಕಂಬಳ ಗದ್ದೆ (ಗೇಣಿ ಅಕ್ಕಿ ಮಾನಿಗೆ 11) 99/3–7–10ನೇ ಸ್ಥಳಗಳು. ಸಹಾ ರೂಪಾಯಿ 925/ಕ್ಕೆ 1872 ಜುಲಾಯಿ ತಾ. 27ಲ್ಲು ಭೋಗ್ಯಾದಿ ಅಡವು ಮಾಡಿಕೊಟ್ಟರು. ಅಂದ್ರೆ ಅರ್ಚಕ ನಾರಾಯಣ ಭಟ್ಟ ಮತ್ತು ಅವರ ಹಿರೆ ಮಗ ನರಸಿಂಹ ಭಟ್ಟ ಕೂಡಾ ಕಾರ್ನಾಡ ಶೇಷಗಿರಿಯಪ್ಪಗೆ ಭೋಗ್ಯಾದಿ ಅಡವು ಮಾಡಿಕೊಟ್ಟದ್ದು ಮತ್ತು ಅಕ್ಕಿ ಕಂ ಮುಡಿ 6 ಹುಟ್ವಳ್ಳಿಯ ಹತ್ತು ಸಮಸ್ತರು ಬಿಟ್ಟು ಕೊಟ್ಟ ಸ್ಥಳ ಸಹಾ ಸದ್ರಿ ಭಟ್ರು ಅದಕ್ಕಿಂತ ಮುಂಚೆ ನಮ್ಮ ಹಿರಿಯ ಶ್ರೀನಿವಾಸ ಕಂಮ್ತಿರಿಗೆ ವಿಕ್ರಯಿಸಿದ್ದಾರೆ.

ಅನಂತ್ರ ಬಾಕಿ ಪೂರಾ ಆಸ್ತಿ ಅಂದ್ರೆ ನರಸಿಂಹ ಭಟ್ರ ಹಿಸೆದು ಅವರ ಸಾಲಗಾರರು ಜಪ್ತು ಮಾಡಿ ಏಲಂಗೆ ತಂದಾಗ್ಯೆ ಶ್ರೀ ಭುವನೇಂದ್ರ ಸ್ವಾಮಿಗಳು ಬಾಧ್ಯತೆ ಅರ್ಜಿ ಕೊಟ್ಟರು. ಆ ವ್ಯವಹರಣೆಯಲ್ಲಿ ಏಲಂ ಆಗಕೂಡದೆಂತ ತೀರ್ಪಾಯಿತು. ಅನಂತ್ರ ಶ್ರೀ ಭುವನೇಂದ್ರ ಸ್ವಾಮಿರು ಕಾರ್ನಾಡ ಶೇಷಗಿರಿಯಪ್ಪಗೆ ಆಗ ಭೋಗ್ಯಾದಿ ಅಡವು ರದ್ದುಪಡಿಸಿ ಆಸ್ತಿಯನ್ನು ಸ್ವಾಧೀನಕೊಡ್ಸಬೇಕಾಗಿ ಕ್ರಮ ನಂಬ್ರ 403/1881ನೆ ವ್ಯಾಜ್ಯ ಮಾಡಿದ್ರು, ಆ ವ್ಯಾಜ್ಯದಲ್ಲಿ ಸಹ 11ನೇ ವರ್ಗದ ಭಟ್ರ ಸ್ವಂತದ್ದು ಎಂತ ಹಿಂದಿನ ರಾಜಿ ಅರ್ಜಿಯಲ್ಲು ರೂ. 37–0–0 ಚಿಲ್ರೆ ಬೇರೇಜು ಸವಾಮಿರದ್ದು ರೂ. 12 ಚಿಲ್ಲರೆ ಬೇರೇಜು ಕಾಣುವುದರಿಂದ ಅಡವು ಮಾಡಿದ ಆಸ್ತಿಯಲ್ಲಿ ಭಟ್ರಿಗೆ ಹಕ್ಕು ಇರುವುದರಿಂದ ಆಸ್ತಿಯಲ್ಲಿ ಸರಸವಿಗಸ ಸರಿಯಾಗಿ ಪಿಂಗಡಿಸುವ ಮುಂಚೆ ಸದ್ರಿ ಅಡಪಿನ ಪೂರ ಸ್ಥಳಗಳು ಸ್ವಾಧೀನ ಹೊಂದಲಿಕ್ಕೆ ಸ್ವಾಮಿಯವರಿಗೆ ಹಕ್ಕಿಲ್ಲ ಎಂತ ಸ್ವಾಮಿಯವರ ವ್ಯಾಜ್ಯ ಡಿಸ್ಮಿಸ್ಸು ಆಯಿತು. ಅದ್ರ ಜಜಿಮೆಂಟು ಉಂಟು. ಅದ್ರ ಮುಂಚೆ ನರಸಿಂಹ ಭಟ್ರ ಸಾಲಗಾರರು ಆಸ್ತಿ ಜಪ್ತು ಮಾಡಿದ ಸಂಬಂಧ ಸ್ವಾಮಿಯವರ ಬಾಧ್ಯತೆ ಕೋರ್ಟಿನಲ್ಲಿ ಅಂಗೀಕಾರವಾದದರಿಂದ ಸಾಲಗಾರರ ಪೈಕಿ ಗೋಕರ್ಣ ಮಠದ ರಾಮಾಚಾರ್ಯರು ವಾದಿಯಾಗಿ ಶ್ರೀ ಸ್ವಾಮಿಯವರ ಹಕ್ಕಿನದ್ದೆಂತ ತೀರ್ಪಾಗಿತ್ತು.

ಆ ನಂತ್ರ ಕಾರ್ನಾಡ ಶೇಷಗಿರಿಯಪ್ಪನ ಹಕ್ಕು ನರಸಿಂಹ ಭಟ್ರ ಮಗ ಅನಂತಭಟ್ರ ಅಳಿಯಂದಿರು ಹೆಮ್ಮಾಡಿ ಬಾಬನಾಯ್ಕ ಮತ್ತು ಶೇನಾಪುರ ಅನಂತಾಚಾರ್ಯರು ಇವರಿಬ್ಬರ ಹೆಸ್ರಲ್ಲಿ ಟ್ರಾನ್ಸಫರ ಆಗಿ ಸದ್ರಿ ಆಸ್ತಿ ಅವರ ಸ್ವಾಧೀನಪಿತ್ತು. ಅದನ್ನು ಶ್ರೀಸುಕೃತೀಂದ್ರ ಸ್ವಾಮಿಯವರು ಸದ್ರಿಯವರಿಗೆ ಅಡ್ವಿನ ಹಣಕ್ಕಿಂತ ರೂ. 200–00 ಹೆಚ್ಚಿಗೆ ಕೊಡ್ಸಿ ರೂ. 1125 ಕೊಟ್ಟು 1919ನೆ ಇಸ್ವಿಯಲ್ಲಿ ಭೋಗ್ಯಾದಿ ಅಡ್ವಿನ ಖಿಲಾಸೆ ಪತ್ರ ಪಡಕೊಂಡರು.

ಭಟ್ರ ಸ್ವಾಧೀನವಿರುವ ಆಸ್ತಿಯನ್ನು 1899ನೆ ಇಸವಿ ಅಕ್ಟೋಬರ್ ತಾ. 23ರಲ್ಲಿ ಶ್ರೀ ವರದೇಂದ್ರ ತೀರ್ಥ ಸ್ವಾಮಿಯವರು ರಂಗಭಟ್ರು, ಇವರ ಮಗ ನರ್ಶಯ ಭಟ್ರು, ನರಸಿಂಹ ಭಟ್ರ ಮಗ ಅನಂತ ಭಟ್ಟ ಇವರಿಂದ ಖುಲಾಸೆ ಪತ್ರ ರಿಜಿಸ್ಟ್ರಿ ಮಾಡಿಸಿ ಸ್ವಾಧೀನ ಬಂದಿತ್ತು.

ಪ್ರಾಕಿನಲ್ಲಿ ಚಿನ್ವಾರಕಟ್ಟೆ ಹತ್ರ ಅಂದ್ರೆ ಈಗಿನ ಸರ್ವೆ ನಂಬ್ರ 195/1ನೇ ಸ್ಥಳದಲ್ಲಿ ಇದ್ದ ದೇವಸ್ಥಾನ ಸುಮಾರು 150 ವರ್ಷಗಳ ಹಿಂದೆ ಸುಟ್ಟು ಹೋಯಿತು. ಪುನಃ ಕಟ್ಟುವಾಗ ಅದನ್ನು ಈಗ ಇರುವ ಸ್ಥಳದಲ್ಲಿ ಅಂದ್ರೆ ಸರ್ವೆ ನಂಬ್ರ 99/11ರಲ್ಲಿ ಕಟ್ಟಿಸಿದರು ಎಂತ ತಿಳಿದುಬರುತ್ತದೆ.

ಸ್ವಸ್ತಿ ಸಾಧಾರಣ ಸಂ। ರದ (1593 ಮುಂಚಿನ ಎಣಿಕೆ) ಕೃತ್ತಿಕೆ ಸಂಕ್ರಾಂತಿ ಅಂದ್ರೆ ಮೇಷ ರಾಶಿಯ ಅಂತ್ಯದಲ್ಲಿ ಕೃತ್ತಿಕೆ ಸಂಕ್ರಾಂತಿ ಅಂದ್ರೆ ಕೃತ್ತಿಕಾ ನಕ್ಷತ್ರದ ೧ನೇ ಪಾದದಿಂದ ಸೂರ್ಯನು ದ್ವಿತೀಯ ಪಾದಕ್ಕೆ ಹೋಗುವ ಕಾಲ, ಅಂದ್ರೆ ವೃಷಭ ಸಂಕ್ರಮಣ. ವಿಷ್ಣುಪುರಾಣದ ದ್ವಿತೀಯ ಅಂಶದ 8ನೇ ಅಧ್ಯಾಯದಲ್ಲಿ ಹೇಳುವಂತೆ ಮಹಾ ಪುಣ್ಯಕಾಲ. "ವಿಷುವ ಕಾಲ" ಮೊದಲಾಗಿ ಬರದ ಬಿಡಾರ ವಾರಪತ್ರೆದ ಕ್ರಮವೆಂತೆಂದರೆ ಹೆಮ್ಮಾಡಿ ಒಳಗೆ ವಿಷ್ಣು ಮಂಜರ ಮಗ ಮಾಧವ ಮಂಜನು ಮೂಲದ ಬಾಳಿನ ಚತುಶೀಮೆ ವಿವರ.

ಹೆಮ್ಮಾಡಿಯ ಚಿನ್ನವರದ ಗೋಪಿನಾಥ ದೇವರ ಮಠದ ಬೆಟ್ಟಿನ ಚತುರ್ಗಡಿ – ಮೂಡಲು ಮಟ್ಟ ಕಮ್ತಿ ಮಗ ನಾರಾಯಣ ಕಮ್ತಿ ಮನೆ ಅಡಿ ಬೆಟ್ಟಿನ ಗಡಿಯಿಂದ ಬಡಗಲು, ಪಡುವಲು ಮರಿಯಣ್ಣ ಮೇಲಾಡಿ ಕಳಬೆಟ್ಟಿನ ಗಡಿಯಿಂದ ಮೂಡಲು ಬಡಗಲು ಚಿನ್ನವರಕಟ್ಟೆ ರಾಜಬೀದಿ – ಇಂತಿ ನಾಲ್ಕು ಗಡಿವಳಗುಳ್ಳ ಮೂರೊಂದು ಪಾಲಿನ ವಳಗಣಬೆಟ್ಟು – ಮತ್ತಂ ಮದಿಯಿಲಂದಂ ಪಡುವಲು ತಂಕಲು ಮರಿಯಣ್ಣ ಮೇಲಾಡಿ ಕಳ ಭೂಮಿ ಗಡಿಯಿಂದ ಬಡಗಲು, ಪಡುವಲು, ಮೇರಿದರ ಗಡಿಯಿಂದಂ ಮೂಡಲು, ಬಡಗಲು ನೀರು ತೋಡಿನಗಡಿಯಿಂದಂ ತೆಂಕಲು, ಇಂತಿನಾಲ್ಕು ಗಡಿವಳಗುಳ್ಳ ಮೂರೊಂದು ಪಾಲಿನ ಒಳಗಣ ೫೦ ಹಾನೆಗದ್ದೆ, ಮತ್ತಂ ಇದೇ ಗೋಪಿನಾಥ ದೇವರ ಮಠದ ಅಡಿಸ್ಥಳದ ಬೆಟ್ಟಿನ ಗಡಿ, ಮೂಡಲು ನಡೆಯುವ ಬೀದಿಯಿಂದಂ ಪಡುವಲು ತೆಂಕಲು ವೆಂಕು ಭಟ್ಟನ ಸ್ಥಳದ ಗಡಿಯಿಂದಂ ಬಡಗಲು ಪಡುವಲು ರಾವತಕೇರಿಮೇಡಿಬಿಂಪಂ ಮೂಡಲು, ಬಡಗಲು ಕಲ್ಲು ಗಡ ಬಡ ಸೊರ್ತು ನೀರು ತಲೆ ದರೆಗಡಿಯಿಂದ ತೆಂಕಲು ಇಂತಿ ಈ ಗಡಿವಳಗಣ ಮೂರು ಒಂದು ಪಾಕಿನ

ಒಳಗೆ ಬೆಟ್ಟು ಅದರಲ್ಲಿರುವ ತೆಂಗಿನ ಫಲ ಮರಗಳು ಸಾಹಾವಾಗಿ ಬಾರ್ಕೂರ ಪರಿ ವರ್ತಮಾನಕ್ಕೆ ಸಲುವ ದೊಡ್ಡವರಹಾ ವಳೆತ್ತು ವರಹಾ ಗ ೨೦ ವರಹಾ ಗ ೨೦ ವರಹಾ ಆರವಾರ ಮೇಲಾದಿಕೊಟ್ಟು ಗ ೨೦ ವರಹಾನ್ನು ತೆಗೆದುಕೊಂಡೇನು. ಹೆಂಮಾಡಿ ವಿಷ್ಣು ಮಂಜನು ತನ್ನ ಬಲದ ಪಾಲು ಬಿತ್ತಳಿಕೆ ೧\೦ ಮುಡಿಗದ್ದೆ ಮೂರೊಂದು ಪಾಲಿನ ಬೆಟ್ಟಿನ ಒಳಗೆ ಇಕ್ಕೆರ್ತರೀಗೆ ಬಂದದು ಪಾಲಿನ ಬೆಟ್ಟು ಇದ್ರ ಒಳಗಣ ಗದ್ದೆ – ಬಿಡಾರವಾರವಾಗಿ ಬರ್ರಿಕೊಂಡು ಮೂಲಾದಿ ಹೆಮ್ಮಾಡಿಯ ಕೊಂಕಣಸ್ಥ ಈಶ್ವರ ಕಮ್ತಿ ಮಗ ಗೋಪಿಂದ ಕಮ್ತಿಯು ಅರ್ಥವನ್ನು ಕೊಟ್ಟು ತೆಗೆದುಕೊಂಡು ಕೊಂಕಣಸ್ಥ ಮಠದ ಇದೇ ಗೋಪಿನಾಥದೇವರಿಗೆ ಅಮೃತಪಡಿ ದಿಪ್ತಿ ಧರ್ಮಕ್ಕೆ ಬಿಟ್ಟದ್ದು. ಇದರ ತೆರುವನ್ನು ಈ ಗೋಪಿನಾಥ ದೇವರ ಹೆಸ್ರಲ್ಲಿಯೇ ಅರ್ಚಕ ವೆಂಕು ಭಟ್ರು ತೆತ್ತು ಸ್ವಾಸ್ತಿಭಾಳಿ ಬಹುದು ಎಂದು ಬರೆದ ಅರ್ಥ ವೃತ್ತಿ ಚೀಟಗೆ ಹೊಣೆಯಾದ ಮಾಧವ ಮಂಜನ ವಪ್ಪಿತಾ ಗೋಪಿಂದ ಕಮ್ತಿರು ರುಜು ಹೆಮ್ಮಾಡಿ ಮರಿಯಣ್ಣ ಮೇಲಾಡಿ ಸಾಕ್ಷಿಬರಹಾ ನಾರಾಯಣ ಕಮ್ತಿ ಸಾಕ್ಷಿಬರಹಾ ವೆಂಕಟಾಚಾರ್ಯನ ಸಾಕ್ಷಿಬರಹಾ ದೇವಪ್ಪ ಶ್ಯಾನಭಾಗನ ಸಾಕ್ಷಿಬರಹಾ ಕರ್ತುವಪ್ಪತಾ ಸದ್ರಿ ಊರ ಅಪ್ಪಣ್ಣ ಮಂಜನ ಬರಹಾದ ಪಡಾ ಶ್ರೀ ಈ ಸಕಲು ಜಾಲಿವಾಲೆಯಲ್ಲಿರುವ ಅಸ್ಲು ಚೀಟಿನ ಯಥಾನಕಲು.

ಯುವ ಸಂ। ರದ 1815ನೆ ಇಸ್ವಿ ಮಾಗ ಬ ೩ ಯಲ್ಲು ಕುಂಪಣೆ ಸರಕಾರದಿಂದ ದೇವಸ್ಥಾನದ ಆದಾಯವೆಚ್ಚ ಬರಸಿಕೊಡುವಂತೆ ಅಪ್ಪಣೆ ಬಂದ ಪ್ರಕಾರ ಹೆಮ್ಮಾಡಿ ಶ್ಯಾನಭಾಗರಿಗೆ ಬರೆಸಿಕೊಟ್ಟದ್ದು. ಪ್ರಾಕು ಹೆಮ್ಮಾಡಿ ಪೇಟೆಯಲ್ಲಿ ಇರುವ ಗೃಹಸ್ಥರು ಮಟ್ಟಿ ಕಮ್ತಿರ ಮಗ ನಾರಾಯಣ ಕಮ್ತಿರು. ಮಾಳ ಕಮ್ತಿರ ಮಗ ನಾರಣ ಕಮ್ತಿ. ಈಶ್ವರ ಕಮ್ತಿ ಮಗ ಚಿನವಾರ ಶಂಕ್ರ ಕಮತಿರು. ನಾಗಪ್ಪ ಕಮ್ತಿರು. ಗೋಪಿಂದ ಕಮ್ತಿರು. ಕೃಷ್ಣ ಪ್ರಭು ಸಾಹಾ ಪೇಟೆಯವರು ಈ ಸ್ಥಳದಲ್ಲಿ ಮಠ ಕಟ್ಟಿಸಿ ಶ್ರೀ ಗೋಪಿನಾಥ ದೇವರು ಮುಖ್ಯಪ್ರಾಣ ದೇವರು ಸಾಹಾ ಪ್ರತಿಷ್ಠೆ ಮಾಡಿಸಿ ಶ್ರೀ ಕಾಶಿಮಠದ ಸ್ವಾಮಿರಾಯರಿಗೆ ಧಾರಾಪೂರ್ವಕವಾಗಿ ಕೊಟ್ಟು ಈ ವರೇಗೆ ಅವರು ವೆಂಕು ಭಟ್ರಗೆ ನೇಮಕಮಾಡಿ ಗೋಪಿನಾಥ ಭಟ್ರಿಗೆ ಸಹಾ ನೇಮಕ ಮಾಡಿ ಮಠದ ಶ್ರೀ ದೇವರಪೂಜೆ ಬಗ್ಗೆ ಸದ್ರಿ ವೆಂಕು ಪೂಜೆ ಶುಕ್ಲ ಪಕ್ಷ ಗೋಪಿನಾಥ ಭಟ್ಟಗೆ ಕೃಷ್ಣ ಪಕ್ಷ ಈ ಪ್ರಕಾರ ನೇಮಕ ಮಾಡಿ ಮತ್ತು ಮುಖ್ಯಪ್ರಾಣ ದೇವರ ಪೂಜೆ ಬಗ್ಗ ನಾರಾಯಣ ಭಟ್ರಗೆ ನೇಮಕ ಮಾಡಿ ಶ್ರೀ ದೇವಸ್ಥಾನದಲ್ಲು ಶ್ರೀ ದೇವರಿಗೆ ನಡೆವ ಕಟ್ಟಲೆ. ಅಮೃತಪಡಿ ನಂದಾದೀಪ್ತಿ ಬಗ್ಗೆ ಗೃಹಸ್ಥರು ತಮ್ಮ ತಮ್ಮ ಶಕ್ತ್ಯಾನುಸಾರ ದಿನಚರಿಯಲ್ಲಿ ದಿನ

೧ರ ಅಕ್ಕಿ ಹಾನೆ ೩ರ ತಿಂಗಳು ೧ರ ಮುಡಿ ೧।ರಲ್ಲಿ ಅಕ್ಕಿ ಮುಡಿ ೧೮ರ ಗ ೯-೦

೩॥೨॥. ಪ್ರತಿಷ್ಠೆ ಸಮಾರಾಧನೆ ಬಗ್ಗೆ-

೦೨ ೧। ಪಂಚಾಮೃತ

। ಮನೆ ಹಾಡ .......

೨॥೦ ಸಮಾರಾಧನೆ ಬಗ್ಯೆ

೨॥ ವಾಲಗದವರಿಗೆ ಪರಸಹಾ

೨॥ ಅಂಗಡಿ ಜಿನಸು

೨॥ ಬ್ರಾಹ್ಮಣ ದಕ್ಷಿಣೆ

೩॥೨॥ ಅಂಕುಶ

೩-೩॥ ಚಾತುರ್ಮಾಸ ಸಂಮಂಧಾ ಪಂಚಾಮೃತ ಅಭಿಷೇಕ ಸಹಾ ೨॥ಮಣೆಗಾರ ಸಹಸ್ರನಾಮ ತುಳಿಸಿ ತಂದ ಜಿನ ೧ರ ತಿಂಗಳು ೧ರ ೨॥ರಲ್ಲು ಗ೧ ಸಹಸ್ರನಾಮ ಪಾಠ ಹೇಳುವರಿಗೆ ತಿಂಗಳುಳಿರ ಸರಾ ೧- ) ಪಾರಾಯಣದ ಬಗ್ಯೆ ತಿಂಗಳು ಸರಾ ಅಂಕುಹ ೩-೩॥

೧॥ ಭಾದ್ರಪದ ಮಾಸದ ಸಂಮಂದ ದಿನಾಲು ಕಭವತಿಗೆ ದಿನ ೧॥ ರ ಜಿನಸು ವಗ್ಯೆರೆ ಸಹಾ.......

೫-೨॥ ಅನಂತನ ವೃತದ ಸಂಬಂದಾ

೨॥ ಕಲಶಪಂಚಾಮೃತ

೧। ಅಂಗಡಿ ಜೀನಸು

೧॥ ಅನಂತನ ದಾರ

೧। ಕಲಶವಸ್ತ್ರ

೨ ದಕ್ಷಿಣೆ

॥೧। ಮಂಣೆಹಾಡ1ರ

೨॥ ಪಂಚಕಜ್ಜಾಯ

೩-೦ ಸಮಾರಾಧನೆಗೆ

೩॥ ವಾಲಗದವರಿಗೆ ಪರಿಸಹಾ

೫-೨॥

೧-೪। ವಿಶು ೧೫ ದಿವ್ಸ ಶ್ರೀ ಮುಖ್ಯಪ್ರಾಣ ದೇವರ ಪ್ರತಿಷ್ಠೆ ಸಮಾರಾಧನೆ (ಪುಣ್ಯತಿಥಿ) ಸಂಬಂಧ ಪಂಚಾಮೃತ ॥೩ ಎಣ್ಣೆ ೧। ಸಮಾರಾಧನೆ ಅಂಗ ಜಿನ್ಸುಗಳು ದಕ್ಷಿಣೆ ೧। ವಾಲಗದವರಿಗೆ ೧। ಅಂಕುನ ೧-೪।೩

ಕಾರ್ತಿಕ ಮಾಸ ಸಂಬಂಧ ಕಲಶ ಪಂಚಾಮೃತ ೨॥

ಅಂಗಡಿ ಜಿನ್ಸು ೧೧ ಹೋಮ ೩ಹೋಮದ ಬಗ್ಗೆಯೇ ೩॥ ಸಮಾರಾಧನೆ ಬಗ್ಗೆಯೇ ೨॥ ಎಣ್ಣೆ ........ ಪಂಚಕಜ್ಜಾಯ 2॥ ವೀಳ್ಯದೆಲೆ ಅಡ್ಕೆ ೧।...... ವಾಲಗದವರಿಗೆ ೨॥ ದಕ್ಷಿಣೆ ಬಗ್ಗೆ ೨॥ ಅಂಕುರ ೨-

ಹರಿಜಾಗರದ ಸಂಬಂಧ ತಿಂಗಳು ೧ರ ಅವಲಕ್ಕಿ ಮು॥ರ೨॥ ಕಾಯಿ ೨೦ರ ೧। ಉಭಯ ೩॥

ಧನುರ್ಮಾಸದ ಸಂಬಂಧ ದಿನ ೧ರ ಅಕ್ಕಿ ಹಾನೆ ೧ರಲ್ಲು ಮುಡಿ ॥ ರ ೨॥ ಬೆಳೆಹಾನೆ ೨॥ ರ ......ಬೆಲ್ಲ

ಮಣ ॥ಎ ೧॥ = ತುಪ್ಪ ॥ = ವೀಳ್ಯದಲೆ ಅಡ್ಕೆ ॥ = ತೆಂಗಿನ ಕಾಯಿ ॥ =ಅಂಕುರ ॥ ೨।

ಚೈತ್ರ - ವೈಸಾಖ ಸಹಾ ತಿಂಗಳು ೨ರ ಸಂಬಂಧ ಪೂಜೆ ಬಗ್ಗೆ ಬೆಲ್ಲ ಮಣ ೧ರ ೩॥ ಹೋಗು ವೀಳ್ಯದೆಲೆ ಅಡಿಕೆ ೨॥ ಅಂತು

೧॥ ಕಾಲಾವಧಿ ಸಂಬಂಧ ಹತ್ತಿ ಬತ್ತಿ ಸದಾ ॥

ಹೊದ ......ಬಗ್ಯೆ -ಸ ೩

ಅಳುಮಜೂರಿ ೧

ಕಸಬರಿ ಬಗ್ಯೆ - ಸ ೩

ಅಳುಮಜೂರಿ ೧

ಕಸಬರಿ ಬಗ್ಯೆ ಸ ೧ ॥ ಅಂತು ೫-೧।

ವೇದಪಾರಾಯಣ ಬಗ್ಯೆ ತಿಂಗಳು ೧೨ರ...........ಪುರಾಣಕೃತಿ ಬಗ್ಯೆ ಗ ೨ ಉಭಯ ೬-೧

ಅಂತು ವರ್ಷ ೧ರ ೫೨ ॥–।\= ಮೇಲ್ಕಾಣಿಸಿದ ಪ್ರಕಾರ ಜುಮ್ಲಾ ೪೪॥= ಆಗುತ್ತದೆ. ಇದಕ್ಕೆ ಚಂದಾ............ಆಗುತ್ತದೆ.

ಹೆಮ್ಮಾಡಿ ಗೋಪಿನಾಥ ದೇವಸ್ಥಾನಕ್ಕೆ ಜೀರ್ಣೋದ್ಧಾರ ಮಾಡುವ ಬಗ್ಗೆ ಮುಟ್ಟಿದ್ದು

ನಾಣ್ಯ ವಿವರ ಅಕ್ಕಿ

ಬಡಗಿ ಲಿಂಗುಗೆ ಗುತ್ತಿಗೆ ಮಾಡಿದ್ದು ನಾಣ್ಯದ ೧೫ ಪಡಿ ಬಗ್ಗೆ ಅಕ್ಕಿ ಮುಡಿ.......

೧೨–೧। ಸಂದದ್ದು – ನಾಣ್ಯಾಗಿ ಕೊಟ್ಟಿರುವ ವಿವರ ಪ್ರಕಾರ ೧೩–೧। ಅಕ್ಕಿ ಮುಡಿ ೭॥

ಮರದ ಕೆಲ್ಸ ಜಿಲ್ಲರಕ್ಕೆ
ಕಲ್ಲು ಹೊತ್ತ ಜನ ೨೭
(ಸ್ಪಷ್ಟವಾಗುತ್ತಿಲ್ಲ)

## 12. ಉತ್ತರಾದಿಮಠದ ಸ್ವಾಮಿಗಳ ರಾಯಸಪತ್ರಗಳು

1936ನೆ ಇಸ್ವಿಯಲ್ಲಿ ಮೈಸೂರಿನಿಂದ ದಾಸಪ್ಪಯ್ಯನವರು ಶ್ರೀ ಕಾಶಿಮಠದ ಸ್ವಾಮಿಗಳವರಿಗೆ ಕಳುಹಿಸಿಕೊಟ್ಟ ರಾಯಸಪತ್ರಗಳ ನಕ್ಕುಗಳ ನಕ್ಕುಗಳು (ಉತ್ತರಾದಿಮಠದ ಸ್ವಾಮಿಗಳು)

'ಶ್ರೀಮತ್ ಪರಮಹಂಸ ಪರಿವ್ರಾಜಕಾಚಾರ್ಯರ್ತ್ಯಾದ್ಯನೇಕ ಗುಣಸಂಪನ್ನರಾದ ಶ್ರೀಮದ್ರಾಮಚಂದ್ರ ದೇವರ ದಿವ್ಯ ಶ್ರೀ ಪಾದಪದ್ಮಾರಾಧಕರಾದ ಶ್ರೀಮನ್ ಸತ್ಯನಾಥ ತೀರ್ಥಶ್ರೀಪಾದ ವಡೆರವರ ಕರಕಮಲಸಂಜಾತರಾದ ಶ್ರೀಮತ್ಸತ್ಯಾಭಿನವ ತೀರ್ಥ ಶ್ರೀಪಾದವಡೇರು.' ಇದೇ ಸತ್ಯಾಭಿನವ ತೀರ್ಥರು ಕಾಶೀ ಮಠದ ರಾಘವೇಂದ್ರತೀರ್ಥರಿಗೆ ಶ್ರೀಮುಖ ಸಂ। ರದ ಚೈತ್ರಯುತು ೫ಲ್ಲಿ ಬರೆದ ಪತ್ರದ ನಕಲು ನಮ್ಮ ಹತ್ರ ಇದೆ. ಇದರ ಅಸಲು ಶ್ರೀಕಾಶಿಮಠದಲ್ಲಿ ಇದೆ. ಅದು ಕಳಸದ ವ್ಯವಹರಣೆಯಲ್ಲಿ ಶ್ರೀ ವರದೇಂದ್ರ ತೀರ್ಥರು ಕಡೂರು Dt. Magtರ ಮುಂದೆ ಹಾಜರು ಮಾಡಿ ವಾಪ್ಸು ಪಡಕೊಂಡಿದ್ದಾರೆ.

ಶ್ರೀ ಸ್ವಾಮಿಗಳ ಪರಮಪ್ರಿಯಶಿಷ್ಯರಾದ ಬಿದರೂರಸ್ಥ ಅಶೇಷ ವಿದ್ವದ್ವೈದಿಕ ಮಹಾಜನಗಳಿಗೆ ಅಶೇಷಗೃಹಸ್ಥರಿಗೆ ಶ್ರೀಮನ್ನಾರಾಯಣ ಸ್ಮರಣೆ ಪೂರ್ವಕ ಪರಮಾನುಗ್ರಹದಿಂದ ಬರಿಶಿ ಕಳುಹಿಸಿದ ನಿರೂಪ – ನಾವು ಶ್ರೀ ಸ್ವಾಮಿಗಳ ಪರಮಾನುಗ್ರಹದಿಂದ ಸ್ನಾನ ದೇವತಾರ್ಚನವ್ಯಾಖ್ಯಾನ ಮಾಡಿಕೊಂಡು ಶಕ ೧೮೫೪ನೇ ಅಂಗೀರಸ ನಾಮ ಸಂವತ್ಸರ ವೈಶಾಖ ಶು ೧೫ ನಿರುದ್ದಕ್ಕೆ ಕ್ಷೇಮವಾಗಿದ್ದೇವೆ. ನಿಮ್ಮ ಕ್ಷೇಮಕ್ಕೆ ಬರಿಯುವುದು.

ತರುವಾಯ ಶ್ರೀ ವೈಕುಂಠ ಕ್ಷೇತ್ರಂ ತಾಮ್ರ ............ ಮುತ್ತರೆ ತಟೆವಿಷ್ಣು ದೇವಸ್ಯ ಸಾನ್ನಿಧ್ಯಂ ಯತ್ರಾಸಿ ಧರಣೀತಲೇ ಇತ್ಯಾದಿ ಪ್ರಮಾಣೋಕ್ತ ಮಹಾತ್ಮ........ಸಿತ ತಾಮ್ರಪರ್ಣಿಮಹಾನದಿ ತೀರಸ್ಥಿತ ಶ್ರೀ ವೈಕುಂಠ ಕ್ಷೇತ್ರದಲ್ಲಿ ಶ್ರೀ ಸ್ವಾಮಿಗಳ ಸತ ಪ್ರಭಾವದಿಂದ ವೈಕುಂಠ ಸುಖಾನುಭವಿಸುತ್ತೇವೆ. ನಿಮಗೆ ಪ್ರೀತಿಪಾತ್ರರೂ, ನಮಗೆ ಬೇಕಾದವರೂ ಆದ ಕೊಂಕಣಸ್ಥ ಸ್ವಾಮಿಗಳಾದ ರಾಘವೇಂದ್ರ ಶ್ರೀಪಾದಂಗಳು ರಾಮೇಶ್ವರಯಾತ್ರೆ ಮಾಡಿಕೊಂಡು ಶ್ರೀ ವೈಕುಂಠ ಕ್ಷೇತ್ರಕ್ಕೆ ಬಂದು ನಮ್ಮ ಭೇಟಿಮಾಡಿಕೊಂಡು ಅಲ್ಲಿಗೆ ಬಂದಿರುತ್ತಾರೆ. ಅವರನ್ನು ಕಂಡು ಸಕಲ ಕಾರ್ಯ ಪ್ರಯೋಜನ ವಿಷಯದಲ್ಲಿ ನೀವು ಸಹಾಯ ಮಾಡಿ ಕೂಡಿ ನಡಿಸಿಕೊಂಡು ಬಹುದು. ಮೊದಲೇ

ನೀವು ಅರಿಯದಲೇ ಇವರ ಗೃಹಸ್ಥರಲ್ಲಿ ಕಾರ್ಯ ಪ್ರಯೋಜನಗಳು ಆದ ಸಮಯದಲ್ಲಿ ನಡೆದು ಬರಲಿಲ್ಲ. ಇನ್ನಾದರೂ ಈ ರಾಯಸಾನುಸಾರ ಇವರ ವಿಷಯದಲ್ಲಿ ಇವರ ಗೃಹಸ್ಥರ ವಿಷಯದಲ್ಲಿ ಅನುಕೂಲವಾಗಿ ನಡಕೊಂಡು ಬಹುದು. ನೀವು ಅಶೇಷರು ಇವರ ಕಾರ್ಯ ಪ್ರಯೋಜನ ವಿಷಯದಲ್ಲಿ ಅನುಕೂಲವಾಗಿ ನಡೆಸಿಕೊಂಡು ಬಂದರೆ ನಮ್ಮ ಅನಗ್ರಹಪಾತ್ರರಾದೀರಿ. ಅನ್ಯಥಾ ಮಾಡಿದರೆ ಗುರುದ್ರೋಹಿಗಳಾದೀರಿ. ನೀವು ಮಠಕ್ಕೆ ಪರಮಾಭಿಮಾನಿಗಳಾಗಿದ್ದೀರಿ.

ವಿಶೇಷ ಬರಿಯೋದು ಏನಿದೆ. ನಾವು ಕಾಶಿಯಾತ್ರಾರ್ಥವಾಗಿ ಯಾವಾಗ ಹೋದೇವು, ಆಗ ಮ್ಲೆಂಚರ ಕಡೆಯಿಂದ ಕಾಶೀಗೆ ಹೋಗದ ಹಾಗೆ ಆಯಿತು. ಆಗ ರಾಘವೇಂದ್ರ ತೀರ್ಥ ಶ್ರೀಪಾದರು ಕ್ಷತ್ರಿಯರ ಬಲಮಾಡಿ ನಮಗೆ ರಾಜಮಂದಿರದ ಪ್ರವೇಶ ಮಾಡಿಸಿ ಕಿಂಚಿತ್ ನ್ಯೂನವಾಸ ಪರಿಯಂತರ ಗಂಗಾ, ಮಣಿಕರ್ಣಿಕಾ, ತೀರ್ಥಸ್ಥಾನಕ್ಕೆ ರಾಮಸ್ವಾಮಿ ಮಹಾಭಿಷೇಕಕ್ಕೆ ಮೊದಲಾದ ಮಹೋತ್ಸಹಕ್ಕೆ ಅನುಕೂಲಮಾಡಿ ಕ್ಷೇಮದಿಂದ ಗಯಾಕ್ಕೆ ಹೋಗುವ ಹಾಗೆ ಮಾಡಿದರು. ಆದಕಾರಣ ಇವರು ನಮ್ಮ ಸ್ವಾಮಿಗಳ ಪ್ರೀತಿಪಾತ್ರರು ಎಂತ ನಿರ್ಣಯ ಮಾಡಿದ್ದೇವೆ. ಆದಕಾರಣ ಇವರೀಗೆ ಬಹುಮಾನ ಮಾಡಿದ್ದರಿಂದ ನಮಗೆ ಮಹಾ ಸಂತೋಷವಿದೆ. ಗಂಧ ಪ್ರಸಾದ ಕಳುಹಿಸಿದ್ದೇವೆ. ತೆಗೆದುಕೊಂಬೋದು.

ಶಾಯಿ ಮೊಹರು ಅದೆ.

## 13. ಬಲಿಪುವೆಟದಲ್ಲಿರುವ ದಾಕ್ಲೆಯ ತಾತ್ಪರ್ಯ

ಮಹಮ್ಮದಾಬಾದ ಯಾನೆ ಕಾಶಿ ಪಟ್ಟಣದಲ್ಲಿರುವ ಜ್ಞಾನೀಂದ್ರತೀರ್ಥ ಜಿನ್ ಮಾಧು ಇಂದ್ರ ೀರ್ಥ ಜಿನ್ ದೇವ ಇಂದ್ರ ತೀರ್ಥ ಜಿನ್ ರಾಘವ ಇಂದ್ರ ತೀರ್ಥ ಜಿನ್ ಉಪೇಂದ್ರತೀರ್ಥ ಎಂಬ ಹೆಸರುಳ್ಳವನಾದ ನಾನು ಕಾನೂನು ಪ್ರಕಾರ ಸ್ವತಹಾ ದಸ್ಕತು ಮಾಡಿ ಈ ರಾಜಿನಾಮೆಯನ್ನು ಖುದ್ದು ಹಾಜರುಮಾಡುತ್ತೇನೆ.

ಏನಂದ್ರೆ ಮಹಮ್ಮದಾಬಾದ ಶಹರಿನಲ್ಲಿ ದುರ್ಗಾಘಾಟದಲ್ಲಿರುವ ಕಟ್ಟಡ ಗಡಿಗಳ ವಿವರ. ಪೂರ್ವಮಜ್ಕುರ ಉಪೇಂದ್ರ ತೀರ್ಥರ ಜಮೀನು. ಪಶ್ಚಿಮ ಸಾರ್ವಜನಿಕ ರಸ್ತೆ, ಉತ್ತರ ಮಜ್ಕುರ ಉಪೇಂದ್ರ ತೀರ್ಥ ಕಟ್ಟಡ ಮತ್ತು ನೀರು ತೋಡು. ದಕ್ಷಿಣ ದುರ್ಗಾಘಾಟ. ಚತುರ್ಗಡಿ ಒಳಗೆ ಇರುವ ಒಂದು ಮಜಲಿನ ಕಟ್ಟಡವು. ಮೇಲೆ ಹೇಳಿದ ಉಪೇಂದ್ರತೀರ್ಥರು ಹಿಂದೆ ಕಾಜಿ ನ್ಯಾಮತುಲ್ಲಾ ಯಾನೆ ಮಹಮ್ಮದರವರು, ದಸ್ಕತು ಮೊಹರು ಮಾಡಿ – ಯತಾರ್ಥಪಡಿಸಿದ ದಸ್ತ್ಯವಜಿನ ಮೂಲಕ ಕ್ರಯಕ್ಕೆ ಪಡಕೊಂಡದ್ದಾಗಿತ್ತದೆ. ಅದರ ಹಕ್ಕು ಅವರ ವಾರಿಸುದಾರನಾದ ನನಗೆ ಬಂದಿರುತ್ತದೆ. ಸದ್ರಿ ಕಟ್ಟಡವು ರಾಜಮಂಡಲದ ಜೈಕುಂಠ ಶಾಸ್ತ್ರಿ ಮತ್ತು ರಾಮೇಸರ ಹವಾಲುದಾರ ಇವರ ಸ್ವಾಧೀನಪಿತ್ತು. ಅದನ್ನು ನನಗೆ ಬಿಡ್ಡಿಕೊಡಬೇಕಾಗಿ ನಾನು ದಾಕ್ಲು ಮಾಡಿದ ಫಿರ್ಯಾದು ಮಹ್ಮದಾಬಾದಿನ ನಾಯಿಬ ಫೌಜದಾರರಾದ ರಾಜಾಬಲವಂತಸಿಂಗರಿಗೆ ಕಳುಹಿಸುಮಣದಾಗಿತ್ತು.

ಆದುದರಿಂದ ಅವರ ಹುಕುಂ ಪ್ರಕಾರ ಹವಾಲದಾರರಾದ ರಾಜಾ ಮೈಜುಲ್ಲಾ ಜಿಂನ್ ಮಹಮ್ಮದ್ ಇವರು ಸದ್ರಿ ಕಟ್ಟಡ ಇರುವಲ್ಲಿಗೆ ಸ್ವತಹಾ ಬಂದು ಕಾನೂನು ಪ್ರಕಾರ ಕೂಲಂಕುಶವಾಗಿ ತನ್ಕಿ ಮಾಡಿ ಮಜ್ಕುರ ಜೈಕುಂಠ ಶಾಸ್ತ್ರಿ ಮತ್ತು ರಾಮೇಸರ ಇವರ ಸ್ವಾಧೀನಪಿದ್ದ ಕಟ್ಟಡವನ್ನು ಅವರಿಂದ ತಪ್ಪಿಸಿ ಜೇರೆ ಯಾರೀಗೂ ಹಕ್ಕು ಬಾಧ್ಯತೆಯಿಲ್ಲದಂತೆ ಮಾಡಿ ನನ್ನ ಸ್ವಾಧೀನಪಡಿಸಿಕೊಟ್ಟದ್ದು ನನಗೆ ಬಂತು.

ಈ ವಿಷಯದಲ್ಲಿ ನಾನು ಬಹಳ ಕೃತಜ್ಞನಾಗಿರುತ್ತೇನೆ ಎಂತ ತಾ. 10 ರಮಜಾನ 1159ನೇ ಹಿಜರಿಯಲ್ಲಿ ನನ್ನ ಖುದ್ ಸಹಿನಿಶಿ ಬರಕೊಟ್ಟ ರಾಜಿನಾಮೆ.

ಇದು ಸುಮಾರು ಕ್ರಿ. ಶ. 1746ನೇ ಒಕ್ಟೋಬರ್ 3 ಆಗಬಹುದು.

ಇದು ಕಷ್ಟಾೖಕ ಅಂದ್ರೆ ಸೆಟ್ಲಿಮೆಂಟ್ ನಂಬ್ರ 5563ನೇ ಸ್ಥಳದ ಪೈಕಿ ಪಶ್ಚಿಮ ಬದಿಯಲ್ಲಿದ್ದ ಕಟ್ಟಡವಾಗಿರಬಹುದು. ಈ ಸ್ಥಳವನ್ನು ಉಪೇಂದ್ರ ತೀರ್ಥರು ಹಿಜರಿ 1031 ರಮಜಾನ ತಾ. 5ರಲ್ಲು ರು. 150ಕ್ಕೆ ಕ್ರಯಕ್ಕೆ ಪಡಕೊಂಡದ್ದು.

## 14. ನಬಾಬ ಅಬುಲಮನಸೂರಖಾನ ಬಹದುರ ಸಫದರಜಂಗ

ರಾಜಿನಾಮಾ ಬಾಮೈಹರೆ ಇಂಖಾದಿಮೆ ಶರಾಶರೀಫ ಆಂಕೇ ರೆಜಲ ನಾಫಿಜುತ್ ಸರೂಫ ಮಹಬೀರ ಮಾಸುಮ್‌ಶನಸ್ಟೆಖುದ್ ಮುಸಮ್ಮಾಗ್ಯಾನ ಇಂದರೆ ತೀರ್ಥವಲದ್ ಮಾಧವ ಇಂದರ್ ತೀರ್ಥ ಬಿನ್ ದೇವಯಿಂದರ ತೀರ್ಥ ಬಿನ್ ರಾಘ ಇಂದರ ತೀರ್ಥ ಬಿನ್ ಉಪೇಂದ್ರ ತೀರ್ಥ ದರದಾರುಲ್ ಕಜಾಬಲದಾ ಮಹಮ್ಮದಾಬಾದ ಉರ್ಫರಸಬಿ, ಹಾಜರ ಆಮದಾ ಯೆಕರಾರ ಸಹಿತರಯಿಕರ್ದ ಬವ ಜಾತೇ ಮನ್ ಮಕ್ರ ಕಬಲ ಅಜಾಪರವಾನಯೆ ಅಮಾರತೆ ವ ಅಬಾಲಕ್ ಮರ ತೀಬಕ್ ಹಶಮತ್ ವ ಶೌಕತ್ ಮಂಜಿಲಿಕ್ ಶರಿಫಲ ಹಜರತ್‌ಕಾಖಾನ ಬಿನಾಮೆ ಶಹಾಮತ್ ದಾವತ್ ಪನಾರಾಜಾ ಬಲವಂತ್ ಸಿಂಗ ನಾಯಿಬ ಫೌಜದಾರಿ ಬಲ್ದಾ ಮಹಮ್ಮದಾಬಾದ ಮಜ್ಕುರ ಬರ ಅವದರ್ಾ ಬೂದಂಬರಿ ಮಜಮೂನತೇಪಕ ಮಂಜಿಲ ಹರೇಲಿ ಹಸಬೆ ಬಿನಸೆವಬಾಸಂಗೆತೆ ದಾಫಿ ಯಾ ದರಮ್ಹಲ್ಲಾ ದುರ್ಗಾಘಾಟ್ ಅಂದರೂನ್ ಬಲದಾಮಹಮ್ಮದಾಬಾದ ಮಜಿಕೂರ ಮಹದೂದ ಬಹದೂದ ಆರಬಾಜೈಲ.

ಹದ್ದೆ ಮಶ್ರಿಕಿ. ಮುಕ್ತಶಿಲ ಬಜಮೀನ ದಿಗರ ಮತರೂಖಾ ಉಪೇಂದ್ರ ತೀರ್ಥ

ಹದ್ದೆ ಗರೂಬಿ. ಮುಕ್ತಶಿಲ ಶಾರಿಯೆ ಆಮ್.

ಹದ್ದೆ ಶುಮಾಲ ಮುಕ್ತಶಿಲ ಬಖಾನಾದಿಗರಮಕರೂಕಾ ಉಪೇಂದ್ರ ತೀರ್ಥ

ಮಜಕೂರ ವಬಾಜೆ ಮುಕ್ತಶಿಲ ಬನಾಲಾ ಓ ಬಿಲ್ ಮುರಾನ್

ಹದ್ದೆ ಜುನೂಬಿ ಮುಕ್ತಶಿಲ ದುರ್ಗಾಘಾಟ್ ಬರ್ಮಾಘಾಟ–

ಮಮ್ಲೂಖಾ ಉಪೇಂದ್ರ ತೀರ್ಥ ಮಜ್ಕುರ ಬಮರ ಜೂಬಿ ಕಟಾಲಾ ಬರೋಹಶೀ ಶರ್ಯಾತ್ ಪನಾಕಾಜಿನ್ಯಾಮತುಲಾವ ಆಪನಾಪನಾ ಮಹಮ್ಮದಷಮಾರೂಫ ಮುಫ್ತಿ ಬೂದ ಬಂದ ಪೋತಾ ಮರ್ಕಾ ಒಬಿಮನ್ ಫಕ್ತ ಬಶ್ತರಾ ಹಾಶಿಯಾ ಮಿರಾಸ ರಶೀದಾ. ವಹವೇಲಿ ಮಜಕೂರ ದರತಸ ರೂಫ ಬೈಕುಂಠ ಶಾಸ್ತ್ರಿ ಅವ ರಾಮೇಶರ ಹವಾಲ ದಾರಾನ್ ರಾಜಿಮಂಡಲಗ್ಯೆರಜಸ್ತ. ಚುನಾಚೆ ರಾಜಾ ಮೈಜುಲ್ಲಾಬಿನ್ ಮಹಮ್ಮದ ಹವಾಲದಾರ ರಾಬರಾ ಇನ್ ಪಿಸಾಲೆ ಈ ಮುಕದ್ದಮಾ ಮರ್ಖೂವಲ್ ನಮೂದಾಚೆ ಹವಾಲದಾರ ಮಜಕೂರ ಸರೆ ಮಹಲ್ಲಾರಫ್ತಾ ಖಿಲಫಾತ ಮುನ್ಸದಬಾನ್ ಕಾ ಹಕೀತಾತ್ ನಮೂದಾ ಹವೇಲಿ ಮಜ್ಕುರಕಾ ಅಜಿ ತಸ್ಸರೂಫ ಬೈಕುಂಠ ಶಾಸ್ತ್ರಿ ರಾಮೇಶ್ವರ ಮಜಕೂರಿನ್ ಬರ ಆವುದರ್ಾ ದರ ತಸರೂಫ ಹುನ್ನರ್ಖೂ ದನ್ ವಹವಾಲಯೇ ಮನ್ ನಮೂದಂದವಮನ್ ಹವೇಲಿಯೇ ಮಜಕೂರರಾ ಅಕನೂದರ

ಬ್ಜ ಖಿದ ಅವುರ್ದಂ ಇಲ್ ಹಾಲ್ ಮುದಾ ಬರಾಂ ದಾವಾ ಹವೇಲಿ ಯೇ
ಮಜಕೂರ ಹೆಚ್ ಇಲಾಖಾನೇಸ್ತ ವ ನಮಾನ ದ್ ವೆ ಮನ್ ಅಜಹುಸ್ತೋಸುಲುತೇ
ಾಜಾ ಮೈಜುಲ್ಲಾ ರಾಜಿವಶಾಕಿರಂ ಅಂವ ಈ ಚಂದಕಲಂ ಹಸ್ಜ ಇಕರಾರ ಮಕ್ರೆ
ಮಜಕೂರ ಬತ್ತರೀಕ ರಾಜಿನಾಮಾ ದರ ಕೈದ ಕಲಿಂ ಆ ಮದ ತಾಹರೀರಯಾಪ್ತ
ಾರೀಖ 19 ರಮಜಾನ 1159 ಹಿಜರಿ ಮುಖದ್ದಸ್. ಮೂಸಮ್ಮಾ ಜ್ಞಾನೀಂದ್ರ
ೀರ್ಥ ಮಜಕೂರ ತಂದಂ ಯೆಕ್ ಆಲಾಹರ ನಾಶಿನ್ ಮುನ ಜಸಮೆ ಬುಲಂದ
ೈರಿಸಿಮುರಮತ್ ಶಿಯಾಸನದಾಮಂದರ್ಜಾ ಬತರೂ ಹರಕೆ ಕೊಶಿಸ್ ಸೊಬರಾಜಿ.
ನಾಮೆ ದರತನ್.

ಇದು ಸುಮಾರು 1746ನೆ ಇಸವಿ ಅಕ್ಟೋಬರ್ ತಾ 3 ಆಗಬಹುದು.

ಉಪೇಂದ್ರತೀರ್ಥ ಇಬ್ನ ರಾಘವೇಂದ್ರ ತೀರ್ಥ

ರಾಘುಇಂದರ ತೀರ್ಥ ಇಬ್ನ ದೇವ ಇಂದರತೀರ್ಥ

ದೇವಇಂದರ ತೀರ್ಥ ಇಬ್ನ ಮಾಧು ಇಂದರತೀರ್ಥ

## 15. ಬಿರುದಾವಳಿ ವಿಷಯದಲ್ಲಿ ತೀರ್ಪು

ಶ್ರೀ ವರದೇಂದ್ರ ತೀರ್ಥ ಸ್ವಾಮಿರು ಕಳಸಕ್ಕೆ ಹೋಗುವ ವಿಶಯದಲ್ಲಿ-

ಕಾಶೀ ಮಠದ ಬಿರುದಾವಳಿ ವಿಷಯದಲ್ಲಿ ಕಡೂರ ಡಿ. ಸದರ್ನ್ ಡಿವಿಜನ ಅಸಿಸ್ಟಾಂಟ್ ಕಮಿಶನರ್‌ಲ್ಲಿ 1 ಕ್ಲಾಸ್ ಮೇಜಿಸ್ಟ್ರೇಟ್ ಕೋರ್ಟಿನಲ್ಲಿ

Crinel Misc Case No.15/A7/19AA - 19A1 Venkatesh Prabhu on behalf of Konkani - Peto

1. Manyappa 2.Suri Bhatta - counter petitioner

1 ಕ್ಲಾಸ್ ಮೇಜಿಸ್ಟ್ರೇಟ್ ಬಿ. ರಾಮಸ್ವಾಮಯ್ಯನವರು ಪ್ಪಾ ಮಲ್ಯನವರು ತಾ. 12-4-1901 ರಟಜಿಟಣಿ ಕೊಟ್ಟ ತೀರ್ಪಿನಲ್ಲಿ ಕಾಶೀಮಠಕ್ಕಿರುವ ಬಿರುದುಗಳ ವಿವರ 1 ಪಾಲಕಿ (ಅಡ್ಡ ಪಾಲಕಿ ಅಲ್ಲಾ) ಹಗಲು ದೀವಟಿಗೆ ಜೊತೆ – ಮಕರತೋರಣ – ಶ್ವೇತಛತ್ರ – ಧವಳಶಂಖ

ಶ್ರೀಭುವನೇಂದ್ರ ತೀರ್ಥ ಸ್ವಾಮಿಯವರು ನಗರಕ್ಕೆ ಹೋದಾಗ್ಯೆ ಉಂಟಾದ ಬಿರುದಾವಳಿ ವಿವಾದದ ಕುರಿತು ಮೈಸೂರು ಜುಡಿಶಿಯಲ ಕಮಿಶನರು ಕೊಟ್ಟ ತೀರ್ಪು ತಾ.18-5-1867 ಕ್ರಿ – ಮ್ಸಿ ಅಪೀಲು ನಂ. 1/197 of 1867 ಕಾಶಿಮಠದ ಭುವನೇಂದ್ರ ತೀರ್ಥ ಸ್ವಾಮಿ ಆಪಲಾಂಟ.

ಮಾರ್ಡಿ ವೆಂಕಪ್ಪ ನಾಯ್ಕರು ತಿರುಪತಿಗೆ ಹೋಗುವಾಗ್ಯ ಶಿಮೊಗಾದಲ್ಲಿ ಕುಂದಾಪುರ ಶ್ರೀ ವೆಂಕಟರಮಣ ದೇವಸ್ಥಾನಕ್ಕೆ ಆನಗಳ್ಳಿ ಆಸ್ತಿಯನ್ನು ಅದೇ ಕೋರ್ಟಿನ ಸೇಲಜಕೇಟಿನ ಮೇಲೆ ಶರಾ ಬರೆದು ಧರ್ಮಕ್ಕೆ ಕೊಟ್ಟದ್ದು. ಹೇವಿಳಂಬಿ ಸಂವತ್ಸ ರದ ಶ್ರಾವಣ ಶು ೫ – ಕ್ರಿ. ಶ. 1837ನೇ ಇಸ್ವಿ –

## 16. ಭಟಕಳದಲ್ಲಿರುವ ನಮ್ಮ ಸಮಾಜದವರ ದೇವಸ್ಥಾನಗಳು

1. ಮಣಿರಾಮಚಂದ್ರ ದೇವಸ್ಥಾನ – ತಸ್ತಿಕು ೩/ರು ೪ ಜುಮ್ಲಾಯೆಂಟು; ಅರ್ಚಕ ಮಣಿರಾಮಚಂದ್ರ ಭಟ್ರು ಯಾರು ಯಾವಾಗ ಸ್ಥಾಪನೆ ಮಾಡಿದ್ದು ಎಂಬುದು ಗೊತ್ತಾಗುವುದಿಲ್ಲ. ಭಟ್ರ ಸ್ವಾಧೀನ ಸ್ವಲ್ಪ ಆಸ್ತಿ ಉಂಟು. ಶಿಲಾಮಯ ಅಲ್ಲಾ. ಮೂಡಭಟಕಳದಲ್ಲಿ ಉಂಟು.

2. ನರ್ಸಿಕಿಣಿ ಲಕ್ಷ್ಮೀ ನರಸಿಂಹ ದೇವಸ್ಥಾನ – ನರ್ಸಿಕಿಣಿಯೆಂಬವರು ಕಟ್ಟಿಸಿದ್ದೆಂತ ಹೇಳುತ್ತಾರೆ. ಪೂರ್ಣಶಿಲಾಮಯ ಕಟ್ಟಡ. ಬಹಳ ಒಳ್ಳೇದುಂಟು. 4 ರುಪಾಯಿ ತಸ್ತೀಕು ಉಂಟು. 6 ಮುಡಿ ಅಕ್ಕಿಯ ಆಸ್ತಿ ಉಂಟು ಎಂತ ಹೇಳುತ್ತಾರೆ. ಅರ್ಚಕ ಶ್ರೀ ಇಂದಿರಾಕಾಂತ ಸ್ವಾಮಿಗಳವರ ಅಣ್ಣಂದಿರು. ಚಡ್ಡುಪುರಾಣಿಕರ ಮಗ ರಾಯಪುರಾಣಿಕರು, ಮೂಡಭಟಕಳ ತಿರುಮಲ ದೇವಸ್ಥಾನದ ಹಿಂದೆ ಉಂಟು. (ಶಿಲಾಲೇಖ – ಇಸ್ವಿ 1538 ಶಕ ೧೪೬೦ ತಸ್ತಿಕು 5 ರುಪಾಯಿ ವೃತ್ತಿ ಉಂಟು ಎಂತ ಗಜೆಟಿಯರಿನಲ್ಲಿ ಉಂಟು)

3. ಅಡ್ಕೆ ನಾರಾಯಣ ದೇವಸ್ಥಾನ – ಪೂರ್ಣ ಶಿಲಾಮಯ. ಹಿಂದೆ ನಮ್ಮ ಜನರು ಮಾಡುತ್ತಿದ್ದ ಅಡ್ಕೆ ವ್ಯಾಪಾರದ ಧರ್ಮದಾಯದ ಫಂಡಿನಿಂದ ಕಟ್ಟಿಸಿದ್ದೆಂತ ಹೇಳುತ್ತಾರೆ. ಇದಕ್ಕೆ ರು. 2–0– ತಶ್ತಿಕು ಉಂಟು. ದೇವಸ್ಥಾನದ ಸ್ಥಳದ ಅಂಶಗಳನ್ನು ತಗ್ಗಿಸಿ ಗದ್ದೆಗಳನ್ನು ಮಾಡಿದ್ದಾರೆ. ಇನ್ನೊಂದಂಶದಲ್ಲಿ ಭಟ್ರುಮನೆ ಕಟ್ಟಿಕೊಂಡಿದ್ದಾರೆ. ದೇವಸ್ಥಾನ ಬಹಳ ಅರೂಪ ಸ್ಥಿತಿಯಲ್ಲಿ ಉಂಟು. ಬೇರೆ ಆಸ್ತಿಯಿಲ್ಲವೆಂತ ಹೇಳುತ್ತಾರೆ. ಅರ್ಚಕ ತಿರುಮಲ ದೇವರ ಅರ್ಚಕ ಭಟ್ರು – (ಅಷ್ಟದಿಕ್ಪಾಲಕರು ಉಂಟೆಂತಲೂ ದ್ವಾರದ ಮೇಲೆ ಶ್ರೀಕಾರ ಉಂಟೆಂತಲೂ ಗಜೆಟಿಯರನಲ್ಲಿ ಉಂಟು.)

4. ಸಾಂತಪನಾಯಕರ ತಿರುಮಲ ದೇವಸ್ಥಾನ – ಪೂರ್ಣ ಶಿಲಾಮಯ. ರು. 12–0–0 ತಸ್ತಿಕು ಉಂಟು. 42 ಮುಡಿ ಅಕ್ಕಿ ಗೇಣಿ ಸಿಕ್ಕುವ ಆಸ್ತಿ. ದೇವಸ್ಥಾನದ ಸಮೀಪ ಗದ್ದೆ ಬೈಲಲ್ಲಿ ಉಂಟು. ಈ ದೇವಸ್ಥಾನವನ್ನು ಚಿನಿವಾರ ಸಾಂತಪ್ಪ ನಾಯಕರು ಕಟ್ಟಿಸಿ ೧೪೭೭ನೇ ಶಾಲಿವಾಹನ ರಾಕ್ಷಸ ಸಂ। ಆಶಾಡ ಶು ೨ಲ್ಲು ಚನ್ನ ಭೈರಾದೇವ ರಾಣಿಯವಂದ ಆಸ್ತಿ ಧರ್ಮಶಾಸನ ಮಾಡಿಸಿದ್ದು ಇದ್ರ ಹಿಂದುಗಡೆ ಪುಟದಲ್ಲಿ ಬರೆದ ಶಾಸನದ ನಕ್ಲಿನಿಂದ ಕಾಣುತ್ತದೆ.

5. ಅಕ್ಕರ್ಸ ಕಮ್ತಿ ಲಕ್ಷ್ಮೀನಾರಾಯಣ ದೇವಸ್ಥಾನ – ಮೂಡಭಟ್ಕಳದಲ್ಲಿ ಗದ್ದೆ ಬೈಲಲ್ಲಿ ಉಂಟು. ಗರ್ಭಗೃಹ ಮತ್ತು ಮುಖಮಂಟಪ ಪೂರಾ ಶಿಲಾಮಯ.

ಎಡ ತೊಡೆಯ ಮೇಲೆ ಶ್ರೀ ಲಕ್ಷ್ಮೀದೇವಿಯನ್ನು ಕೂಡಿಸಿಕೊಂಡ ಶ್ರೀ ನಾರಾಯಣ ದೇವರ ವಿಗ್ರಹ ಉಂಟು. ತಸ್ತಿಕು ರು 4.0–0 ಮತ್ತು ಸ್ವಲ್ಪ ಆಸ್ತಿ ಉಂಟಂತೆ. ಸುತ್ತು ಪೌಳಿಗಳು ಪೂರಾ ಬಿದ್ದು ಹೋಗಿವೆ. ಆಕ್ಕರ್ಸ ಕಮ್ತಿರು ಕಟ್ಟಿಸಿದ್ದಂತ ಹೇಳುತ್ತಾರೆ. ಶಾಸನ ಇಲ್ಲಾ. (1550ನೇ ಇಸ್ವಿಯಲ್ಲಿ ಕಟ್ಟಿದೆಂತಲೂ ಶಿಲಾಲೇಖ ಉಂಟೆಂತ ಗಜೆಟಿಯರನಲ್ಲಿ ಉಂಟು.)

6. ಜೋಶಿಶಂಕರನಾರಾಯಣ ದೇವಸ್ಥಾನ – ಇದು ಜೋಶಿಯೆಂಬ ಉಪನಾಮದವರು ಕಟ್ಟಿಸಿದೆಂತ ಹೇಳುತ್ತಾರೆ. ಗರ್ಭಗೃಹ ಮತ್ತು ಎದುರಿನ ಮಂಟಪ ಸಹಾ 3 ಮಾಡುಗಳು ಪೂರಾ ಶಿಲಾಮಯವಾದ್ದು ಉಂಟು. ಅಲ್ಲಿದ್ದ ಒಂದು ಶಿಲಾ ತುಲಸಿಕಟ್ಟೆ ಬಹಳ ಉತ್ತಮವಿದ್ದದನ್ನು ಶ್ರೀ ಚಿತ್ರಾಪುರ ಮಠದವರು ಅರ್ಚಕರಿಂದ ಕ್ರಯಕ್ಕೆ ಪಡೆದು ಕುಲ್ಲಾಪುರ ಮಠದಲ್ಲಿ ಇಡಲಿಕ್ಕೆ ಕೊಂಡುಹೋಗಿದ್ದರಂತೆ. ಅಲ್ಲಿರುವ ಶಿಲಾಶಾಸನದ ಮೇಲೆ ಅರ್ಧ ಭಾಗ ಉಂಟು. ಅದ್ರಲ್ಲಿ ಒಂದು ವಡಕು ಇರುವುದರಿಂದ ಶಕ ತಿಳಿಯುವದಿಲ್ಲಾ. ಅಕ್ಷರಗಳು ಬಹಳ ಸವೆದು ಹೋಗಿವೆ. ಓದಲಿಕ್ಕೆ ಆಗುವುದಿಲ್ಲ. ಸರ್ವಜಿತು ಸಂ।ರದ ಮಾರ್ಗಶಿರ ಶು– ಸ್ಥಿರವಾರ ಒಂದು ಕಾಣುತ್ತದೆ. ಜೋಯಿಸರ ಪ್ರಪೌತ್ರ .........ಜೋಯಿಸರ ಪೌತ್ರ ........... ಜೋಯಿಸರ ಪುತ್ರ........... ಜೋಯಿಸನು ಭಟಕಳದಲ್ಲಿ ಕಟ್ಟಿಸಿದ ಈಶ್ವರ ದೇವರಿಗೆ ಅಂತರಂಗ ನೈವೇದ್ಯ – ಮುಂತಾದ್ದು ನಡೆಯುವ ಬಗ್ಗೆ ಸಾಧಾರಣ ಓದಲಿಕ್ಕೆ ಆಗುತ್ತದೆ. ಬಾಕಿದ್ದು ಓದಲಾಗುವುದಿಲ್ಲಾ. ರು. 12 ತಸ್ತಿಕು ಉಂಟಂತೆ. ಆಸ್ತಿ ವಗೈರೆ ಇಲ್ಲ. ದೇವಸ್ಥಾನ ಇದ್ದ ಸ್ಥಳ ತಿರುಮಲ ದೇವರ ಮಂಜುನಾಥ ಭಟ್ರು ಮೂಲಗೇಣಿಗೆ ತೆಗೆದುಕೊಂಡು ಅಲ್ಲಿಯೇ ಮನೆ ಮಾಡಿಕೊಂಡಿದ್ದಾರೆ.

7. ಭೇತ ಪೈ ನಾರಾಯಣ ದೇವಸ್ಥಾನ – ಇದು ಮೂಡಭಟಕಳದಲ್ಲಿ ಮೇಲೆ ಹೇಳಿದ ಶಂಕರನಾರಾಯಣ ದೇವಸ್ಥಾನಕ್ಕೆ ತಾಗಿ ಪಶ್ಚಿಮಕ್ಕೆ ಉಂಟು. ಇದನ್ನು ಭೇತ ಪೈ ಎಂಬವರು ಕಟ್ಟಿಸಿದರಂತೆ. ತಿರುಮಲ ದೇವಸ್ಥಾನ ಕಟ್ಟಿಸಿದ ಸಾಂತಪ್ಪನಾಯ್ಕರು ಭೇತ ಪೈಗಳ ಬೀಗರು. ತಿರುಮಲ ದೇವಸ್ಥಾನದ ಪ್ರತಿಷ್ಠೆ ಸಮಯ ಭೇತ ಪೈಗಳಿಗೆ ಸರಿಯಾದ ಮಾನಮರ್ಯಾದೆ ಸಿಗಲಿಲ್ಲವೆಂಬದ್ರಿಂದ ಭೇತ ಪೈಗಳು ಈ ದೇವಸ್ಥಾನವನ್ನು ಅದಕ್ಕಿಂತ ಉತ್ತಮವಾಗಿ ಮತ್ತು ನೂತನವಾಗಿ ಕಟ್ಟಿಸಿದರೆಂತ ಹೇಳುತ್ತಾರೆ. (ಇದು ತಪ್ಪು. ಈ ದೇವಸ್ಥಾನ ಅದಕ್ಕಿಂತ ಮುಂಚೆ ಆದದ್ದು.) ಈ ದೇವಸ್ಥಾನದಲ್ಲಿದ್ದ ಶಿಲಾಶಾಸನ ಕಳೆದ 1942 ಇಸ್ವಿಯಲ್ಲಿ ಸರಕಾರದವರು ಪೂನಾ ಅಥವಾ ಬೊಂಬೈ ಕಡೆಗೆ ತೆಗೆದುಕೊಂಡು ಹೋದ್ರಿಂದ ನೋಡ್ಲಿಕ್ಕೆ ಸಿಗಲಿಲ್ಲ. ದೇವಸ್ಥಾನದ ಶಿಲಾಮಯ ಕೆಲ್ಸ ಬಹಳ ಉತ್ತಮವಿದೆ.

ಗರ್ಭಗೃಹ ಮತ್ತು ಮುಖಮಂಟಪ ಕೂಡಿ ಒಂದು ಕಟ್ಟಡ. ಇದು ಅಡಿಯಿಂದ ಮಾಡು ಕೂಡಾ ಪೂರಾ ಶಿಲಾಮಯ. ಅಡಿ ನೆಲಗಟ್ಟಿನ ನಾಲ್ಕು ಬದಿಗಳಲ್ಲಿ ರಾಮಾಯಣದ ಎಲ್ಲಾ ಚಿತ್ರಗಳನ್ನು ಬಿಡಿಸಿದ್ದಾರೆ. ಸುತ್ತು ಗೋಡೆಯ ಮೇಲೆ ಕಂಬದ ಮೇಲೆ ಸಹಾ ಉತ್ತಮವಾದ ಚಿತ್ರಕೆಲಸವಿದೆ. 4 ಬದಿಯಲ್ಲಿರುವ ಪೌಳಿಗಳು ಅಡಿನೆಲಗಟ್ಟಿ ಚೌಕ ಮಾಡುಗಳು ಕೂಡಾ ಪೂರಾ ಶಿಲಾಮಯವಾಗಿತ್ತು. ಈ ಪೌಳಿಗಳ ನೆಲಗಟ್ಟಿನ ಒಳಭಾಗದಲ್ಲಿ ಭಾರತದ ಚಿತ್ರಗಳು ಮಾಡಿದ್ದಾರೆ. ಸುತ್ತು ಪೌಳಿಗಳ ಚೌಕ ಕಂಬಗಳು ಮಾಡುಗಳು ಸಹಾ ಬಿದ್ದು ಹೋಗಿವೆ. ಕಲ್ಲುಗಳು ಬೇಕು ಬೇಕಾದವರು ತೆಗೆದುಕೊಂಡು ಹೋಗಿದ್ದಾರೆ. ಕಲ್ಲುಗಳ ಬಗ್ಗೆ ಮುಂಚೆ ಇಂಜನಿಯರ್ ಇಲಾಖೆಯವರು ಮಾಡುಗಳನ್ನು ಕಿತ್ತಿದ್ದಾರೆಂದು ಹೇಳುತ್ತಾರೆ. ಎದುರುಗಡೆಯಲ್ಲಿ ಎತ್ತರವಾದ ಧ್ವಜಸ್ತಂಭ ಮಾಡಿದ್ದಾರೆ. ಅದು ಸಾಬೀತು ಉಂಟು.

ಈ ದೇವಸ್ಥಾನ ಹಾಳು ಮಾಡಿದ್ದು ನೋಡುವಾಗ್ಯ ಬಹಳ ಪಶ್ಚಾತ್ತಾಪವಾಗುತ್ತದೆ. ಲಕ್ಷಾಂತ್ರ ರೂಪಾಯಿ ಖರ್ಚು ಮಾಡಿದಾಗ್ಯೂ ಇಂಥಾ ದೇವಸ್ಥಾನ ಕಟ್ಟಿಸುವುದು ಕಷ್ಟ. (ತಸ್ತಿಕ 15–4–0 ಶಿಲಾಲೇಖ ಇಸ್ವಿ 1546 ಶಕ ೧೪೬೮ ವಿಶ್ವಾವಸು ಸಂ।ರ ವೆಂತ ಗಜೆಟಿಯರಿನಲ್ಲಿ ಉಂಟು. ಇನ್ನೊಂದು ಶಿಲಾಲೇಖ ಇಸ್ವಿ 1567 ಶಕ ೧೪೮೮ ಕ್ಷಯ ಸಂ।ರದ್ದು ಎಂತ ಗಜೆಟಿಯರಿನಲ್ಲಿ ಉಂಟು.

8. ರಘುನಾಥ ದೇವಸ್ಥಾನ – ಇದು ಮಾಲಿಕರಿ ಕಚೇರಿಯಿಂದ ದಕ್ಷಿಣಕ್ಕಿರುವ ಪೇಟೆಯಿಂದ ಸೀದಾ ಪೂರ್ವಕ್ಕೆ ಹೋಗುವ ರಸ್ತೆಯಲ್ಲಿ 2 ಫರ್ಲಾಂಗ ಪೂರ್ವಕ್ಕೆ ಉಂಟು. ಗರ್ಭಗೃಹ ಮುಖಮಂಟಪ – ಎದುರಿನ ಹೆಬಾಗ್ಲ ಚಾವಡಿಯಿಷ್ಟು ಪೂರಾ ಶಿಲಾಮಯ ಗರ್ಭಗೃಹದ ಮಾಡಿನ ಕೆಲಸ ಬಹಳ ನಾಜೂಕಿದೆ. ಕಟ್ಟಡ ಒಳ್ಳೇದುಂಟು. ಇದರಲ್ಲಿರುವ ಶ್ರೀ ರಾಮಚಂದ್ರ ದೇವರ ವಿಗ್ರಹ ಬಹಳ ಸುಂದರವಾಗಿದೆ. ಎಡಗೈಯಲ್ಲಿ ಧನುಶ್ಯ, ಬಲಗೈಯಲ್ಲಿ ಬಾಣ ಹಿಡಿದು ಒಂದು ಹೆಜ್ಜೆ ಮುಂದೆ ಒಂದು ಹೆಜ್ಜೆ ಹಿಂದೆ ಇಟ್ಟು ನಿಂತಿರುವ ಮೂರ್ತಿ ಬಹಳ ಸುಂದರವಿದೆ. – ಬಲಬದಿಯಲ್ಲಿ ಲಕ್ಷ್ಮಣ ಎಡಬದಿಯಲ್ಲಿ ಸೀತಾದೇವಿಯರ ವಿಗ್ರಹ ಪ್ರಭಾವಳಿ ಸಹಾ ಬಹಳ ಅಲಂಕಾರವಿದೆ – ಇಂಥಾ ಸುಂದರ ವಿಗ್ರಹ ಬಹಳ ವಿರಳ. ಇದನ್ನು ಶಾಲಿವಾಹನ ಶಕ 1512ನೇ ವಿರೋಧಿ ಸಂ।ರದ ಜೇಷ್ಠ ಶು 10ರಲ್ಲು ಅಂತ ಕಿಣಿಯರ ಮಕ್ಕಳು ನಯ ಕಿಣಿ ವಿಠಲ ಕಿಣಿಯರ ಮಕ್ಕಳು ಬಾಳಕಿಣಿ ಅಂತ ಕಿಣಿ ಎಂಬಿವರು ಕಟ್ಟಿಸಿದ್ದು ಅದರ ವಿನಿಯೋಗದ ಅವರ ಬಿಟ್ಟಿರುವ ಆಸ್ತಿಯ ವಿವರ ಇದ್ದು ಕೂಡಾ ಹೆಬ್ಬಾಗಲಿನ ಉತ್ತರ

ಚಾವಡಿಯಲ್ಲಿ ನಡೆಗೆ ತಾಗಿರುವ ಕಂಬದ ದಕ್ಷಿಣ ಬದಿಯಲ್ಲಿ ಬರೆಸಿ ಹಾಕಿದ್ದುಂಟು. ಇದರ ನಕ್ಲು ತೆಗೆದದ್ದು – ಈ ಪುಸ್ತಕದ 28ನೇ ಪುಟದಲ್ಲಿ ಬರೆದದ್ದುಂಟು. (ತಸ್ತುಕು ರು 4–0–0)

9. ಪರಶುರಾಮ, ಮತ್ತು ದಾಮೋದರ ದೇವಸ್ಥಾನ – ಈ 2 ದೇವರು 2 ಕೋಣೆಗಳಲ್ಲಿ ಸ್ಥಾಪಿಸಿರುವ ದೇವಸ್ಥಾನ. ಶ್ರೀಕಾಶೀ ಮಠದ ಸಮೀಪ ಕಾಮಾಕ್ಷಿ ದೇವಸ್ಥಾನದ ಎದುರ್ರುಗಡೆಯಲ್ಲಿ ಉಂಟು. ಇದನ್ನು ಗೋವೆಯ ಮಠಗ್ರಾಮದಿಂದ ಭಟ್ಕಳಕ್ಕೆ ಬಂದ ದಾಮಪ್ರಭುರ ಸಂತತಿಯವರು ಸ್ಥಾಪಿಸಿದ್ದೆಂತ ಹೇಳುತ್ತಾರೆ. ಅವರ ಸಂತತಿಯವರು ಈಗ ಭಟ್ಕಳದಲ್ಲಿ ರಾಮಪ್ರಭು ಬಿನ್ ಚರ್ಡ ಪ್ರಭು ರು– ಪರಶುರಾಮ ಪ್ರಭುರ ಮಗ ಗೋಪಾಲ ಪ್ರಭುರು ಈ 3 ಮನೆಯವರು ಇದ್ದಾರೆ. ಇವರ ಹಿರಿಯ ವಿಠಲ ಪ್ರಭುರ ಮಗ ದಾಮಪ್ರಭುರು ಮಡಗಾವಿನಲ್ಲಿದ್ದಾಗ್ಯೆ – ವಿದ್ಯಾನಗರದ ಭುಜಬಲರಾಯರು ಕೊಟ್ಟ ತಾಮ್ರಶಾಸನ ಶಾ.ಶ. 1374ರಲ್ಲಿ ಕೊಟ್ಟದ್ದು ಈ ದೇವಸ್ಥಾನದಲ್ಲಿತ್ತು. ಅದರ ನಕಲು **ಸರಸ್ವತಿ ಮಂಡಲ**ದಲ್ಲಿದೆ. ಆ ಶಾಸನ ಸದ್ರಿ ದೇವರ ಅರ್ಚಕ ಭಟ್ರು ನಿಸ್ಸಂತತಿಯಾಗಿ ಕಡೆಯವರ ವಿಧವೆ ನಾಗೂರ ವಾಸುದೇವ ಪೈಗಳವರ ಸಹೋದರಿ ತೆಗೆದುಕೊಂಡು ಹೋಗಿರಬಹುದೆಂತ ಹೇಳುತ್ತಾರೆ. ಅದನ್ನು ವಿಚಾರ ಮಾಡಿ ತಿಳಿಯಬೇಕು.

10. ತಿರುಮಲ ದೇವಸ್ಥಾನ – ಮೇಲೆ ಹೇಳಿದ ರಾಮ ಪ್ರಭುರ ತಂದೆ ಚರ್ಡಯ ಪ್ರಭುಗಳೇ ಕಾಶಿ ಮಠ ಈಗ ಇರುವ ಜಾಗ ಮತ್ತು ಕೆಲವು ಆಸ್ತಿ ಶ್ರೀ ಭುವನೇಂದ್ರ ಸ್ವಾಮೀರೀಗೆ 188_ನೆ ಇಸವಿಯಲ್ಲಿ ಕೊಟ್ಟದ್ರಿಂದ ಮುಂಚೆ ಹೊಂಡದ ಕೇರಿಯಲ್ಲಿದ್ದ ಕಾಶೀಮಠ ಈಗ ಇರುವ ಸ್ಥಳಕ್ಕೆ ಶ್ರೀ ಭುವನೇಂದ್ರ ಸ್ವಾಮಿಗಳು ಕಟ್ಟಿಸಿದ್ದು. ಸದ್ರಿ ಮಠ ಹೊಂಡದ ಕೇರಿಯಲ್ಲಿದ್ದದ್ದು ಅಂತ ಮಲ್ಯರು ಕಟ್ಟಿಸಿದ್ದು– ಅವರ ಮಗ ಜೋಗ ಮಲ್ಯರು ಶ್ರೀ ಯಾದವೇಂದ್ರ ತೀರ್ಥ ಸ್ವಾಮೀರೀಗೆ ಶಾ. ಶ. ೧೫೭೯ನೇ ಪರಾಭವ ಸಂ। ದಲ್ಲಿ ದಾನಶಾಸನ ಕೊಟ್ಟದ್ದು.

ಸದ್ರಿ ಶಾಸನದ ನಕ್ಲು ಇದೇ ಪುಸ್ತಕದ 54ನೇ ಪುಟದಲ್ಲಿ ಬರೆದಿದೆ. ಈ ಮಠ ಎಂಬುದು ಮುಂಚೆ ತಿರುಮಲ ದೇವಸ್ಥಾನವೆಂಬ ಹೆಸರಿತ್ತು. ಈಗಲೂ ಅದೇ

ೀವರು. ಈ ಮಠಕ್ಕೆ ಭುವನೇಂದ್ರ ಸ್ವಾಮೀರ ಕಾಲದಲ್ಲಿ ಮೇಲೆ ಹೇಳಿದ ಪ್ರಭೂರ ಟುಂಬದವರು ಕೊಟ್ಟ ದಾನಶಾಸನಗಳು ಪ್ರತ್ಯೇಕ ಇವೆ.

11. ಶ್ರೀ ಕಾಮಾಕ್ಷಿ ದೇವಸ್ಥಾನ – ಮೇಲೆ ಹೇಳಿದ ಕಾಶಿ ಮಠ ೊಂಡದಕೇರಿಯಲ್ಲಿ ಕಟ್ಟಿಸಿದ ಅಂತ ಮಲ್ಯರೇ ಅದಕ್ಕೆ ತಾಗಿ ಹೊಂಡದ ಕೇರಿಯಲ್ಲಿ ೀ ಕಾಮಾಕ್ಷಿ ದೇವಸ್ಥಾನ ಸಹಾ ಕಟ್ಟಿಸಿದ್ದರೆಂತ ಶ್ರೀ ಕಾಶಿ ಮಠದ ಯಾದವೇಂದ್ರ ೀರ್ಥರಿಗೆ ಜೋಗ ಮಲ್ಯರು ಬರಕೊಟ್ಟ ಶಾಸನದಲ್ಲಿ ಕಾಣುತ್ತದೆ.

ಅದೇ ದೇವಸ್ಥಾನ ಹೊಂಡದಕೇರಿಯಿಂದ ತಂದು ಈಗ ಕಾಶಿಮಠ ಇರುವ ೀರಿಯಲ್ಲಿ ರಸ್ತೆ ಬದಿಯಲ್ಲಿಯೇ ಕಟ್ಟಿಸಿದ್ದಾರೆ. ಇದು ಕುಲದೇವಸ್ಥಾನ. ಇದಕ್ಕೆ ಮೊಲ್ಕಿ ವಡೇರಬೆಟ್ಟು ಕಮ್ತಿರು ವಗೈರೆ ಕುಳಾಪಿರು ಇದ್ದಾರೆ. ಕಟ್ಟಡ ಒಳ್ಳೆಯ ೀತಿಯಲ್ಲಿದೆ.

12. ಗಣಪತಿ ದೇವಸ್ಥಾನ – ಕಾಮಾಕ್ಷಿ ದೇವಸ್ಥಾನದ ಪೂರ್ವ ರಸ್ತೆ ಬದಿಯಲ್ಲಿ ಕಾಶಿಮಠದ ಪಶ್ಚಿಮಕ್ಕೆ ಒಂದು ಗಣಪತಿ ದೇವಸ್ಥಾನ ಉಂಟು. ಇದಕ್ಕೆ –8–0 ತಸ್ತಿಕು ಉಂಟಂತೆ. ಸ್ವಲ್ಪ ಆಸ್ತಿ ಉಂಟೆಂತ ಹೇಳುತ್ತಾರೆ. ಇದು ಯಾರು ಟ್ಟಿಸಿದರೆಂಬುದು ತಿಳಿಯುವದಿಲ್ಲಾ. ಶಿಲಾವಿಗ್ರಹ.

13. ಮೂಡಭಟಕಳದಲ್ಲಿರುವ ಆದಿಕೇಶವ ದೇವಸ್ಥಾನ – ಧಾತುವಿಗ್ರಹ; ಶಿಲಾಮಯವಲ್ಲ. ತಸ್ತಿಕು ರು. 10–0–0. 30 ಮಾನಿ ಗೆ ಅಕ್ಕಿ ಹುಟ ತಿರುಮಲ ದೇವಸ್ಥಾನದ ಹುಟ್ಟುಳ್ಳಿಯ ಆಸ್ತಿ. ಅರ್ಚಕರು ಶ್ರೀ ಇಂದಿರಾಕಾಂತ ಸ್ವಾಮಿಗಳ ಪೂರ್ವಾಶ್ರಮದ ಕುಟುಂಬದ ಪುರಾಣಿಕರು.

14. ಬಿಳಲ ಖಂಡದ ವಿಠಲದೇವರು – ಈ ದೇವರ ದೇವಸ್ಥಾನ ಮುಂಚೆ ಪಟ್ಕಳದಿಂದ 1 ಮೈಲಿ ಪೂರ್ವಕ್ಕೆ ಬಿಳಲ ಖಂಡ ಎಂಬಲ್ಲಿ ಇತ್ತು. ಆ ದೇವಸ್ಥಾನಕ್ಕೆ ಸ್ವಲ್ಪ ಆಸ್ತಿಯುಂಟು ಮತ್ತು ರು 8–8–0 ತಸ್ತಿಕು ಸಿಕ್ಕುತ್ತದೆ. ಸದ್ರಿ ವಿಠಲ ದೇವರಿಗೆ ಪಟ್ಕಳದಲ್ಲಿ ಒಂದು ಹಿತ್ಲು ಸ್ಥಳ ಇತ್ತು. ಆ ಹಿತ್ಲು ಸ್ಥಳದಲ್ಲಿ ಪೂರ್ವದಲ್ಲಿ ಉತ್ತರಾದಿ ಮಠದ ಸ್ವಾಮಿಗಳು ಬಂದ್ರೆ ನಿಲ್ಲುವ ಬಗ್ಗೆಂತ ನಮ್ಮ ಜಾತಿಯವರು ಒಂದು ಮಠ ಕಟ್ಟಿಸಿ ಅದರಲ್ಲಿ ಶ್ರೀ ಗೋಪಾಲಕೃಷ್ಣ ದೇವರನ್ನು ಸ್ಥಾಪಿಸಿರುತ್ತಿದ್ದರು. ಕಾಲಕ್ರಮೇಣ ಬಿಳಲ ಖಂಡದಲ್ಲಿದ್ದ ವಿಠಲ ದೇವಸ್ಥಾನ ಬಿದ್ದುಹೋದನಂತ್ರ ಆ ದೇವರನ್ನು

ಮೇಲೆ ಹೇಳಿದ ಮಠದ ಗರ್ಭಗೃಹದ ಹೊರಗೆ ದ್ವಾರಪಾಲಕರನ್ನು ಇಡುವ ಸ್ಥಳದ ತಂದು ಇಟ್ಟಿದ್ದಾರೆ. ಅದಕ್ಕೆ ರು. 8–8–0 ತಸ್ತಿಕು ಸಿಕ್ಕುತ್ತದೆ. ಸದ್ರಿ ಮಠ ಇರು ಜಾಗಕ್ಕೆ ಬಿಳಲು ಖಂಡದ ವಿಠಲ ದೇವರಂಥ ಖಾತೆ ದಾಕ್ಲು ಆಗಿದೆ. ಈ ಮಠ ಗೋಕರ್ಣ ಮಠದವರು ಈ ವರೆಗೇ ಅಮೃತಪಡಿ ನಂದಾದೀಪ್ತಿ ಬಗ್ಗೆ ಏನು ಕೊಟ್ಟದ್ದು ಇಲ್ಲ. ಇತ್ತಲಾಗೆ ಇಂದಿರಾಕಾಂತಸ್ವಾಮಿಗಳವರು ಮಠ ದುರಸ್ತಿ ಊರಿ ಗೃಹಸ್ಥರಿಂದ ಮಾಡಿಸಿದ್ದಾರೆ. ಈಗಲೂ ಮಠವು ಊರಿನ 10 ಜನರು ಸೇರು ದೇವಸ್ಥಾನವೆಂತ ಮಾಡಿದ್ದಾರೆ. ಗೋಕರ್ಣ ಮಠದ **ಗುರುಪರಂಪರಾಮೃತದ** ನಾರಾಯಣತೀರ್ಥ ಸ್ವಾಮಿಗಳು ಕಟ್ಟಿದ್ದೆಂತ ಹೇಳಿದ್ದು ಜೀವೋತ್ತಮ ಸ್ವಾಮಿಗಳ ವಿಠಲ ದೇವರನ್ನು ಇಟ್ಟಿದ್ದು ಎಂದು ಹೇಳಿದ್ದು ಸಹಾ ಇದೇ ಮಠ.

# 17. ಗಂಗೊಳ್ಳಿಯಲ್ಲಿರುವ ಮಲ್ಯರ ಮಠದ ಹೊರಭಾಗದಲ್ಲಿರುವ ಶಿಲಾಶಾಸನದ ನಕ್ಲು

ಶ್ರೀ ಗಣಾಧಿಪತಯೇ ನಮಃ ನಿರ್ವಿಘ್ನಮಸ್ತು. ಶುಭಮಸ್ತು.

ನಮಸ್ತುಂಗ ಶಿರಶ್ಚುಂಬಿ ಚಂದ್ರ ಚಾಮರ ಚಾರವೆ

ತ್ರೈಲೋಕ್ಯ ನಗರಾರಂಭ ಮೂಲಸ್ತಂಭಾಯ ಶಂಭವೆ.

ಸ್ವಸ್ತಿ ಶ್ರೀಜಯಾಭ್ಯುದಯ ಶಾಲಿವಾಹನಶಕವರುಷ 1584ನೇಯ ಪ್ಲವ ಸಂವತ್ಸರದ ಮಾರ್ಗಶಿರ ಶು ರ 5ಲ್ಲು ಶ್ರೀಮದ್ದೇವ ಮುರಾರಿ ಕೋಟೆ ಕೊಳಾಹಳ ವಿಶುಧ ವೈದಿಕಾದ್ವಯಿತ ಶಿವ ಗುರು ಭಕ್ತಿ ಪರಾಯಣರಾದ ಕೆಳದಿ ಸಂಕಣ್ಣ ನಾಯಕರ ಪ್ರಪೌತ್ರರು ಶಿದ್ದಪ್ಪ ನಾಯಕರ ಪೌತ್ರರು ಶಿವಪ್ಪ ನಾಯಕರ ಪುತ್ರರಾದ ಭದ್ರಪ್ಪ ನಾಯಕರು. ಕೌಶಿಕಗೋತ್ರದ ಅಶ್ವಲಾಯನ ಸೂತ್ರದ ಋಕಶಾಖೆಯ ಶಾಷ್ಟಿ ಅಂತ್ರೋಜಿಯ (ರೋಣಿ) ಗ್ರಾಮದ ವಿಠಲ ಮಲ್ಯನ ಪ್ರಪೌತ್ರ ಗಣಪತಿ ಮಲ್ಯನ ಪುತ್ರರಾದ ನಾರಾಯಣ ಮಲ್ಯಗೆ ಕೊಟ್ಟ ಉಮ್ಮಳಿ ಭೂದಾನ ಶಾಸನ ಕ್ರಮವೆಂತೆಂದರೆ

ಮುಗುವಿನ ಸೀಮೆಯ ಒಳಗಣ ಗಂಸಾಗುವಳಿ ಗ್ರಾಮದಿಂದ ಗದ್ದೆಯಲ್ಲು ಬೀಜವರಿ ಮುಡಿ ೭೦॥ ಹಾ5 ಹೊಲು ೧ ಹಾಸು ಮುಡಿ ೧೬॥ ಉಪ್ಪು ನೀರು ಹಾದು ಕಯಾಳಿದು ಮು ೨೧॥ ಉಭಯ ಮು ೩೮॥ ಶುಧ ಬಯಲು ಮೆಕ್ಕೆ ಮಕ್ಕಿ ಸಾಹಾ ಮುಡಿ ೩೨ಹಾ ೫ಕೆ ಗೇಣಿ ಅಕ್ಕಿ ಮುಡಿ ೧೪೮ಕೆ ಮುಡಿ ೧ ಕೊಳಗ ॥ಲ್ಲು ಗ ೭೪ಕ್ಕೆ ಪ್ರಾಕುರೇಖೆ ಪ್ರಮಾಣ ಗ ೭೮॥ ತೆಂಗಿನ ಮರ ನಿಂದಲು ಪ್ರಾಕ ಎಣಿಕೆ ಮರ । ೧೦೭೪ಕೆ

ವಿಳಂಬಿ ಸಂವತ್ಸರದಲ್ಲಿ ಮಾಡಿದ ಎಣಿಕೆ ಪ್ರಮಾಣ ಮರ ೯೦೧ಕ್ಕೆ ಸಶಿ ಚೋಕು ೬೨ ಶುಧ ಮರ ೮೨೯ ಕೆ ಗೇಣಿ ಗ ೫ಲ್ಲು ೪೧॥ ಉಭಯಂ ಗ ೧೨೦ ನೂರ ಇಪ್ಪತ್ತು ವರಹಾನ್ನ ಗ್ರಾಮವನ್ನು ಸಹಿರಣ್ಯ ಉದಕ ಧಾರಾಪೂರ್ವಕವಾಗಿ ಶಿವಾರ್ಪಿತವಾಗಿ ಬಿಟ್ಟೆವಾಗಿ ಈ ಗ್ರಾಮಕ್ಕೆ ಸಲುವ ಚತುರ್ಗಡಿವಳಗಾಗಿ ಪ್ರಾಕು ಕಳೆದ ಸಶಿ ಚೋಕಿನಿಂದ ನಷ್ಟಕ್ಕೆ ಕಳೆದ ಭೂಮಿ ಸಾಗುಮಾಡಿಸಿ ಅದರಿಂದ ಹೊಸ್ತಾಗಿ ಹಾಕಿಕೊಂಬ ಸಶಿಯಿಂದ ಆದ ಹುಟ್ಟುವಳ್ಳಿ ಸಹಾ ಈ ಭೂಮಿಗೆ ಸಲುವ ಸಾಮ್ಯವನ್ನು ಪೂರ್ವ ಸಾಮ್ಯವನ್ನು ಪೂರ್ವ ಮರ್ಯಾದೆಯಲ್ಲಿ ಆಗು ಮಾಡಿಸಿಕೊಂಡು ನಿನ್ನ ಸಂತಾನ ಪರಂಪರೆಯಾಗಿ ಅನುಭವಿಸಿಕೊಂಡು ಬಹುದೆಂದು ಕೊಟ್ಟ ಶಿಲಾಶಾಸನ.

ಆದಿತ್ಯಚಂದ್ರಾವನಿಲೋನಲಶ್ಚ ದೌರ್ಭೂಮಿರಾಪೋಹೃದಯಂ ಯಮಶ್ಚ ।
ಅಹಶ್ಚ ರಾತ್ರಿಶ್ಚ ಉಭೇಚ ಸಂಧ್ಯೆ ಧರ್ಮಸ್ಯ ಜಾನಾತಿ ನರಸ್ಯ ರೂಪಂ।
ದಾನ ಪಾಲನಯೋರ್ಮಧ್ಯೆ ದಾನಾಚ್ಛ್ರೇಯೋನುಪಾಲನಂ ।
ದಾನಾತ್ಸ್ವರ್ಗಮವಾಪ್ನೋತಿ ಪಾಲನಾದಚ್ಯುತಂ ಪದಂ ॥

ಶ್ರೀ ಸದಾಶಿವ ।

ಆದಿತ್ಯ ಚಂದ್ರಾವನಿಲೊನಲಶ್ಚ ದೌರ್ಭೂಮಿರಾಪೋ ಹೃದಯಂ ಯಮಶ್ಚ
ಅಹಶ್ಚ ರಾತ್ರಿಶ್ಚ ಉಭೇಚ ಸಂಧ್ಯೆ ಧರ್ಮಸ್ಯ ಜಾನಾತಿ ನರಸ್ಯ ವೃತ್ತಂ ।
ಸ್ವದತ್ತಂ ವಾ ಯೊರೆತವಸುಂದರಾ ಸ್ರಷ್ಟವರುಷ
ಸಹಸ್ರಾನಿ ವಿಷ್ಟಾಯಾಂ ಜಾಯತೆ ಕ್ರಿಮಿ ।
ಸ್ವದತ್ತಾ ದ್ವಿಗುಣಂ ಪುಣ್ಯಂ ಪರದತ್ತಾನುಪಾಲನಂ
ಪರದತ್ತಾಪಹಾರೇಣ ಸ್ವದತ್ತಂ ನಿಷ್ಫಲಂ ಭವೇತ್ ।

ಇನ್ನು 5 ಪಂಕ್ತಿಗಳಲ್ಲಿ ಇನ್ನೊಂದು ಶ್ಲೋಕವಿದೆ–

ಶ್ರೀ ರಾಮದೇವವೀರವಿಠಲ ಸೂಪ್ತ । ಶ್ರೀಲಕ್ಷ್ಮೀಯುತನಾದಿ ನಾರಾಯಣ ತೀರ್ಥ ಕಥಿತ ತಿಥಿಕ್ರಮ–

ಅಥಾತಃ ಸಂಪ್ರವಕ್ಷ್ಯಾಮಿ ಮಧ್ವಾದೀನಾಂ ತಿಥಿಕ್ರಮಂ ।
ಸಮಾರಾಧನ ಪೂಜಾರ್ಥಂ ಶಿಷ್ಯಾಣಾಂ ವೃದ್ಧಿ ಹೇತವೇ ॥
ನವಮೀ ಮಾಘಮಾಸಸ್ಯ ಶುಕ್ಲಾನಂದಮುನೇಃ ಸ್ಥಿತಿಃ ।
ಕಾರ್ತಿಕೀ ಪದ್ಮನಾಭಸ್ಯ ಮುನೇ ಕೃಷ್ಣಾ ಚತುರ್ದಶೀ ॥
ತತೋ ನೃಹರಿತೀರ್ಥಾನಾಂ ಪೌಷ ಕೃಷ್ಣಶ್ಚ ಸಪ್ತಮೀ ।
ಉಕ್ತಾ ಮಾಧವತೀರ್ಥಾನಾಂ ನಾಮಾ ಭಾದ್ರಪದಸ್ಯ ಚ ॥
ಪಂಚಮೀ ಮಾರ್ಗಶೀರ್ಷಸ್ಯ ಕೃಷ್ಣಾಕ್ಷೋಭ್ಯ ಮುನೇಸ್ತಿಥಿಃ ।
ಜಯತೀರ್ಥ ಮುನೀಂದ್ರಾಣಾಂ ಆಷಾಢೀ ಕೃಷ್ಣ ಪಂಚಮೀ ॥
ವಿದ್ಯಾಧಿರಾಜ ತೀರ್ಥಾನಾಂ ವೈಶಾಖಾದ್ಯ ತೃತೀಯಕಾ ।

ತ್ರಸ್ಯ ಶುಕ್ಲನವಮೀ ಕವೀಂದ್ರಾಖ್ಯ ಮುನೇಸ್ತಿಥಿಃ ॥
ಷ್ಣದ್ವಿತೀಯ ಚೈತ್ರಸ್ಯ ವಾಗೀಶಾಖ್ಯ ಮುನೇಸ್ತಥಾ ।
ುಕ್ಲ ಷಷ್ಠಿ ಚ ವೈಶಾಖೇ ರಾಮಚಂದ್ರ ಮುನೇಸ್ತಥಾ ॥
ತುರ್ಥೀ ಕಾರ್ತಿಕೀಕೃಷ್ಣ ವಿದ್ಯಾನಿಧಿ ಮುನೇರಪಿ ।
ಾರ್ಗೇ ಕೃಷ್ಣಪ್ರತಿಪದಾ ರಘುನಾಥ ಮುನೇರಪಿ ॥
ೃತೀಯಾ ಜ್ಯೇಷ್ಠ ಕೃಷ್ಣಸ್ಯಾ ರಘುವರ್ಯ ಮುನೇಸ್ತಥಾ ।
ುಷ್ಯೇ ಶುಕ್ಲೈಕಾದಶೀ ಚ ರಘೂತ್ತಮ ಮುನೇಸ್ತಿಥಿಃ ॥
ವೈಶಾಖಾದ್ಯ ತೃತೀಯಾ ಚ ನಾರಾಯಣ ಮುನೇರಪಿ ।
ೃಹಜ್ಜೀವೋತ್ತಮಮುನೇಃ ಭಾದ್ರಯಾಃ ಪಂಚಮೀತಿಥಿಃ ॥
ಜೀವೋತ್ತಮ ಮುನೀಂದ್ರಸ್ಯ ಕಾರ್ತಿಕೀ ಕೃಷ್ಣ ಸಪ್ತಮೀ ।
ರಾಮಚಂದ್ರ ಯತೀಂದ್ರಸ್ಯ ಭಾದ್ರೇ ಶುಕ್ಲಾಚ ಪಂಚಮೀ ॥
ದಿಗ್ವಿಜಯೀಂದ್ರ ಯತೀಂದ್ರಸ್ಯ ಮಾಘೇ ಶುಕ್ಲಾಚಸಪ್ತಮೀ ।
ರಘುಚಂದ್ರ ಮುನೀಂದ್ರಸ್ಯಾ ತಿಥಿಃ ಪೌಷೀತು ಪೂರ್ಣಿಮಾ ॥
ಜಯತಿ ಪರಾಶರಸೂನುಃ ಸತ್ಯವತೀ ಹೃದಯನಂದನೋ ವ್ಯಾಸಃ ।
ಯಸ್ಯಾಸ ಕಮಲಗಲಿತಂ ವಾಙ್ಮಯಮಮೃತಂ ಜಗತ್ ಪಿಬತಿ ॥
ನಮಸ್ತೇ ಪ್ರಾಣೇಶ ಪ್ರಣತವಿಭ ಮಾಯಾಮತಿಮಗಾ ನಮಸ್ವಾಮಿ ।
ರಾಮಪ್ರಿಯತಮ ಹನುಮದ್ಗುರುಗುಣ ಸಮಸ್ತುಭ್ಯಂ ಭೀಮ ॥
ಧವಲತಮ ಕೃಷ್ಣೇಷ್ಟ ಭಗವನ್ ನಮಃ ಶ್ರೀ ಮನ್ಮಧ್ವ ಪ್ರದಿಶ ಸುದೃಶಂ ।
ನೋಜಯಜಯ ವಂಶಾಸ್ಯಾದೀನ್ ಸನಕಾದೀನ್ ॥
ಉಪಾಸೇ ದುರ್ವಾಸ ಸಂಪರತೀರ್ಥಾಭಿಧಾನಂ ಸತ್ಯಪ್ರಜ್ಞಂ ।
ಪ್ರಾತತೀರ್ಥಾನ್ ಯತೀಂದ್ರಾನ್ ಕ್ರಮಾನ್ನೋಮಿತ್ಯಚ್ಯುತ ॥
ಪ್ರಜ್ಞಾಮುಖ್ಯಾನ್ ಇತ್ಯತ್ರ ಋಷಿ ಪರಂಪರಾ ॥
ಶ್ರೀ ಮನ್ಮಧ್ವಮುನಿಂ ನಮಾಮಿ ತದನುಶ್ರೀಪದ್ಮನಾಭಂ ಮುನಿಂ ।
ಶ್ರೀಮಂತಂ ವರಬೋಧದಂ ನರಹರಿಂ ಶ್ರೀಮಾಧವಂ ಸಾದರಂ ॥

ಅಕ್ಷೋಭ್ಯಂ ಜಯತೀರ್ಥರಾಜ ಮುನಿಪಂ ವಿದ್ಯಾಧಿರಾಜಂ ತಥಾ ।
ವೇದೋಪ್ರೌಢಕವೀಂದ್ರತೀರ್ಥ ಯತಿಪಂ ವಾಗೀಶ ತೀರ್ಥಂ ತಥಾ॥
ಶ್ರೀರಾಮಾಂಘ್ರಿ ಸರೋಜ ಷಟ್‌ಪದವರಂ ಶ್ರೀರಾಮಚಂದ್ರಂ ಯತಿಂ ।
ವೈರಾಗ್ಯಾದಿ ಗುಣೇನ ಪಾವನತನುಂ ವಂದೇಥ ವಿದ್ಯಾನಿಧಿಂ ॥
ಸೇವೇ ಹೇ ರಘುನಾಥತೀರ್ಥಯತಿಪಂ ಶಾಂತಂ ಸುಶೀಲಂ ಸದಾ ।
ವಂದೇಹಂ ರಘುವರ್ಯತೀರ್ಥಯತಿಪಂ ವಂದೇ ರಘೂತ್ತಮಂ ॥
ಮಧ್ವಪ್ರಭೃತಿರಘೂತ್ತಮ ಪರ್ಯಂತಂ ತೌಳವ ಪರಂಪರಾಜ್ಞೇಯಾ ।
ವಂದೇಹಂ ವಿನಯೇನ ಪಾವನ ತನುಂ ನಾರಾಯಣಾಖ್ಯಂ ಯತಿಂ ।
ವೈರಾಗ್ಯಾದಿ ಗುಣೇನ ಶೋಭನಮತಿಂ ಜೀವೋತ್ತಮಾಖ್ಯಂ ಮುನಿಂ ।
ವಂದೇಹಂ ಯತಿವರ್ಯಲಾಲಿತಮತಿಂ ಜೀವೋತ್ತಮಾಖ್ಯಂ ಮುನಿಂ ।
ಸೇವೇಹಂ ವಿಭುಧೇಶ ತೀರ್ಥ ವರದಂ ಶ್ರೀರಾಮಚಂದ್ರಂ ಮುನಿಂ ।
ವೈರಾಗ್ಯಾದಿಗುಣ್ಯೈಶ್ಚ ಭಾವಿತಮತಿಂ ಶ್ರೀ ದಿಗ್ವಿಜಯೀಂದ್ರಂ ಯತಿಂ ।
ವಂದೇಹಂ ರಘುಚಂದ್ರತೀರ್ಥ ಮುನಿಷಂ ಶಾಂತಂ ಸುಶೀಲಂ ಧಿಯಂ ।
ಶ್ರೀ ಲಕ್ಷ್ಮೀಯುತ ಬಾದರಾಯಣ ಮುನಿಂ ಸೇವೇಸ್ವಮುಕ್ತ್ಯೈ ಗುರುಂ ।
ವೈರಾಗ್ಯಾದಿಗುಣ್ಯೈಶ್ಚ ಕಾರ್ಶ್ಯವಪುಷಂ ಶ್ರೀ ವಿಠಲಾರಾಧಕಂ ॥
ನಾರಾಯಣ ಮುನಿ ಪ್ರಭೃತಿ ಕೋಂಕಣ ಪರಂಪರೀತಿ – ಜ್ಞೇಯಂ ।
ಇತಿ ಯತಿ ಪರಂಪರಾ
ಅಥ ಕುಂಭಕೋಣ ಮಠಸ್ಥಾನಾಂ ತಿಥಿಕ್ರಮಃ
ಸುರೇಂದ್ರಾಖ್ಯ ಮುನೀಂದ್ರಸ್ಯ ಜ್ಯೇಷ್ಠಾಕೃಷ್ಣಾ ಚತುರ್ಥಿಕಾ
ವಿಜಯೀಂದ್ರ ಮುನೀಂದ್ರಾಣಾಂ ಜ್ಯೇಷ್ಠೇಕೃಷ್ಣಾ ಚತುರ್ದಶೀ ॥

ಗುಡ್ಡೆ ನಿರರಕವೇ ಗಡಿ. ತೆಂಕಲು ಗುಂಡಿಬೈಲಸ್ಥಳದ ಗುಡ್ಡೆ ನಿರರಕವೇ ಗಡಿ. ಪಡುವಲು ರಯಾರಿ ಹಿತ್ತಲಿನ ನೆತ್ತಿನಲು ನಟ್ಟ ವಾಮನ ಮುದ್ರೆ ಕಲ್ಲು, ಬಡಕಲು ಗುಡ್ಡೆ ನಿರರಕವೇ ಗಡಿ. ಇಂತೀ ಚತುರ್ಗಡಿ ಸಿಮೆವಳಗಾದ ಭೂಮಿಯಲು ತೆಂಗು ಅಡಕೆ, ಗದ್ದೆ, ಹಕಲು ಸಾಹಾ ಲಾಗಾಮೆ ಮಾಡಿಕೊಂಡು ಆದ ಉತ್ಪತ್ತಿಯನ್ನು

ಾಮಚಂದ್ರ ಮಲ್ಯರ ಮುಖಾಂತರ ದೇವತಾ ಕಟ್ಟಳೆ ಕಂದಾಚಾರ ಮುಂತಾದ ಧರ್ಮಕೆ
ಾರ್ಪಿತವಾಗಿ ಬಿಟ್ಟಿವಾಗಿ ಧರ್ಮಶಾಸನ.

ಆದಿತ್ಯ ಚಂದ್ರಾವನಿಲೊನಲಶ್ಚ ದೌರ್ಭೂಮಿರಾಪೋ ಹೃದಯಂ ಯಮಶ್ಚ
ಅಹಶ್ಚ ರಾತ್ರಿಶ್ಚ ಉಭೇಚ ಸಂಧ್ಯೆ ಧರ್ಮಸ್ಯ ಜಾನಾತಿ ನರಸ್ಯ ವೃತ್ತಂ ।
ಸ್ವದತ್ತಂ ವಾ ಯೊರೆತವಸುಂದರಾ ಸ್ರಷ್ಟವರುಷ
ಸಹಸ್ರಾನಿ ವಿಷ್ಟಾಯಾಂ ಜಾಯತೆ ಕ್ರಿಮಿ ।
ಸ್ವದತ್ತಾ ದ್ವಿಗುಣಂ ಪುಣ್ಯಂ ಪರದತ್ತಾನುಪಾಲನಂ
ಪರದತ್ತಾಪಹಾರೇಣ ಸ್ವದತ್ತಂ ನಿಷ್ಫಲಂ ಭವೇತ್ ।

॥ ಶ್ರೀ ಸದಾಶಿವ ॥

............ನಮಸ್ತುಂಗ ಶಿರಶ್ಚುಂಬಿ ಚಂದ್ರಚಾಮರ ಚಾರವೆ ತ್ರೈಲೋ............ಭಾಯಶಂಭವೆ । ಸ್ವಸ್ತಿ ಶ್ರೀ ಜಿಯಾಭ್ಯುದಯ ಶಾಲಿವಾಹನ ಶಕ ವರುಷ 1595ನೆಯ ಪರಿಧಾಪಿ ಸಂವತ್ಸರದ ಆಷಾಢ ಬ 5ಲ್ಲು ಶ್ರೀಮನ್ಮಹಾಪ್ರ (ಭುಜಿಳಗಿ ಘಂಟೆವಡೆರ) ಪೌತ್ರರಾದ ಶಿವಪ್ಪನಾಯಕರ ಪುತ್ರರಾದ ಶಿವಪ್ಪನಾಯಕರು ವೆರಣೆಗ್ರಾಮದ (ಕೌಶಿಕಗೋತ್ರದ) .......ಅಶ್ವಲಾಯನ ಸೂತ್ರದ ಋಕ್ ಶಾಖೆಯ ಗಣಪತಿ ಮಲೆರ ಪೌತ್ರರಾದ ವಿಠಲಮಲೆರ ಪುತ್ರರಾದ ನಾರಾಯಣಮಲೆರಿಗೆ – ಸಹಿರಣ್ಯೋದಕ ದಾನಧಾರಾಪೂರ್ವಕವಾಗಿ ಧಾರೆಸೆರೆದು ಕೊಟ್ಟದ ............ಮನೆಂತೆಂದರೆ ನಿಮಗೆ ಧರ್ಮಸ್ವವಾಗಿ ಬಿಟ್ಟುಕೊಟ್ಟುದು ಗ 200ಕ್ಕೆ ಸ್ಥಳದ ವಿವರ

.............ಸಿಮೆಯ ಕುಡುಗುಂದದ ಗ್ರಾಮದ .ಒಳಗೆ ಬಸರಿಕಡುಪಿನಲ್ಲಿ ಹೆಂಮಗಾರತಿ.............ನಿಂದಲೂ । ತೆತ್ತು ಬಾಹಾದು ಬಸರಿಕಡುಪಿನಿಂದಲು ಗ 22ನೆಲಿಸಬ.............ಣಕಲು ಮೊರಡು ಗ5 ಆಂಉತು 32 ಗಣಪರ ಸ್ವಿನ ಪಾಲು.............ಮಗನಿಂದಲೂ। ಗ6 ಹ3 ಯವದ ಬಳಿಲು ಗ3 ತುಕಬಡಿ 2॥ ಅಂತು ಗ11 ॥ .............ಗ 5॥2 ಹೆಂಮುಗಾರ ವಿಠಪನಿಂದಲೂ ಕು..... ....ನಿಸೂರ್ಯೆನಪಾಲುಗಡಿಗೂಡಿ.............ರ ಸಂಕ್ಯೆನಿಂದಲೂ । ಕೆಳಗಣ ಕೊರಸಿ ಮೆಲಣಕೊರಸಿ.........ಗ 1॥2॥ ಅಂತಳಿ ಗ 22 ಹ 2॥ ಕೊ .............ಯಿಂದ। ಹೆಂಮಗಾರ ವಿಠಪನಿಂದಲು ಗ 17 ಆಸಂಕಣನಿಂದ। ಕಉಲು ಮಟ್ಟನ ಸತಿ ಗ3 .............ಯಾಳಿಕೆ ಗ 3 ಅಂತು ಗ 23 ಸ್ವಾಮಿದೆವನಸ್ವಾಸ್ತಿ ನಂದಿಸವಲಕಾಶಿಯಿಂದಲು

ಗ12 ಅಂತು.............ಗ2 ॥ ಸತ್ಯಭಟ ಹೊಂನೆಹಳಿ ಸ್ವಾಮಿಗಳ ಹದಿಕೆಗ।
ಹ...........ಉಗ॥.॥..........ರಾಮಯ್ಯದೇವರ ಹರಿಗೆ ಗ 1ಕ್ಕೆ ............ಉಭಯ
ಗ2॥2॥ = ಉಭಯಂಗ 29 ಹ ಮಿಟಿಸಿಯಿಂದ ಊಡಿನ ದೆರುಹೊರಗಾಗಿನಲು:
ಸಿ ದಾಯ.............ಉಪಾತ್ರಬರಾಡ ಸಹಾ ಸಲುವರೆಖೆಗೆ 45॥ ಕಟು ಗುತ್ತಿಗೆ
15 ಹ 2॥ ಆಬಿರಾಡ.............ವರ್ತನೆಗೆ 1॥1ಮರದೆರುಗ ॥ ಅಂತು ರೆಖೆಗೆ 6
ಹ3॥ ರಾಮಯದೆವರು.............॥1 – ಉಭಯಂಗ 65 ॥4॥ ಉಭಯಂಗ 15
ಹ7 ಕಶಿಕೆಕಾಶಿಯಿಂದ.............ಗ 32 ಹ 3॥ ಕೆ ಪ್ರಾಕು ಧರ್ಮಸ್ವಲು ತ್ತಾರ
2 ನುಳಿದು ಶುಧರೆಖೆಗೆ 30 ಹ 3॥ ವಿ.............ಬಂದದು ವರದಪನ ಶಂಭೂಪಾಲುರೆಖೆ
। 10 ದೆವಣನ ದೆವಪನ ಪಾಲುರೆಖೆಗೆ 5ಹ2॥.............ನಿಂದಲು ಗ9 ॥4। =
ಸಂಕಣನ ದೆವಣನಿಂದ ಬಂದರೆಖೆಗೆ 7 ॥1 ಹೊಂನೆಕೈಶಂಕರನಾ .............ದರೆಖ
ಗ 1 ॥3 ಆ ಶಂಕರಭಟನಿಂದ ನಿಡಾರಿ ಮಹಾಬಲನ ಪಾಲು ರೆಖೆಗ 1॥2॥ ತೊರಮೆಕ
.............ಧನವೇದಂಗಾನಪಾಲು ಹ 3॥ ಅಂತು ವಿಂಗಡದಿಂದ ಬಂದದು ರೆಖ
36॥2 = ಉಭಯಂ.............ವರ್ಗಉತಾರಸಂಗ್ಯೆದೆವರಿಗೆ ಹೆದಿನಿಯಿಂದಲುಗ 9
3 ॥ ವಿಂಗಡಕೆ ಹೊದು ಹೆಂಮಗಾರದನಿಗೆ.............ನನಪರಮಗೆ ಸಂಕಣನ ದೆವಣ
ಪಾಲು ಗ ॥ 1 ॥7 ಇವನಪಾಲುಗಾರಪರಮಗೆ ರೆಖೆಗೆ 23 ಹ 2॥ =.......ನೂನಿತಿಂಮಣ
6 ತೋಟದ ಕೈರಾಮಂಣಗೆ ಬೆದೆಹಾದ ಹ 1 ಅಂತುಗ ೪ಂ ಹ ।–ಉಭಯ
.....ಕರೂ ವೆರಣೆಗ್ರಾಮದ ಕೌಶಿಕ ಗೋತ್ರದ ಆಶ್ವಲಾಯನ ಸೂತ್ರದ ರುಕ್ಕಮ.....ಪತಿಮಲೆ
ಪೌತ್ರರಾದ ವಿಠಲ ಮಲೆರ ಪುತ್ರರಾದ ನಾರಾಯಣ ಮಲೆರಿಗೆಸ....ಕದಾ
ದಾರಪೂರ್ವಕವಾಗಿ ದಾರೆ ನೆರೆದು ಕೊಟ್ಟ ಭೂಸ್ವಾಸ್ತಿ ಧರ್ಮಶಾಸನ । ಇದಕ್ಕೆ........ಖ
ಆದಿತ್ಯಚಂದ್ರಾವನಿಲೋನಲಶ್ಚ ದೌರ್ಭೂಮಿರಾಪೋಹೃದಯಂ ಯಮಶ್ಚ । ಅಹ
ರಾತ್ರಿಶ್ಚ ಉಭೇಚ ಸಂಧ್ಯೆ ಧರ್ಮಸ್ಯ ಜಾನಾತಿ ನರಸ್ಯ ರೂಪಂ। ದಾನ ಪಾಲನಯೋರ್ಮಧ
ದಾನಾಚ್ಛ್ರೇಯೋನುಪಾಲನಂ । ದಾನಾತ್ಸ್ವರ್ಗಮವಾಪ್ನೋತಿ ಪಾಲನಾದಚ್ಯುತಂ ಪದಂ
॥ ಶ್ರೀ ಸದಾ॥....

ಈ ಶಾಸನವು 13 1/2 ಇಂಚ ಅಗಲ 20 ಇಂಚ ಉದ್ದದ ತಾಂಬ್ರ
ತಗಡಿನಲ್ಲಿ ಕೆತ್ತಿದ್ದು. ಮನೆ ಸುಡುವಾಗ್ಯೆ ಇದು ಸುಟ್ಟು ಹೋಗಿ ಅಗಲದಲ್ಲಿ ಕೆಲ

ಕಡೆಯಲ್ಲಿ 8 ಇಂಚ ಲಾಗಾಯ್ತು 10 ಇಂಚ ವರೇಗೆ ಉಳಿದಿದೆ. ಬುಡದಲ್ಲಿ 3 ಇಂಚ ಮಟ್ಟಿಗೆ ಸಾಬೂತು ಉಂಟು. ಸುಟ್ಟು ಹೋದ ಅಂಶ ಬಿಟ್ಟು ಉಳಿದಷ್ಟರ ಯಥಾನಕ್ಲು ತಗೆದು ಅಸ್ಲು ಶಾಸನ ಹೊನ್ನಾವರದಲ್ಲಿರುವ ಪಾಂಡುರಂಗ ಮಲ್ಯರ ಮಗ ಆತ್ಮಾರಾಮ ಮಲ್ಯರಿಗೆ ಕಳುಹಿಸಿಕೊಟ್ಟಿದೆ – ಅವರ ಸ್ವಾಧೀನ ಇರುವ ಇನ್ನೆರಡು ಶಾಸನಗಳ ನಕ್ಲುಗಳು ಕೆಳಗೆ ಬರೆದದೆ –

ಶಿವಲಿಂಗ

ನಮಸ್ತುಂಗ ಶಿರಷ್ಚುಂಬಿ ಚಂದ್ರ ಚಾಮರ ಚಾರವೆ

ತ್ರೈಲೋಕ್ಯ ನಗರರಾಂಭಮೂಲಸ್ತಂಭಾಯ ಶಂಭವೇ

ಸ್ವಸ್ತಿ ಶ್ರೀ ಜಯಾಭ್ಯುದಯ ಶಾಲಿವಾಹನ ಶಕವರುಷ 1583ನೆಯ ಶಾರ್ವರಿ ಸಂವತ್ಸರದ ಆಶ್ವಿಜ ಶು 15ಲು ಶ್ರೀ ಮತ್ಸಜ್ಜರುಧಶಿವಾಚಾರ ಸಂಪನ್ನದ್ಯಾವಾ ಪಥ್ವಿಮಹಾಮಹತ್ತಿಗೊಳಗಾದ ಶಿರಾಲಿತಾರಿ ಬಳಿಯ ಹೊಸೂರ ಗ್ರಾಮದ ನಿರಗೊಂದಸ್ಥಳದಲು ಪಿಠಲ ಮಲ್ಲೆನು ಕಟಿಸ್ತ ವಿರಕ್ತ ಮಠ ಧರ್ಮಕ್ಕೆ ಶ್ರೀ ಮದ್ದೆಡವ ಮುರಾರಿ ಕೊಟಿ ಕೊಳಾಹಲ ಪಿಸುಧ ವೈದಿಕಾದ್ವೈ ಸಿದ್ಧಾಂತ ಪ್ರತಿಷ್ಠಾಪಕ ಶಿವಗುರುಭಕ್ತಿ ಪರಾಯಣರಾದ ಕೆಳದಿ ಸದಾಶಿವ ನಾಯಕರ ಪೌತ್ರರು, ಸಂಕಣನಾಯಕರ ಸಿದ್ಧಪ್ಪನಾಯಕರ ವೆಂಕಟಪ್ಪ ನಾಯಕರು ಕೊಟ್ಟ ಧರ್ಮತಾಂಮ್ರ ಶಾಸನದ ಕ್ರಮವೆಂತೆಂದರೆ – ಪ್ರಾಕುಉತಾರವಾಗಿ ನಡೆದುಬರುತ್ತಿದ್ದ ಸ್ವಾಸ್ತಿ ಶಿರಾಲಿ ಸಿಮೆ. ಹೊಸೂರುಗ್ರಾಮದ ನಿರಗೊಂಡ ಸ್ಥಳದಿಂದ ರೆಖೆ ಅಕ್ಕಿ ಮುಡಿ 24 ಹ 16ಕ್ಕೆ

(ಹಿಂಬದಿಯಲ್ಲಿ)

ಮು 1ಕ್ಕೆ ಹ 4ಲುಗ॥2॥ ಕೊಟೆ ಬರಾಡ ಹ2 ॥. ಉಭಯಂಗ 10 ಹತ್ತು ವರಹಾನ ಭೂಮಿಯನು ಶಿವಾರ್ಪಿತವಾಗಿ ಬಿಟ್ಟೆವಾಗಿ – ಈ ಭುಮಿಗೆ ಸಲುವ ಸರ್ವಸಾಮ್ಯವನು ಪೂರ್ವ ಮರಿಯಾದೆಯಲ್ಲಿ ಆಗು ಮಾಡಿಕೊಂಡು ಮಾರ್ಗದಲ್ಲಿ ಹೋಗಿ ಬಾಹಾ ಶಿವಭಕ್ತರಿಗೆ ನಿಡಿ ಮಾಡಿ ಧರ್ಮವ ನಡಸಿಕೊಂಡು ಮಹತ್ತು ಪರಂಪರೆಯಾಗಿ ಆಚಂದ್ರಾರ್ಕಸ್ಥಾಯಿಗಳಾಗಿ ಅನುಭವಿಸಿಬಹಿರಿಯೆಂದು ಕೊಟ್ಟ ಧರ್ಮಶಾಸನ । ಇದಕ್ಕೆ ಸಾಕ್ಷಿ –·

ಆದಿತ್ಯಚಂದ್ರಾವನಿಲೋನಲಶ್ಚ ದ್ಯರಭೂಮಿರಾಪೋ ಹೃದಯಂ ಯಮಶ್ಚ ।

ಅಹಶ್ಚರಾತ್ರಿಶ್ಚ ಉಭೇಚ ಸಂಧ್ಯೆ ಧರ್ಮಸ್ಯ ಜಾನಾತಿ ನರಸ್ಯವೃತ್ತಂ ॥

ದಾನಪಾಲನಯೋರ್ಮಧ್ಯೇ ದಾನಾಚ್ಛ್ರೇಯೋನುಪಾಲನಂ ।

ದಾನಾತ್ಸ್ವರ್ಗಮವಾಪ್ನೋತಿ ಪಾಲಾದಚ್ಯುತಂ ಪದಂ ॥ ಶ್ರೀ ವೆಂಕಟಾದ್ರಿ॥

ಈ ಶಾಸನವು ಉದ್ದ ೮ ಇಂಚ ಅಗಲ ೭ ಇಂಚ ತಾಂಬ್ರದ ತಗಡಿನಲ್ಲಿ ಉಂಟು –

ನಮಸ್ತುಂಗ ಶಿರಶ್ಚುಂಬಿ ಚಂದ್ರ ಚಾಮರ ಚಾರವೆ

ತ್ರೈಲೋಕ್ಯ ನಗರಾರಂಭ ಮೂಲಸ್ತಂಭಾಯ ಶಂಭವೇ

ಸ್ವಸ್ತಿ ಶ್ರೀ ಜಯಾಭ್ಯುದಯ ಶಾಲಿವಾಹನ ಶಕ ವರುಶ ೧೫೫೧ನೆಯ ಕೀಲಕ ಸಂವತ್ಸರದ ಶ್ರಾವಣ ಶು ೧೫ ಲು ಶ್ರೀಮನ್ಮಹಾಪ್ರಭು ಬಿಳಗಿ ಘಂಟೆ ವಡೆರ ಪುತ್ರರಾದ ಶಿವಪ್ಪನಾಯಕರ ಪುತ್ರರಾದ ಶಿವಪ್ಪನಾಯಕರೂ ಕೌಶಿಕಗೋತ್ರದ ಆಶ್ವಲಾಯನಸೂತ್ರದ ರುಕು ಶಾಖೆಯ ಗಣಪತಿ ಮಲ್ಲೆರ ಪುತ್ರರೂ ವಿಟಿಲ ಮಲ್ಲೆರ ಪುತ್ರರಾದ ನಾರಣಪ್ಪಮಲ್ಲೆರಿಗೆ ಕೊಟ್ಟ ಕುಳಕ್ರಯಧರ್ಮಸಾಧನದ ಕ್ರಮವೆಂತೆಂದರೆ ನೀವುಗೋಕರ್ಣದ ಮಹಾಬಲೇಶ್ವರ ಸ್ವಾಮಿಯ ಸನ್ನಿಧಾನದಲ್ಲಿ ಸತ್ರ ನಡೆಸುವ ಧರ್ಮಕ್ಕೆ ಸ್ವಾಸ್ತಿ ಆಗಬೇಕೆಂದು ಕುಳಕ್ರಯವು ಗ ೧೮೦ ನೂರ ಎಂಬತ್ತು ಕೊಟ್ಟು ಹೇಳಿಕೊಂಡ ಸಂಮಂದಾ ಚಿಕ್ಕಮಾಳಿಗೆ ನಾಡಿಗೆ ಸಲುವ ಹಿರಿಯಿಕ್ಕಳಿ ಸೀಮೆವಳಿಗೆ ಹಿರಿ ಕೂಡ ಗ್ರಾಮದ ಗ್ರಾಮದಲಿ ಗುಬೆ ಪರಮಾನೂ ಆಳಿ ಬರುತಿದ ಭೂಮಿ ಒಳಗೆ ಸಲುವ ರೆಖೆ ವಿವರ ಪರಮನಪಾಲು ಗ ೨ ಹ ೧ ಗೋಪಾಲನ ಉಂಬುಳಿ ಪಾಲುಗ ೪ ಉಭಯಂಗ ೬ ಹನ ಸೂರೆ ನಾರಾಯಣನ ವಳಥೆರು ಹ ೨॥ ಹುಡಿಲ ಬಯಲಕರಿತುಣಪಾಲು ಹಂದಿಗೂಡು ಗ ೫॥ ಕಲುಸಲೆಗಣ ಪನಪಾಲುಗನ ಹ ೧॥ ಸಾರಂಗ ವಿಶ್ವೆಶ್ವರ ಭಟ್ಟನ ಗೆಣೆಸಭಟ್ಟನಪಾಲುಗ ೧॥೦।ಅಂತುಗ ೧೪॥ ಸತ್ಯಭಟ್ಟ ಹೊಂನೆ ಹಳಿಸ್ವಾಮಿಗಳ ಹಡಿಕೆ ಹ॥। = ರಾಮೈದೆ ವರ ಹಡಿಕೆ ಹ ೩॥ ಅಂತುಗ ೧೫ ಕಂದಾಯದ ಬಡುವಟ್ಟಿಲ ಸವರಿ ಚಿಲುವ ಪ್ಪಸಹಗ ೩ ಉಭಯಂಗ ೧೮ ಹದಿನೆಂಟು ವರಹಾನು ಅಪರಮಸಲಳುವ ಆಳಿಕೆ ಪುಮಾಣಿನ ಭೂಮಿಗೆ ಚತುರ್ಗಡಿಗೆ ಹಾಕಿದ ವಾಮನ ಮುದ್ರೆ

(ಹಿಂಬದಿಯಲ್ಲಿ)

ಕಲಿಂದವಳಗಾದ ಕೂಟ ತೊಟಿಸ್ತಳದೆಬೆದಲು ಮಕಿಹಕಲು ಬೆಟು ಚಿಟೆಕಾನುಕಾ ಡರಂಭ ಮನೆ ಮನೆವಾಣ ಅಂಗೂಡು ಅಂಗ ಫಲ ನಿರುದಾರಿ ನಿಧಿ ನಿಕ್ಷೇಪ ಜಲ ಪಾಷಾಣ ಅಕ್ಷಿಣೆ ಅಗಾಮಿ ಸಿಧಸಾದ್ಯ ನವಕ್ರುತ ಕಿರುಕುಳಸುವ ರ್ಣದಾಯ ಮುಂತಾದ ಅಷ್ಟಭೊಗಕೆ ಜೊಪಾರ್ಜನ ಉಳಭೂಮಿ ಮನೆಗಳನೂ ಪೂರ್ವಮರಿ ಯಾದೆಯಲಿ ಆಗ ಮಾಡಿಕೊಂಡು ಆ ಮೂಲಿಕಯ ಗ೧೮ ಹದಿನೆಂಟು ವರಹಾನು ಕಾಲಕಾಲಂ ಪ್ರತಿಯಲಿ ತೆಗೆದುಕೊಂಡು ಸತ್ರ ಧರ್ಮವ ನಡಸಿಕೊಂಡು ಬಹಿರಿ. ಆ ಮೂಲದ

ನಕಲು ತೆರುಮಾರು ತೆರಲಾರದೆ ನಿಲಬಲವಮಾಡಿ ಭೂಮಿ ಗೈಸದೆಯಿದರೆ ನಿಂಮ ಉಭಾನುಕೂಲನಾದ ವಕಲ ಹಾಕಿಕೊಂಡು ಭೂಮಿಗೈಸಿ ರೂಪ ಮಾಡಿಕೊಂಡು

ನೆತ್ರಾಕಳದಲು ಹೂಜಿಗದೆ ಮು ೧।೦ ಹೊಳೆಸಾಲು ಕೊಡಗ ೭ರ....... ಅವಳ ಅಂಚಿನ ಕೊಡಗೆ ೨ರ ಮು ॥ ಕಟ್ಟಿನ ಮುಂದೊತ್ತಿನ ಕೊಡಗೆ ೧ರ ಮು ॥ ಗುಳುಮೆಯಾ ತೆರುಬಹಾ ರೀತಿ ಮಾಡಿಕೊಂಡು ನಿಂಮಸಂತಾನ ಪಾರಂಪರೆಯಾಗಿ ಆಚಂದ್ರಾರ್ಕಸ್ಥಳಗಳ ಸುಖದಿಂದ ಅನುಭವಿಸಿ ಬಹಿರಿಯೆಂದು ಕೂಟ ಕುಳತ್ರಯ ಧರ್ಮಶಾಸನ । ಇದಕೆ. ಲೂಕ ಸಾಕ್ಷಿಗಳು

ಆದಿತ್ಯಚಂದ್ರಾವನಿಲೋನಲಶ್ಚ ದೌರ್ಭೂಮಿರಾಪೋಹೃದಯಂ ಯಮಶ್ಚ ।ಅಹಶ್ಚ ರಾತ್ರಿಶ್ಚ ಉಭೇಚ ಸಂಧ್ಯೆ ಧರ್ಮಸ್ಯ ಜಾನಾತಿ ನರಸ್ಯ ರೂಪಂ। ದಾನ ಪಾಲನಯೋರ್ಮಧ್ಯೆ ದಾನಾಚ್ಚ್ರೇಯೋನುಪಾಲನಂ । ದಾನಾತ್ಸ್ವರ್ಗಮವಾಪ್ನೋತಿ ಪಾಲನಾದಚ್ಯುತಂ ಪದಂ ॥ ಶ್ರೀ ಸದಾಶಿವ ॥

ಈ ಶಾಸನವು ೯ ಇಂಚ ಉದ್ದ ೮೧/೨ ಇಂಚ ಅಗಲದ ತಾಮ್ರದ ತಗಡಿನಲ್ಲಿ ಉಂಟು.

## 18. ಭಟ್ಕಳದಲ್ಲಿರುವ ಶಿಲಾಶಾಸನ

ಭಟ್ಕಳ ತಿರುಮಲದೇವಸ್ಥಾನದಲ್ಲಿರುವ ಶಿಲಾಶಾಸನದ ನಕ್ಲು

ಸ್ವಸ್ತಿ ಶ್ರೀ ವೀರವಂಕಟೇಶಾಯನಮಃ ಮದ್ವಗುರುಭ್ಯೋನಮಃ ।

ನಮಸ್ತುಂಗ ಶಿರಶ್ಚುಂಬಿ ಚಂದ್ರಚಾಮರ ಚಾರವೇ

ತ್ರೈಲೋಕ್ಯ ನಗರಾರಂಭ ಮೂಲಸ್ತಂಭಾಯ ಶಂಭವೇ

ಪಾಯಣ್ಯ ಕಾಲದಶ್ಯಮಾಗಾಂಗ ಜೋಶಶ ತತ್ತನಾ ತ್ರೈಲೋಕ್ಯ ಮಂಟಪಸಂಬಾ ಚಶ್ಯಾಣ ಹರಿಬಾದಾನಾ – ಶ್ರೀ ಮನ್ಮಹಾರಾಜಾಧಿರಾಜ ರಾಜಪರಮೇಶ್ವರ ಶ್ರೀ ವಿರುಪರಾಸ್ತ್ಯ ಶ್ರೀ ವೀರಸದಾಶಿವರಾಯ ಮಹಾರಾಯರ ವಿಜಯ ಸಾಮ್ರಾಜ್ಯದುದಯ ಕಾಲದಲು ಶ್ರೀ ಮನ್ಮಹಾಮಂಡಲೇಶ್ವರರು ಭೈರಾದೇವಿ ಅಮ್ಮನವರ ವರಕುಮಾರಿಯರು ಶ್ರೀ ಮನ್ಮಹಾಮಂಡಲೇಶ್ವರರು ಚಂನ ಭೈರಾದೇವಿ ಅಮ್ಮನವರು, ಸಂಗೀತಪುರ ವರಾಧಿಷ್ಠಿತರಾಗಿ ಹಾಡುವಳಿ ಭಟಕಳ ಮುಂತಾದ ರಾಜ್ಯವನ್ನು ಸಧರ್ಮಸುಖಸತ್ಕಥಾ ವಿನೋದದಿಂ ಪ್ರತಿಪಾಲಿಸುತಲಿದ್ದಂದಿನ ಶಾಲಿವಾಹನ ಶಕವರುಶ 1478ನೇ ರಾಕ್ಷಸ ಸಂವತ್ಸರದ ಆಶಾಡ ಶುದ ೨ನಲ್ಲು ಶ್ರೀಮತ್ ಗೋವೆ ರಾಜ್ಯದ ದಕ್ಷಿಣಾದಿಶಾಭಾಗದಲ್ಲಿ ಸಾಸಷ್ಟಿದೇಶಕ್ಕೆ ಮುಖ್ಯರಾದ ಅಷ್ಟಗ್ರಾಮದೊಳಗುಳ್ಳ ಅಗ್ರಹಾರದ ಲೊಟವಡಿಯಗ್ರಾಮದ ಭಾರ್ಗವ ಚವನಾಪ್ಲವನವರು ಜಾಮದಗ್ನಿ ವತ್ಸ ಗೋತ್ರದಲ್ಲಿ ಉತಪನನಾದ ಭಟಕಳದಲ್ಲಿಹ ಚಿಂನವರದ ಹಿರಿಯ ಸಾತ್ವನಾಯಕರ ಮಗ ಸಾಂತಪನಾಯಕನು ಮೂಡಭಟಕಳದಲ್ಲಿ ಕಟ್ಟಿಸಿದ ತಿರುವೆಂಕಟೇಶನ ಸನ್ನಿಧಿಯಲ್ಲಿ ಆಚಂದ್ರಾರ್ಕವಾಗಿ ನಡೆವ ಅಂಗರಂಗನೆಯಿವೆದ್ಯ ಅನದ್ಸತ್ರ ಮುಂತಾದಧರ್ಮಕ್ಕೆ ಚನ್ನಭೈರಾದೇವಿ ಅಮ್ಮನವರ ಕಯಲು ಮೂಡ ಭಟಕಳದ ಬಯಲೊಳಗೆ (ಇದ್ರ ಕೆಳಗೆ ಇರುವ ಸ್ಥಳಗಳ ವಿವರ ವಗ್ಯೆರೆ ಬರಕೊಳ್ಳಲಿಲ್ಲ–)

ಭಟ್ಕಳ ರಘುನಾಥ ದೇವಸ್ಥಾನದ ಹೆಬ್ಬಾಗಿಲು ನಡೆಯ ಉತ್ತರ ಬದಿಚಾವಡಿಯ ಮೇಲೆ ಸದ್ರಿ ನಡೆಯ ಬದಿಯಲ್ಲಿರುವ ಶಿಲಾಖಂಬದ ದಕ್ಷಿಣಬದಿಯಲ್ಲಿರುವ ಲೇಖ–

ಶ್ರೀ ಶುಭಮಸ್ತು ಶಕವರುಷ ೧೫೧೨ನೆಯ ವಿರೋಧಿ ಸಂವತ್ಸರದ ಜೇಷ್ಠ ಶು ೧೦ಲು ಅಂತ ಕೆಣಿಯವರ ಮಕ್ಕಳು ನಯೆಕೆಣಿ ವಿಠನ ಕೆಣಿಯವರ ಮಕ್ಕಳು ಬಾಳಕೆಣಿ ಅಂತಕೆಣಿಯವರು ಕಟ್ಟಿಸಿದ ರಘುನಾಥ ದೇವರು ದೇವಸ್ಥಾನಕ್ಕೆ ಶುಭಮಸ್ತು ಈ ದೇವರಿಗೆ ಉತ್ತಾರವಾದ ಭೂಮಿ ವಿವರ–

॥. ೧॥ ಕ್ರೋಧನ ಸಂವತ್ಸರದಲ್ಲು ಜನ್ನದ ವರ್ತನೆಯಿಂದ ಗ ೧೦ಕೆ। ಸರ್ವಜಿತು ಸಂವತ್ಸರದಲ್ಲು ಕೂಡಿದ್ದು ಗ ೫ ಶು । ೧೫ ಮಣೆಗಾರ ಕೆರಿ ಹಲ್ಲರ ವರ್ತನೆ

(ಪುಟ ಸ್ಪಷ್ಟ ಇಲ್ಲ)

ತೊಂಭತ್ತು ವರಹನ್ನು ಥರಣವು ಬೆಳೆ ಗ್ರಾಮವನ್ನು ಶಿವಾರ್ಪಿತವಾಗಿ ಬಿಟ್ಟೆವಾಗಿ ಈ ಗ್ರಾಮಕೆ ನೆಟ್ಟ ವಾಮನ ಮುದ್ರೆ ಕಲ್ಲಿನೊಳಗುಳ್ಳ ನಿಧಿ ನಿಕ್ಷೇಪ ಜಲ ಪಾಷಾಣ ಅಕ್ಷಿಣಿ ಆಗಾಮಿಸಿದ ಸಾಧ್ಯಗಳೆಂಬ ಅಷ್ಟಭೋಗ ತೇಜ ಸ್ವಾಮಮನ್ನು ಪೂರ್ವ ಮರ್ಯಾದೆಯಲು ಆಗು ಮಾಡಿಕೊಂಡು ದೇವತಾವಚ್ಚ ಕಂದಾಚಾರ – ಮುಂತಾದ ಧರ್ಮ ನಡಸ್ಕೊಂಡು ಬಹುದೆಂದು ಕೊಟ್ಟ ಧರ್ಮಶಾಸನ

ಆದಿತ್ಯಚಂದ್ರಾವನಿಲೋನಲಶ್ಚ ದ್ಯರಭೂಮಿರಾಪೋ ಹೃದಯಂ ಯಮಶ್ಚ ।
ಅಹಶ್ಚರಾತ್ರಿಶ್ಚ ಉಭೇಚ ಸಂಧ್ಯೆ ಧರ್ಮಸ್ಯ ಜಾನಾತಿ ನರಸ್ಯವೃತ್ತಂ ॥
ದಾನಪಾಲನಯೋರ್ಮಧ್ಯೇ ದಾನಾಚ್ಛ್ರೇಯೋನುಪಾಲನಂ ।
ದಾನಾತ್ಸ್ವರ್ಗಮವಾಪ್ನೋತಿ ಪಾಲಾದಚ್ಚುತಂ ಪದಂ ॥
ಶ್ರೀ ಸದಾಶಿವ ॥

# 19. ವೆಂಕಟಾಪುರ ಶಿಲಾಶಾಸನ

ಶ್ರೀ ನಮಸ್ತುಂಗ ಶಿರಶ್ಚುಂಬಿ ಚಂದ್ರಚಾಮರ ಚಾರವೇ
ತ್ರೈಲೋಕ್ಯ ನಗರಾರಂಭ ಮೂಲಸ್ತಂಭಾಯ ಶಂಭವೇ ।

ಹರೇಲ್ರೀಲಾವರ ಹರ್ಶ ದ್ರೌಷ್ಟ್ಯಾದಂದ ಸುಪಾತುವತಿಹೆವಾದ್ರಿ ಕಲ್ಲಿಶೊಯತ್ರದಾತ್ರಿದತ್ರ ಶ್ರಿಯಂದಧಾ।

ಜಯಾಭ್ಯುದಯ ಶಾಲಿವಾಹನ ಶಕವರುಷ 1583ನೆಯ ಶಾರ್ವರಿ ಸಂವತ್ಸರದ ಆಶ್ವಿಜ ಶು 15ನೇ ಸೋಮವಾರ ಸೋಮೋಪರಾಗ ಪುಣ್ಯಕಾಲದಲು ಶ್ರೀಮತು ಶಿರಾಲಿತಾರಿ ಬಳೆಯ ಭಟ್ಟಕಳದ ಸೀಮೆವಳಗಣ ದೊಣದೆರೆ ಗ್ರಾಮದಲ್ಲಿ ಗಣಪತಿ ಮಲ್ಲೆನು ಪ್ರತಿಷ್ಟೆ ಮಾಡಿದ ವೆಂಕಟೇಶ್ವರ ದೇವರ ದೇವತಾ ವೆಚ್ಚ ಸತ್ರದ ಧರ್ಮ, ಧರ್ಮತಾರಿ ದಾಟಿಸುವ ಬಗ್ಯೆ ಸಾಹಾ ಶ್ರೀಮೆದ್ದೆಠವ ಮುರಾರಿ ಕೊಟಿಕೊಳಾಹಳ ವಿಶುದ್ಧ ವೈದಿಕಾದ್ವೈತ ಸಿದ್ಧಾಂತ ಪ್ರತಿಷ್ಠಾಪಕ ಶಿವಗುರು ಭಕ್ತಿ ಪರಾಯಣರಾದ ಕೆಳದಿ ಸದಾಶಿವ ನಾಯಕರ ಪ್ರಪೌತ್ರರೂ ಸಂಕಣ್ಣ ನಾಯಕರ ಪೌತ್ರರು ಸಿದ್ದಪ್ಪ ನಾಯಕರ ಪುತ್ರರಾದ ವೆಂಕಟಪ್ಪನಾಯಕರು ಕೊಟ್ಟ ಧರ್ಮ ಶಿಲಾಶಾಸನ ಕ್ರಮವೆಂತೆಂದರೆ ಪ್ರಾಕು ಉತ್ತಾರವಾಗಿ ನಡೆದು ಬರುತ್ತಿದ್ದ ಸ್ವಾಸ್ತಿ ಭಟ್ಟ ಕಳೆದ ಸೀಮೆ ಬಳಗಣ ಕುಕನಿರಗ್ರಾಮದಿಂದ ವಿಂಗಡ ಗತ ನಷ್ಟ ಕಳೆದು ನಿಂತ ರೇಖೆ ತೆಂಗಿನಮರ ಗೇಣಿಯಿಂದ ಗ 1412 ಉಪ್ಪಿನಾದರದಿಂದ ಗ ೨ ಗದ್ದೆಯಿಂದ ಅಃಕ್ಕಿಮುಡಿ1ಕ್ಕೆ ಗ॥ ಲ್ಲು ಸಲುವುದು ಗ ೨೧॥೨॥ ಮನೆ ಹಣ ೧ಕ್ಕೆ ಹೊಲನಕಹಾ ೯೧॥=  ಅಂತೂಗ ೩೮॥೨। ಕೆ ಸಲುವ ಚತುಃಸೀಮೆಯ ಗಡಿ ವಿವರ.

ಮೂಡಲು ಶಿರಾಲಿ ತಾರಿ ಹೊಳೆಯ ಗಡಿ. ತೆಂಕಲು ಈ ಗ್ರಾಮದ ಭೂಮಿ ತುದಿಲು ಇದ್ದ ನಿರರತವೇ ಗಡಿ, ಪಡುವಲು ಅಂತೆ ಕಂಮತಿ ದಾನಗದ್ದೆ – ನೆತ್ತಿನಲಿ ನೆಟ್ಟ ವಾಮನಮುದ್ರೆ ಕಲೆ ಮಗಡಿ. ಬಡಗಲು ಹೆಬಳೆ ಗ್ರಾಮದ ಗದ್ದೆ– ನಿರರತವೇ ಗಡಿ. ಇಂತಿ ಚತುಃ ಶೀಮೆ ಒಳಗಾದ ಗ್ರಾಮವಂದು, ದೊಣದೊರೆ ಗ್ರಾಮದಲು ಕಾನುಬನಿಲಸ್ಥರ ವೆಂಕಟಾದ್ರಿ ಸಿನಬೊವನ ಕಳಿಯಿಂದ ಸಹಾ ಗ ॥೧। ಮುಯಿವಳೆತಂಬೂ ಭುಚೆಯಿಂದ ಗ ೬॥೩।=  ಅಂತೂಗ 467 ಹೊಸ್ತಾಗಿ ವಿಠಲ ಮಲ್ಲೆನು ಶಿರಾಲಿ ತಾರಿ ಬಳಿಯಲು ದೇವಸ್ಥಾನದ ತೊಪ್ಪಲಲು ಹಾಕಿದ ಯಾಜನಾದ್ಯಾಪನಗಳು ಮಾಡಿಸಕೂಡದೆಂದು ಆ ವಿಷಯದಲ್ಲಿ ಸರಕಾರಕ್ಕೆ ನಿಮ್ಮ ಪ್ರಾಪ್ತಿಯಿಂದಲೂ ಹೆಚ್ಚಾಗಿ ವರ್ಷವರ್ಷಕ್ಕೆ ಲಕ್ಷಾವಧಿ ದನ ಕೊಡಬೇಕೆಂದು ನಾನಾವಿಧ ನಿರ್ಬಂಧಪಡಿಸಿ ಆ

ಾಹಾ ಅಕ್ಕಿ ಗುತ್ತಿಗೆ ನಷ್ಟುಗ ೫. ೩ ಕೆ ಬಾಹುದು. ಗ ೩ ॥ ೧ ಶುಧ ಗ ೧॥೨
ಬಭಯಂಗ ೨

ಶಾಲಿವಾಹನ ಶಕ ವರ್ಷ ೧೬೫೬ನೇ ಪ್ರಮಾಥಿ ಸಂ। ರದ ಜೇಷ್ಠ ಶು
೧೫ ಸಂಗೊಳಲ್ಲು ನಾರಾಯಣ ಮಲ್ಲೆನು ಕಟಿಸ್ತ ವೆಂಕಟೇಶ್ವರ ದೇವತ ದೇವತಾ
ವೆಚ್ಚಕ್ಕೆ ಕೆಳದಿ ಸದಾಶಿವ ನಾಯಕರ ವಂಶೋದ್ಭವರಾದ ಸಂಕಣ್ಣ ನಾಯಕರ ಪ್ರಪೌತ್ರರು
ಿವಪ್ಪ ನಾಯಕರ ಪೌತ್ರರು ಶಿವಪ್ಪನಾಯಕರ ಪುತ್ರರು ಸೋಮಶೇಖರ ನಾಯ್ಕರ
ಧರ್ಮಪತ್ನಿಯರಾದ ಚೆನ್ನಮ್ಮಾಜಿಯವರು ಕೊಟ್ಟ ಧರ್ಮಸಾಧನಾ. ಇದ್ರ ಕೆಳಗೆ
ಶೇನಾಪುರದ ಗ್ರಾಮದ ಆಸ್ತಿಯ ವಿವರವುಂಟು.

ನಂದಾದೀಪ್ತಿ ಅಂನ ತುಪ್ಪ ಶನಿವಾರ ಪಂಚಾಮೃತ. ಪಂಚಪರ್ವದೊಳು
ಜಾಗಟೆ ಸಾಹಾಗ ೨೦ ಹ ೨ ಈ ದೇವಸ್ಥಾನದಲು ನಡೆವ ಸತ್ರ ಧರ್ಮಕ್ಕೆ ಗ
೨೪ ತಾರಿದಾಟಿಸುವ ಅಂಬಿಗನ ಸಂಬಳಕ್ಕೆ ಗ 6 ಅಂತೂ ಗ 502 ಐವತ್ತು ವರಹಾವನ್ನು
ಇಪ್ಪಣವಿನ ಭೂಮಿಯನ್ನು ಶಿವಾರ್ಪಿತವಾಗಿ ಬಿಟ್ಟೆವು. ಈ ಭೂಮಿಗೆ ಸಲುವ ಸರ್ವ
ಸ್ವಾಮ್ಯವನ್ನು ಮಾನಮರೆಯಾದೆಯಲ್ಲಿ ಲಾಗು ಮಾಡಿಕೊಂಡು ದೇವತ ಸೇವೆ ಸತ್ರ
ಧರ್ಮತಾರಿ ಸಹಾ ನಡೆಸಿಕೊಂಡು ಬಹಾದೆಂದು, ಕೊಟ್ಟ ಧರ್ಮ ಶಿಲಾಶಾಸನ
ಇದಕ್ಕೆ ಸಾಕ್ಷಿಗಳು.

## 20. ಕೆಳದಿ ಸಂಸ್ಥಾನದವರುಕೊಟ್ಟ ತಾಮ್ರ ಶಾಸನ

ಗಂಗೊಳ್ಳಿ ಮಲ್ಯರಮಠದ ದೇವರಿಗೆ ಕೆಳದಿ ಸಂಸ್ಥಾನದ ಚನ್ನಮಾಜಿಯವರು ಬರಶಿಕೊಟ್ಟ ತಾಮ್ರ ಶಾಸನದ ನಕ್ಲು

ನಮಸ್ತುಂಗ ಶಿರಶ್ಚುಂಬಿ ಚಂದ್ರಚಾಮರ ಚಾರವೇ

ತ್ರೈಲೋಕ್ಯ ನಗರಾರಂಭ ಮೂಲಸ್ತಂಭಾಯ ಶಂಭವೇ । ಸ್ವಸ್ತಿ ಶ್ರೀ ಜಿಯಾಭ್ಯುದಯ ಶಾಲಿವಾಹನಶಕವರುಷ 1596ನೆಯ ಪ್ರಮಾಥಿ ಸಂವತ್ಸರದ ಜೇಷ್ಠ ಶುಧ 15ಯಲ್ಲು ಮುಗುವಿನ ಶಿಮೆಗಂಗುವಳ್ಳಿ ನಾರಾಯಣ ಮಲ್ಯನು ಕಟಿಸ್ಥ ವೆಂಕಟೇಶ್ವರ ದೇವರ ದೇವತಾ ವೆಚ್ಚಕ್ಕೆ ಶ್ರೀಮದ್ದೆ ದೇವರ ಮುರಾರಿ ಕೋಟಿ ಕೋಳಾಹಲ ವಿಶುಧ ವೈದಿಕಾದ್ವೈತ ಶಿದ್ಧಾಂತ ಪ್ರತಿಷ್ಠಾಪಕ ಶಿವಭಕ್ತಿಪರಾಯಣರಾದ ಕೆಳದಿ ಸದಾಶಿವ ರಾಯ ನಾಯಕರ ವಂಶೋದ್ಭವರಾದ ಸಂತಂಣ ನಾಯಕರ ಪ್ರಪ್ರೌತರು ಶಿದ್ದಪ್ಪ ನಾಯಕರ ಪೌತ್ರರು ಶಿವಪ್ಪನಾಯಕರ ಪುತ್ರರು ಸೋಮಶೇಖರ ನಾಯಕರ ಧರ್ಮಪತ್ನಿಯರಾದ ಚನ್ನಮ್ಮಾಜಿಯವರು ಕೊಟ್ಟ ಧರ್ಮಶಾಸನದ ಕ್ರಮವೆಂತೆಂದರೆ – ಹಲಸನಾಡು ಶಿಮೆ ಸೇನಾಪುರದ ಗ್ರಾಮದಿಂದ ಪ್ರಾಕು ರೇಖೆ ಕಾಟಿ ೧೨೬॥ ಕಾಟಿ ೧ಕ್ಕೆ ಹ ೪ ಉಗ ೫೦॥ ೧ ಬಿರಾಡದಿಂದ ಗ ೧ ಕೆ ಗ ॥ ಮೂರು ಉ ಗಳಿಂದ ॥=ಉಭಯಂಗ ಗ ೧ ಹಂ॥= ಬಿಲುವಾನಾದಾಯ ಚೆಂನದವರ್ತನೆಯಿಂದ ಮು ೧ ಕೆ, ಹ ೧।=ಮಟ್ಕಿಗದ್ದೆಯಿಂದ ಬಿಜಮು ೩ ಕೆಗ ೧॥ ವರ್ತನೆಯಿಂದ। ಮಣೆಗಾರ ಕೇರಿ ಹಲ್ಲರ ವರ್ತನೆಯಿಂದ । ಮು ೮ ಹ ಗ ೪ ಹ ೪ ಬಾಗಿಲ ಮನುಷ್ಯರ ವರ್ತನೆ ಗ ೩ ಹೊನ್ನ ಬಡಿಯಿಂದ । ದುಗ್ಗಮ ಶೆಟ್ಟಿಯಿಂದ ಮು ೧ ಕೆ ಗ ॥ ಅಂತುಗ ೧೯ ಹ ೪॥ ಕೊಟಿಬಿರಾಡ ಗ ೨॥. ಅಂತುರೆಖೆ । ಗ ೧೧೩ ಹ।=ಹೆಚ್ಚಿದ ೧ ಪರಿದಾವಿಸಂವತ್ಸರದಲು ಬಿಕಣನ ಹೆಚ್ಚಿಗೆಯಿಂ । ಹೆದ್ದಾರಿ ಮಠದ । ಬಿಜಿಮು ೧॥ ಕೆ । ಗೆಣಿಮು 2 ಕೆ ಸರ್ವಜಿತ ಸಂವತ್ಸರದಲು ಹೆಚ್ಚಿದ್ದು । ಜೊಗಿಶನಭೋವನ ಹೆಚ್ಚಿಗೆ । ಕಟಿಕೆ ಕಲ್ಲಧರ್ಮದ ಭತ್ತದ ಲಾಭವು ಗ ೧. ೨೧ = ಉಭಯಂ । ಹೆಚ್ಚಿರುವ ೨೮೨।= ಉಭಯಂ ರೆಖೆ ಗ ೧೧೫ ೩॥ ಕೆ ಉತ್ತಾರ । ದೆವತಿಉತ್ತಾರ । ಯಿ ಗ್ರಾಮದ ವಿಷ್ಣುಮೂರ್ತಿ ದೆವರಿಗೆ । ಮಂಕಿ ಗದ್ದೆಯಿಂದ ಗ ೧॥ ದುಗ್ಗಪ್ಪಶೆಟ್ಟಿಯಿಂದ ಮು ೧ಕ್ಕೆ ಗ ॥ ೧ ॥. ಬಿರಾಡದಿಂದ ಗ. ॥. ॥ ಉಭಯಂಗ । ೧.೨ । ಉಭಯಂಗ ೨॥ ಹ ೨ ನಿಲಿಸಿದು ಶೆಟ್ಟಿಗಳ ಸ್ವಾಸ್ತಿಯಿಂದ । ಕೂಸಶೆಟ್ಟಿ ಸಂತಾನದವನಿಂದ ಗ ೧೪ಹ೪ ॥ ಕೆ ಹುಟ್ಟುವಳಿಗ ॥ ಅಕ್ಕಿ ಗ೧೩॥ ಶುದ್ಧ ಗ ॥ ೪ ಲು ಪ್ರಾಕು ವರಾಡಿಸಿ

ತನಲವತ್ತಿನ ಕೊಡಗ ೨ರ ಮುಡಿ ॥. ತನಿಗಾರಮು ೩॥ ಮಕ್ಕಿ ಕೊಡಗೆಮು ॥
ಹಾಪಿನಗದ್ದೆ ಕೊ ೨ ರ ಮುಡಿ ॥. ಬಿಳುರ ಬಯಲಲು ಗುರಿಗೆ ೫ ಕೊಡಗೆ
.ರ ಮು ೧॥ ಸೊಲೆಗದೆ ೧ರ ಮು ॥ ಉಭಯಂ ಕೊಡಗೆ ೭ರ ಮುಡಿ ೨।
ಮುಂಡುವಳಿ ಸಂಕದ ಬಾಲಲು ಗದೆ ೪ರ ಮುಡಿ ೪ ಚವ ನಿಯಲು ದೊಡ್ಡಗದ್ದೆ
೧ ಕೆ ಮುಡಿ ೨ ಉಪುನೀರ ಬಡಬಯಲಲು ತೆಂಗಿನ ಹಿತಲು ೧ ಈ ತಗಿನಲ್ಲು
ಅರೆಕಲುತಾರು ಹೊಳೆ ಕಂಚಿದಾ ಮಧ್ಯದಲ್ಲು ಮುಡಿ ೪ ॥.

# 21. ಬಸ್ರೂರ ಬರಹಾ

ಬಸ್ರೂರ ಶ್ರೀ ಕಾಶೀಮಠದ ಶ್ರೀ ವೆಂಕಟರಮಣದೇವರ ಪೀಠದ ಮೇಲೆ ಇರುವ ಬರಹಾ

ಭೂತ....೧೭೪೫ ಸ್ವಭಾನಾಂ ಮಾಘವೇ ಸುಧಿ ದಶಮ್ಯಾಂ...ಲಗ್ನೆ ವೆಂಕಟೇಶ ಪ್ರತಿಷ್ಠಿತ । ॥೧॥

ಪ್ರಾಸಾದೆಕಂಠರಥನಿಭಂ ಸುದೃಢಂ ನಿಧಾಯ ಸಂಸ್ಥಾಪಿತೆ । ವಸುಪುರೆ ವಿಭುದೇಂದ್ರವಯಾ.......॥೨॥

ಇದು ಜೀರ್ಣೋದ್ಧಾರ ಪ್ರತಿಷ್ಠೆ ಮಾಡಿದ ಕಾಲವಾಗಿರುತ್ತದೆ. ಇದರ ಹಿಂದೆ ಶ್ರೀ ಕೇಶವೇಂದ್ರ ತೀರ್ಥ ವಡೇರ ಸಮಾಧಿ ಇರುವುದರಿಂದ ಶಾಲಿವಾಹನ ಶಕ 1592ರಕ್ಕಿಂತ ಮುಂಚೆ ಈ ದೇವಸ್ಥಾನ ಇರುತ್ತಿತ್ತೆಂತ ಕಾಣುತ್ತದೆ. – ಬಸ್ರೂರಲ್ಲಿ ಈಗ ಮಿಶನ್ ಕಂಪೌಂಡಿನ ಸೇರಿರುವ ಜಾಗದಲ್ಲಿ ಮುಂಚೆ ಗೌಡಸಾರಸ್ವತರ ಹತ್ತು ಸಮಸ್ತರ "ವರದರಾಜ ವೆಂಕಟರಮಣ ಸ್ವಾಮಿ" ದೇವಸ್ಥಾನವಿತ್ತು. ನಮ್ಮ ಜನರು ಆ ಜಾಗ ಬಿಟ್ಟು ಊರ ಒಳಗಡೇ ಸೇರಿದ್ರಿಂದ ದೇವಸ್ಥಾನವನ್ನು ಅಲ್ಲಿಂದ ಕಿತ್ತು ತೆಗೆದು ಪ್ರಧಾನ ವಿಗ್ರಹಗಳನ್ನು ಶ್ರೀ ಕಾಶೀ ಮಠದಲ್ಲಿ ತಂದಿಟ್ಟು ಪೂಜೆ ಮಾಡುತ್ತಿದ್ದಾಗ್ಯೆ ಗುರುಪುರದಲ್ಲಿ ನಮ್ಮವರು ಮಾಡುತ್ತಿದ್ದ ಹೊಸ ದೇವಸ್ಥಾನಕ್ಕೆ ಅರ್ಚಕ ಬಸ್ರೂರ ಭಟ್ರ ಕುಟುಂಬ ಸಮೇತ ವಿಗ್ರಹಗಳನ್ನು ಶ್ರೀ ಕಾಶಿಮಠದ ಶ್ರೀ ಮಾಧವೇಂದ್ರ ಸ್ವಾಮಿಗಳವರು ಕೊಂಡು ಹೋಗಿ ಪ್ರತಿಷ್ಠೆ ಮಾಡಿದ್ದು ಶಕ 1665 (ಕ್ರಿ. ಶ. 1743) ಎಂತ ಅಂದಾಜು. ರುಧಿರೋದ್ಗಾರಿ ಸಂ। ಚೈತ್ರ ವೈಶಾಖ.

# 22. ನಗರ ಸಂಸ್ಥಾನದ ತಹಾ

ನಗರ ಸಂಸ್ಥಾನದ ಶಿವಪ್ಪನಾಯಕರ ಕಾಲದಲ್ಲಿ ಆದ ತಹಾ ನಕಲು

ಶ್ರೀಮತ್ಸಕಲ ಸುರಾಸುರ ನರವರನಿಕರ ಶಿರೋಹಾರ ಶೀರಾಜಿತ ನಿಜಪಾದ ಶತಪಿರಚಿತನಂತೆ ಬ್ರಹ್ಮಾಂಡ ನ್ಯಸ್ತ ನಿಖಿಲ ನಿಗಮತ್ತದಂತ ಸಂತತಿ ಪ್ರಣೀತ ತನ್ನಿರ್ಣಯ ಬ್ರಹ್ಮ ಮೀಮಾಂಸಾಶಾಸ್ತ್ರ ಶ್ರೀ ಬಾದಾರಾಯಣ ಚರಣಪಾರಾಯಣ ವಿದ್ಯಾಶಂಕರ ಶುಯಂಕರ ವೈಷ್ಣವಾಚಾರ್ಯ –

ಸ್ವಸ್ತಿ ಶ್ರೀಮತ್ಸರ್ವಧಾರಿ ಸಂವತ್ಸರದ ಕಾರ್ತಿಕ ಶುಕ್ಲ ಪೂರ್ಣಿಮಾ ಶಾಲಿವಾಹನ ಶಕ ೧೫೭೦ ಶುಭದಿವಸದಲ್ಲಿ ಶ್ರೀಮದ್ಯಜನಯಾಜನಾಧ್ಯಯನಾಧ್ಯಾಪನ ದಾನಪ್ರತಿಗ್ರಹಾತ್ಮಕ ನಿಖಿಲ ಶಟ್ಕರ್ಮನಿರುತರಾದ ಋಗ್ವೇದಿ ಅಶ್ವಲಾಯನ ಸೂತ್ರರಾದ ಕಾಶ್ಯಪ ೧ ಕೌಂಡಿಣ್ಯ ೨ ಭಾರದ್ವಾಜ ೩ ಅತ್ರಿ ೪ ವಿಶ್ವಾಮಿತ್ರ ೫ ಗಾರ್ಗ್ಯ ೭ ಸಾಂಖ್ಯಾಯನ ೮ ಧನಂಜಯ ೯ ಕೌತ್ಸ ೧೦ ಹಾರಿತ ೧೧ ಕೌಶಿಕ ೧೨ ವತ್ಸ ೧೩ ವಸಿಷ್ಟ ೧೪ ಜಾಮದಗ್ನ್ಯ ೧೫ ಮುದ್ಗಲ ೧೬ ಆಂಗಿರಸ ೧೭ ನೈದ್ರುಪ ೧೮ ಈ ೧೮ ಗೋತ್ರದ

"ಪ್ರಭೂ ನಾಯಕ ಶೆಣವಿ ಯಾ ಪೈ ಕಿಣಿ ಬಾಳಿಗಸ್ತಥಾ ।

ಭಕ್ತ ಹೆಗಡೆ ನಾಮಾನಿಃ ಕಾಮತಿ ಬಾಳಯೇಂವಚ ॥

ನೇತ್ರಿ ಕೂಡವ ಭಂಡಾರಿ ಪಡಿಯಾರಶ್ಚ ಪಾಳಕಃ ।

ಮಾಃಲೆ ಪಾಡಿಯಾರ ಡಾಂಗೀಚ ಪೈಕಾ ಅಷ್ಟಾದಶಾಸ್ಮೃತಾಃ ॥"

ಈ ಶ್ಲೋಕೋಕ್ತವಾದ ೧೮ ಹದಿನೆಂಟು ಪೈಗಳಿಂದ ಯುಕ್ತರಾದ ಸಾಸಷ್ಟಿ ಅಂತ್ರೋಜಿ ಮುಸ್ಥಿ ಕೊಂಕಣದೇಶದ ೬೬ ಗ್ರಾಮಾಗ್ರಹಾರ ಮಹಾಜನರಾದ ಅವಾವದೇಶಗಳಲ್ಲಿ ವಾಸ ಮಾಡಿದ ಅಶೇಜ ಶ್ರೀ ಮದಾಚಾರ್ಯ ಶುದ್ಧ ಸಾಂಪ್ರದಾಯ ಪ್ರವರ್ತಕ ಪರಮಹಂಸ ಕುಲಜತಿಲಕ ಕಾಶಿ ಗೋಕರ್ಣಮಠೀಯ ಶುದ್ಧ ಸಾಂಪ್ರದಾಯದಲ್ಲಿಹ ಬ್ರಹ್ಮಚಾರಿ ಗ್ರಹೀ ವಾನಪ್ರಸ್ಥ ಸಂನ್ಯಾಸಗಳೆಂಬ ನಾಲ್ಕು ಆಶ್ರಮಗಳಿಂದ ಅಶೇಷಕೊಂಕಣ ಬ್ರಾಹ್ಮಣರುಗಳಿಗೆ–ಶೃಂಗೇರಿ ಮಠ ಸುಧಾಪುರದ ಸ್ವರ್ನದಲಿ ಮಠ ೧ ನೆಲೆಮಾವಿನ ಮಠ ೧ ಗೋಕರ್ಣ ಮಠ ೧ ಸೋದೆಯ ಹಯಗ್ರೀವ ಮಠ ೧ ವ್ಯಾಸರಾಯ ಮಠ ೧ ಉಡುಪಿ ಮಠ ೧ ಫಲಮಾರು ಮಠ ೧ ಅದಮಾರ ಮಠ ೧ ನೇರಂಬಳ್ಳಿ ಮಠ ೧ ಪೇಜಾವರ ಸೋದೆ ಮಠ ೧ ಪುತ್ತಿಗೆ ಮಠ

೧ ಕಾಣೂರ ಮಠ ೧ ಉಪ್ಪೂರ ಮಠ ೧ ತೀರ್ಥಳ್ಳಿ ಮಠ ೧ ಮುಳಬಾಗಿಲು ಮಠ ೧ ಕುಂಭಕೋಣ ಮಠ ೧ ಉತ್ತರಾದಿ ಮಠ ೧ ಶ್ರೀ ವೈಷ್ಣವ ಮಂಡಲಾಚಾರ್ಯ ಮಠ ೧ ಭಟ್ಟಾಚಾರ್ಯ ಮಠ ೧ ತಿರುಮಲಾಚಾರ್ಯ ಮಠ ೧ ವಿದೇಹಿ ಅವಧೂತಮಠ ೧ ಸದೇಹಿ ಅವಧೂತ ಮಠ ೧ ಯೋಗೀಂದ್ರ ಮಠ ೧ ಯೋಗೀಶ್ವರ ಮಠ ೧ ಮುಂತಾದ ಮಠಗಳ ಶಿಕೆಯೊಳಗಿಹ ನಾನಾ ಶಾಖಾ ಸೂತ್ರ ಗೋತ್ರ ನಾಮಗಳುಳ್ಳ ದ್ರಾವೀಡ ಆಂಧ್ರ ಕರ್ನಾಟಕ ಮಹಾರಾಷ್ಟ್ರ ಗುರಜರಾಯಂಬ ಪಂಚ ದ್ರಾವಿಡ ಸಂಕೇತದೊಳಗಿಹ ದ್ರವಿಡಬ್ರಹಶ್ಚರಣ ಹೈವ ಕೋಟ ಕಂದಾವರ ಶಿವಳ್ಳೀ – ತುಳುವ ತಿಗಳ– ಚೋಳ – ನಂಬೂದ್ರಿ – ನಿಯೋಗಿ – ಸಕಲಪುರ, ಅತಿವಾಸ, ಶ್ರೀವೈಷ್ಣವ – ಶೈವ, ಸಂಕೇತಿ, ಆಂಧ್ರ, ತೆಲುಗು, ತೆಲಂಗಾಣ, ಮುರಕನಾಡು, ವೆಗಿನಾಡು, ವೈಲನಾಡು, ಕಾಸಲ ರಾಟ, ಉಕ್ರಜೆ, ಕನ್ನಡಿಗ, ಕಮ್ಮೆ, ಕರ್ನಾಟಕ, ಮಹಾರಾಷ್ಟ್ರ, ಆರ್ಯ, ಚಿತಪಾವನ, ಪದ್ಯ, ಕರಾಡಿ, ಕಾಂಣವ, ಯಾಜ್ಞವಲ್ಕ್ಯ, ದೇವರುತೆ– ಮಾದ್ಯಂದಿನ, ಜೊತಿಶಿ, – ಹೈಜನಾಗರ, ಕಳಗ, ಪಂಚಗ್ರಾಮ, ಹೊಯ್ಯಕ್ಕೆ, ಮಾಲೆ – ಪಾತಾಳಿ, ಶಿವನಿರ್ಮಾಲ್ಯ, ಸ್ತುತಿಧೂಪತ, ಯೋಗ್ಯಾಯೋಗ್ಯ, ದಶವಿಧ ಬ್ರಾಹ್ಮಣ, ಶ್ರೀ ಕ್ರಿಯಾಚಾರ, ಗುರ್ಜರ, ನಾಗರ, ಕಿಳವಾಡಿ, ಬೆಡವಾಡಿ, ಮುಂತಾದ ಪಂಚ ದ್ರಾವಿಡ ದೇಶಸ್ಥರು ತಥಾ ಸಾರಸ್ವತ ಕಾನ್ಯಕುಬ್ದ – ಗೌಡ, ಮಾಳವ – ಉತ್ಕಲ – ಮೈಥಿಲ–ದಲ್ಲಿ ತತ್ತದವಾಂತರಜಾತಿಯವರಾದ ಅಶೇಷ ಪಂಚಗೌಡ ಬ್ರಾಹ್ಮಣರು. ತಥಾ ಆವಾವಾ ದೇಶಗಳಲ್ಲಿರುವ ಕ್ಷತ್ರಿಯ – ವೈಶ್ಯಾದಿ ಸಮಸ್ತ ಛಪ್ಪನ್ನ ದೇಶಗಳಲ್ಲಿರುವ ಯಥಾಯೋಗ್ಯರಾಗಿ ದೊರಕಿದ ಸಮಸ್ತ ಜನರು – ಬಿದರೂರು ನಗರದ ರಾಜಧಾನಿಗೆ ಕರ್ತುಗಳಾದ ಶ್ರೀ ಶಿವಪ್ಪನಾಯಕರ ಸನ್ನಿಧಿಯಲ್ಲಿ ಬರಶಿಕೊಟ್ಟ ಬಿನ್ನವತ್ತಳೆ ಭಾಷಾಪತ್ರ–

ಪ್ರಾಕು ನೀವು–ನಿಮ್ಮ ಸಪ್ತಕೊಂಕಣದೇಶಗಳಲ್ಲಿ ಮಧ್ಯಕೊಂಕಣವಾದ ಗೋವಾದೇಶದಲ್ಲಿ ವೇದವಿಹಿತವಾದ ಸಕಲ ಶೌತ್ರ – ಸ್ಮಾರ್ತ ಕರ್ಮಾನುಷ್ಠಾನಗಳನ್ನು ಮಾಡಿಕೊಂಡು – ಇರುವಲ್ಲಿ ಬ್ರಹ್ಮಕರ್ಮ ಕೆಡಿಸಬೇಕೆಂಬ ತಾತ್ಪರ್ಯವೂ – ಸ್ವಭಾವವೂ ಉಳ್ಳ ಪುರ್ತುಗಾಲ್ ಫರಂಗಿಯವರು ಕಪಟದಿಂದ ಆ ಗೋವೆ ರಾಜ್ಯವನ್ನು ತೆಗೆದುಕೊಂಡು ಆಮೇಲೆ ಬ್ರಾಹ್ಮಣರಲ್ಲಿ ಯಾಜಿಕದಿಂದ ಅಧ್ಯಾಪಕರಾದ ಸಹಾ ಬ್ರಹ್ಮಕರ್ಮ ನಡೆದುಬರುತ್ತದೆ ಎಂದು ತಿಳಿದು ಆವಾವ ಯಾಜಕ ಅಧ್ಯಾಪಕವಾಡಿಗಳಲ್ಲಿ ನೀವು ಆಮೇಲೆ ಕೆಲವು ಲೌಕಿಕ ವಿಚಾರದ ಗೃಹಸ್ಥ ಜನರು ವಾಣಿಜ್ಯಾದಿ ವೃತ್ತಿಗಳಿಂದ ಜೀವಿಸಿಕೊಳ್ಳುತ್ತಾ ನೆರೆ ದೇಶಗಳಲ್ಲಿ ಇದ್ದ ಚಿತಪಾವನ ಪದ್ಯ – ಕರಾಡಿ, ದೇಶಸ್ಥ, ಹವೀಕ ಮುಂತಾದ

ಾಹ್ಮಣರುಗಳನ್ನು ಆ ಫರಂಗಿಪ ಮುಚ್ಚು ಮರೆಯಲ್ಲಿ ಕರೆಕಳುಹಿ ತಮ್ಮ ಬ್ರಹ್ಮ ಕರ್ಮಗಳನ್ನು ಮಾಡಿಸಿ ಕೊಳ್ಳುತ್ತಾ ಇರುವಲ್ಲಿ ಕೆಲವು ವರುಷ ಕಳೆದ ನಂತರ ಆ ಫರಂಗಿಯವರು ದನ್ನು ತಿಳಿದು ಸಮಸ್ತ ಆ ಲೌಕಿಕ ಗೃಹಸ್ಥರಿಗೆ ಬಹಳ ನಿರ್ಬಂಧಪಡಿಸಿ ಲಕ್ಷ ಎರಡು ಲಕ್ಷ ಅಪರಾಧ ಕೊಡಬೇಕಾಗಿ ತಗಾದೆ ಮಾಡಿಸಿದ್ದರಿಂದ ಆ ಜನರು ೇರಳವಾಗಿ ತಮ್ಮ ತಮ್ಮ ಧನ ಕುಟುಂಬ ಸಮೇತರಾಗಿ ಮಧ್ಯದಲ್ಲಿ ಪುರೋಹಿತ್ಯ ಡಿಸುವ ಕೆಲವು ಚಿತಪಾವನ ಮುಂತಾದವರಿಂದ ಕೂಡಿ ಹಡಗುಗಳಲ್ಲಿ ಕುಳಿತುಕೊಂಡು ರಾಜ್ಯವನ್ನು ಬಿಟ್ಟು ಸುಂಕೇರಿ, ಅಂಕೋಲ, ಗೋಕರ್ಣ, ಭಟ್ಕಳ, ಬಸರೂರು, ೊಚ್ಚಿ, ಅನಂತಶಯನ, ರಾಮೇಶ್ವರ ಮುಂತಾದ ಆವಾವ ಊರುಗಳಲ್ಲಿ ಸೇರಿ ಅಲ್ಲಿ ೂಡಾ ಬ್ರಹ್ಮವೃತ್ತಿಯಲ್ಲಿ ಜೀವಿಸಲಿಕ್ಕೆ ಉಪಾಯವಿಲ್ಲದೇ ಕೆಲವು ವಾಣಿಜ್ಯಾದಿ ವೃತ್ತಿಗಳಿಂದ ಹಾ ಜೀವಿಸಿಕೊಳ್ಳುತ್ತಾ ಅದೇ ಚಿತಪಾವನ ಮುಂತಾದವರಿಂದ ಮತ್ತು ಆವಾವ ೇಶಗಳಲ್ಲಿ ದೊರಕಿದ ಬ್ರಾಹ್ಮಣರಿಂದ ಬ್ರಹ್ಮಕರ್ಮಗಳನ್ನು ಮಾಡಿಸಿಕೊಳ್ಳುತ್ತಾ ಇರುವಲ್ಲಿ, ಲವು ವರ್ಷಕಳೆದ ನಂತರ ಪುರ್ತಗಾಲದಲ್ಲಿ ಅರಸುಗಳು ತಮ್ಮ ಗೋಮಂತರಾಜ್ಯದಿಂದ ಾದ್ರಿಗಳ ನಿರ್ಬಂಧದಿಂದ ಹೇರಳವಾಗಿ ಬ್ರಾಹ್ಮಣ ಪ್ರಜೆಗಳು ದೇಶಾಂತರಪಾಲಾಗಿ ೋದರೆಂದು ತಿಳಿದು ಆ ವಿಧದ ನಿರ್ಬಂಧಗಳು ಮಾಡಕೂಡದಾಗಿ ಗೋವೆಗೆ ಪ್ಪಣೆ ಬರೆದ ನಂತ್ರ ಆ ಪೂರ್ವದಲ್ಲಿ ಯಾಜಕಾಧ್ಯಾಪಕರ ವಾಡಿಗಳಲ್ಲಿ ವಾಶಿ ಮುಕುಪ್ತ್ ಆದ್ದರಿಂದ ಅವರವರು ತಮ್ಮ ತಮ್ಮ ಯಜಮಾನರನ್ನು ಹುಡುಕಿ ಆವಾವ ೇಶಗಳಲ್ಲಿ ಹೋದ ಮೇಲೆ ತಮ್ಮ ತಮ್ಮ ಪೌರೋಹಿತ್ಯಗಳನ್ನು ತಾವೇ ಮಾಡಿಸುತ್ತಾ ರುವಲ್ಲಿ ಆ ಸಮಯದಲ್ಲಿ ನಾವು ನಮ್ಮ ನಮ್ಮ ಪ್ರಾಪ್ತಿಗಳು ಕೆಡುತ್ತಾವೆಂದು ಅಲ್ಲಲ್ಲಿ ೊರೆಗಳಿಗೆ ಇವರು ಬ್ರಾಹ್ಮಣರು ಅಲ್ಲಾ ವೈಶ್ಯರಾಗಿರುತ್ತಾರೆ. ಇವರು ಈಗ ಬ್ರಹ್ಮ ರ್ಮಗಳನ್ನು ಮಾಡಿಸಿದ್ದಾರೆಂದು ದುರ್ಜೋಷಣೆ ಮಾಡಿ ಪಿಂಗಳ ಸಂವತ್ಸರದಲ್ಲು ಶಾ. ೧೫೩೯) ಶ್ರೀಮತ್ ಕೆಳದಿ ವೆಂಕಟಪ್ಪ ನಾಯಕರ ನಿರೂಪಗಳು ಮಾಡಿಸಿ ಅಲ್ಲಲ್ಲಿ ತಾಕೀತುಮಾಡ್ಲಿದ್ದಾಯಿತು.

ಆಮೇಲೆ ಮುಚ್ಚುಮರೆಯಲ್ಲಿ ನೀವು ನಿಮ್ಮ ನಿಮ್ಮ ವೈದಿಕರಿಂದ ಬ್ರಹ್ಮಕರ್ಮಗಳನ್ನು ಮಾಡಿಸಿಕೊಳ್ಳುತ್ತಾ ನಮ್ಮಿಂದಲೂ ಕೆಲವು ಕಾರ್ಯಗಳನ್ನು ಮಾಡಿಸಿಕೊಳ್ಳುತ್ತಾ ಕೆಲವು ರ್ಷ ಕಳೆದ ನಂತರ ಪುನಶ್ಚ ಅದನ್ನು ನಾವು ತಿಳಿದುಕೊಂಡು ಅರಸುಗಳಲ್ಲಿ ತಿಳಿಸಿ ಹಳ ನಿರ್ಬಂಧ ಪಡಿಸಿ ಇವರು ವಾಣಿಜ್ಯವೃತ್ತಿಯವರು, ಮತ್ಸ್ಯಾಹಾರ ಮಾಡುವಂಥಾವರು, ಹೀಗೆ ಇದ್ದು ಬ್ರಹ್ಮಕರ್ಮಗಳನ್ನು ಮಾಡುತ್ತಾರೆ. ಇದರಿಂದ ಅರಸುಗಳ ಾಜ್ಯಕ್ಕೆ ಕೇಡು ಉಂಟು. ಆದ್ದರಿಂದ ಇವರನ್ನು ಹಿಡತಂದು ಭಾರಿ ಅಪರಾಧ ಮಾಡಿಸಿ

ಇನ್ನು ಮುಂದೆ ಆ ವಿಧದ ಬ್ರಹ್ಮಕರ್ಮಗಳನ್ನು ಅವರು ಮಾಡಿಸದಂತೆ ಆಗಬೇಕಾಗಿ ಅರಸುಗಳ ಅಪ್ಪಣೆಯಿಂದ ಊಳಿಗದವರನ್ನು ಬಿಟ್ಟು ಗೋವೆ ರಾಮಕಿಣೀ, ಕುಕವಳ್ಳಿ ವಿಠಲನಾಯಕ, ಮುಂತಾದ ಕೆಲವು ನಿಮ್ಮ ಜನರನ್ನು ಹಿಡತರ್ಸಿ ಗೋಕರ್ಣದಲ್ಲು ಇಪ್ಪತ್ತನಾಲ್ಕು ಸಾವಿರ ವರಹಾ ಅಪರಾಧ ನಿಶ್ಚಯ್ಸಿ ಅದರಲ್ಲಿ ಆ ಕೂಡಿದ ಜನರಿಂದ ಮೂರು ಸಾವಿರ ವರಹವನ್ನು ಬಹಳ ನಿರ್ಬಂಧದಿಂದ ತೆಗೆದುಕೊಂಡು ಉಳಿದ ಹಣ ನೀವು ಕ್ರಮದಿಂದ ವಸುಲು ಮಾಡಿಸಿಕೊಡಬೇಕೆಂದು – ತಾಕೀತು ಮಾಡಿಸಿ ಆ ವಿಷಯಕ್ಕೆ ವಿಭವ ಸಂವತ್ಸರದಲ್ಲಿ ಶ್ಯಾ ೧೫೫೦ ನಿಮ್ಮಿಂದ ಬಿನ್ನವತ್ತಳೆ ಭಾಶಾಪತ್ರ ಬರಿಸಿಕೊಂಡದ್ದಾಯಿತು. ಆಮೇಲೆಯೂ ನೀವು ಅದೇ ಪ್ರಕಾರ ನಮ್ಮ ಭಯದಿಂದ ಮುಚ್ಚುಮರೆಯಿಂದಲೇ ನಿಮ್ಮ ಬ್ರಾಹ್ಮಣರುಗಳಿಂದ ಬ್ರಹ್ಮಕರ್ಮಗಳನ್ನು ಮಾಡಿಸಿಕೊಳ್ಳುತ್ತಾ ಕೆಲವು ವರುಷ ಕಳೆದ ನಂತರ ಇದೇ ನಗರ ರಾಜಧಾನಿಯಲ್ಲಿ ಶ್ರೀ ಶಿವಪ್ಪ ನಾಯಕರ ಸನ್ನಿಧಾನದಲ್ಲಿ ಅರಿಕೆ ಮಾಡಿಕೊಂಡು ಪಾರ್ಥಿವ ಸಂವತ್ಸರದಲ್ಲಿ ಶಾ. 1567 ಆವಾವ ಊರುಗಳ ಅಧಿಕಾರ ನಡಿಸುವ ಸರಕಾರದ ಜನರಿಗೆ ಅರಸುಗಳ ನಿರೂಪಗಳನ್ನು ಮಾಡಿಸಿ ಬಹಳ ನಿರ್ಬಂಧ ಪಡಿಸಿದ್ದರಿಂದ ನಿಮ್ಮ ಧರ್ಮಕ್ಕೆ ಆಚಾರ ವಿಚಾರ ಕರ್ತುಗಳಾದ ಕಾಶೀಮಠದ ಶ್ರೀಮತ್ ಯಾದವೇಂದ್ರ ತೀರ್ಥ ಶ್ರೀಪಾದಂಗಳವರು ಬಹಳ ಕ್ರೋಧದಿಂದ ಜನಾರ್ದನ ಕ್ಷೇತ್ರಕ್ಕೆ ಹೋಗಿ ನಿರಶನ ವ್ರತವನ್ನು ಮಾಡಿ ತಪಸ್ಸು ಮಾಡಿದರು. ತಥಾ ಗೋಕರ್ಣ ಮಠದ ಶ್ರೀಮತ್ ಜೀವೋತ್ತುಮ ತೀರ್ಥ ಶ್ರೀಪಾದಂಗಳವರು ಗೋವೆಯಿಂದ ಆಗ್ನೇಯ ಭಾಗದಲ್ಲಿರುವ ರೇವಣಕ್ಷೇತ್ರದಲ್ಲಿ ಹೋಗಿ ಅದೇ ಪ್ರಕಾರ ನಿರಶನ ವ್ರತ ಪೂರ್ವಕ ಬಹಳ ಉಗ್ರ ತಪಶ್ಚರಣೆ ಮಾಡಿದರು. ಹೀಗೆ ಅವರು ತಪಶ್ಚರಣೆ ಮಾಡುತ್ತಾ ಇರುವ ಸಮಯದಲ್ಲಿ ವ್ಯಯಸಂವತ್ಸರದ (ಶಾ. 1560) ಶ್ರಾವಣಮಾಸದಲ್ಲಿ ಶ್ರೀ ಶಿವಪ್ಪ ನಾಯ್ಕರು ನಗರದ ಕೋಟೆ ದೇವಡಿ ಸಮೀಪದಲ್ಲಿರುವ ತುಂಬಿದ ದೊಡ್ಡಕೆರೆಯೇರಿ ಮೇಲೆ ಹೋಗಿ ನಿಂತು ಆ ಕೆರೆಯನ್ನು ನೋಡಿ ಇದ್ರಲ್ಲಿ ಎಷ್ಟು ನೀರು ಆಗಬಹುದು ಎಂತ ಸಹಜವಾಗಿ ಅಪ್ಪಣೆ ಕೊಟ್ಟ ಸಮಯದಲ್ಲಿ ಆ ವಿಶಯದಲ್ಲಿ ವಿನಾಯಕ ಮಲ್ಯರಿಗೆ ನಿಜವಾಗಿ ಗೊತ್ತು ಇರಬಹುದೆಂತ ಪ್ರಧಾನ ನೆಗಳೆ ಶಿವರಾಮಯ್ಯನವರು ಹೇಳಿದರು.

ಆಮೇಲೆ ದೊರೆಗಳು ವಿನಾಯಕ ಮಲ್ಯರಿಗೆ ಅಪ್ಪಣೆ ಕೊಡಲಾಗಿ ಅವರು ಒಂದು ತೆಂಗಿನ ಮರ ಪ್ರಮಾಣ ಆಗಬಹುದು, ಅಥವಾ ಒಂದು ಬೈನೆ ಪ್ರಮಾಣ ಆಗಬಹುದು, ಅಥವಾ ಒಂದು ಈಚಲ ಪ್ರಮಾಣ ಆಗಬಹುದು, ಅಥವಾ ಒಂದು ತಾಳೆಮರ ಪ್ರಮಾಣ ಆಗಬಹುದು ಎಂತ ಹೇಳಿದರು. ಆ ಸಮಯದಲ್ಲಿ ಕರ್ತುಗಳು

ಾಲ್ಕು ವಿಧವಾಗಿ ಹೇಳಲಿಕ್ಕೆ ಕಾರಣವೇನೆಂದು ಅಪ್ಪಣೆ ಕೊಟ್ಟದ್ದಕ್ಕೆ ಈ ಕೂಡಿದ ್ತೋಮದಲ್ಲಿ ಅನೇಕ ಜನರು ಇದ್ದಾಗ ಈ ಕೆರೆಯ ನೀರಿನ ಪ್ರಮಾಣ ನನ್ನ ಕೈಯಾ ೀಳ ಹೇಳಬೇಕಾಗಿ ಶಿವರಾಮಯ್ಯನವರು ಕೇಳಲಿಕ್ಕೆ ಕಾರಣವೇನೆಂಬುದಾಗಿ ಸದ್ರಿ ಮಲ್ಯರು ಅರಿಕೆ ಮಾಡಿಕೊಂಡ ಸಮಯದಲ್ಲಿ ಕರ್ತುಗಳು ಈ ಮಾತುಗಳನ್ನು ಏನೋ ಂದು ಗೂಡಾರ್ಥವಿದೆ. ಅದನ್ನು ಅರಿಕೆ ಮಾಡಿಕೊಳ್ಳಿ ತಿಳಿಯಬೇಕೆಂದು ಶ್ಚರ್ಯಯುಕ್ತರಾಗಿ ಇಕ್ಕರ್ತರಿಗೂ ನಿಮ್ಮ ನಿಮ್ಮ ಮಾತುಗಳ ತಾತ್ಪರ್ಯ ಹೇಳಬೇಕೆಂದು ಪ್ಪಣೆ ಕೊಟ್ಟರು. ಅದನ್ನು ಕೇಳಿ ಇಕ್ಕರ್ತರೂ ಏನೂ ಮಾತನಾಡಲಿಲ್ಲ. ಆ ಸಮಯದಲ್ಲಿ ಾಸ್ತಗಾರ ನಂಜಪ್ಪ ಶೆಟ್ಟರು ಕೊಂಕಣಿರು ಜಲದಲ್ಲಿರ್ವ ಮೀನು ಭಕ್ಷಣೆ ಮಾಡುತ್ತಾರೆಂತಲೂ ಈ ಹವೀಕ ಮುಂತಾದವರು ಮದ್ಯಪಾನ ಮಾಡುತ್ತಾರೆಂತಲೂ ಹಾ ಈ ಮಾತುಗಳ ತಾತ್ಪರ್ಯವೆಂದು ಹೇಳಿದರು. ಅದನ್ನು ಕೇಳಿ ಕರ್ತುಗಳು ಮ್ಮ ಮಾತುಗಳ ತಾತ್ಪರ್ಯ ಇದೇ ದಿಟವೋ ಎಂತ ಅಪ್ಪಣೆ ಕೊಟ್ಟರು. ಆದನ್ನು ೇಳಿ ಇಕ್ಕರ್ತರೂ ಒಪ್ಪಿಕೊಂಡರು. ಆ ಸಮಯದಲ್ಲಿ ಶಿವರಾಮಯ್ಯನವರು ತಮಗೆ ಲ್ಲವಾದ ಅತ್ಯಂತ ಕೆಟ್ಟ ಮಾತು ಈ ವಿನಾಯಕ ಮಲ್ಯರು ಹೇಳಿರುತ್ತಾರೆ. ಇದನ್ನು ರ್ತುಗಳು ಚೆನ್ನಾಗಿ ವಿಚಾರಿಸಿಕೊಡಬೇಕೆಂತಲೂ ಅದು ಅಯಥಾರ್ಥವಾದರೆ ಅದಕ್ಕೆ ಕ್ಕ ಶಿಕ್ಷೆ ಆಗಬೇಕೆಂತಲೂ ಅರಿಕೆ ಮಾಡಿಕೊಂಡರು. ಆಗ್ಯೆ ವಿನಾಯಕ ಮಲ್ಯರು ಡವಾಡದೇ ಅದೇ ಪ್ರಕಾರ ಈ ಶಿವರಾಮಯ್ಯನವರು ಹೇಳಿದ ಮಾತು ಅಯಥಾರ್ಥವಾದರೆ ಅದಕ್ಕೆ ತಕ್ಕ ಶಿಕ್ಷೆ ಕೊಡಬೇಕೆಂದು ಅರಿಕೆ ಮಾಡಿಕೊಂಡರು. ೀಗೆ ಅಸಮರ್ಥರಾದ ಇಕ್ಕರ್ತರು ಕರ್ತುಗಳ ಸನ್ನಿಧಿಯಲ್ಲೇ ಪರಸ್ಪರವಾಗಿ ಬಹಳ ರಚ್ಚಿನಿಂದ ವಾಗ್ವಾದಗಳನ್ನು ಕರ್ತುಗಳ ಅಪ್ಪಣೆಯಿಂದಲೇ ಇಕ್ಕರ್ತರು ಕೂಡಾ ತಮ್ಮ ತಮ್ಮ ಮಾತುಗಳು ನಿರ್ಣಯಿಸಿಕೊಡದಿದ್ರೆ ಐದು ಲಕ್ಷ ವರಹಾನ್ನ ಗುನ್ಹೆಗಾರಿಕೊಡುತ್ತೇವೆಂತ ಕೈಚೀಟು ಬರಕೊಟ್ಟರು. ಆಮೇಲೆ ಆ ಶಿವರಾಮಯ್ಯನವರು ಆವಾವ ಗಡಿವಾಡಗಳಲ್ಲಿ ಪಾರಾದವರಿಗೆ ಗುಪ್ತವಾಗಿ ತಾಕೀತುಮಾಡಿಸಿ ಎರಡು ಮೂರು ಜನ ಮತ್ಸ್ಯಗಳನ್ನು ತೆಗೆದುಕೊಂಡು ಬರುವವರನ್ನು ಹಿಡಿದು ಸರಕಾರಕ್ಕೆ ತಂದು ಹಾಜ್ರು ಮಾಡಿ ವಿಚಾರಣೆ ಆದಲ್ಲಿ ಆ ಮಲ್ಯರು ಈ ಮೀನು ತಂದವರು ತಮ್ಮ ಜಾತಿಯವರಲ್ಲವೆಂದು ಕರ್ತುಗಳ ಮುಂದೆ ನಿರ್ಣಯಿಸಿಕೊಟ್ಟರು.

ಆಮೇಲೆ ಅದೇ ಮಲ್ಯರು ಒಳಂತರಂಗದಿಂದ ಯಾ ಹೊತ್ತು ನಗರದ ರಾಜಧಾನಿಯಲ್ಲಿ ಸಾರಾಯಿಮಾಡುವ ಕಿರಿಸ್ತರ ಜಾತಿಯವರನ್ನು ತಂದು ಆ ಭೇದಗಳನ್ನೆಲ್ಲಾ ತಿಳಿದು ರಾತ್ರಕಾಲದಲ್ಲಿ ಮಲಿನ ವಸ್ತ್ರಗಳನ್ನು ಉಟ್ಟು, ಯಜ್ಞೋಪವೀತಗಳನ್ನು ತೆಗೆದಿಟ್ಟು

ಶೂದ್ರವೇಶದಿಂದ ಸಾರಾಯಿ ಅಂಗಡಿಗೆ ಹೋಗಿ ಮದ್ಯಪಾನವನ್ನು ಮಾಡಿಕೊಂಡು ಬರುವಂಥಾ ಕೆಲವು ಹವೀಕ ಮುಂತಾದ ಬ್ರಾಹ್ಮಣರನ್ನು ಹಿಡಿದು ಕೊತ್ವಾಲಕಟ್ಟೆಯಲ್ಲಿ ರಾತ್ರಿಯಲ್ಲಿ ತಪ್ಪಿಹೋಗದ ರೀತಿ ಬಂದೋಬಸ್ತಿನಿಂದ ಇಟ್ಟುಕೊಂಡು ಮರುದಿವಸ ರಾಜಸಭೆಯಲ್ಲಿ ತಂದು ಕರ್ತುಗಳ ಮುಂದೆ ವಿಚಾರಮಾಡ್ರಿ ಅವರು ಬ್ರಾಹ್ಮಣರು ಹೌದು ಎಂತ ಮತ್ತು ಅವರು ಮದ್ಯಪಾನಮಾಡಿದ್ದು ಖರೆ ಎಂತ ನಿರ್ಣಯಿಸಿ ಮತ್ತು ಆ ಸಮಯದ ಅಂಗಡಿ ಕಿರಿಸ್ತಾನ ಬಾಬುನಾಯ್ಕ, ಮಿಂಗೆಲ ನಾಯ್ಕ, ಲೋರೆಸ ನಾಯ್ಕ, ಬಿಸ್ತ್ಯಾಂವ ಪ್ರಭು, ದೂಜೆ ಪ್ರಭು, ಇಂತ್ರಿ ಭಟ್ಟಾ, ವಾಸ್ಕು ನಾಯ್ಕ, ಮುಂತಾದವರಲ್ಲಿದ್ದ ಸಾರಾಯಿ ಉಜಾಪತಿ ಲೆಖ್ಖಗಳನ್ನು ತರ್ಸಿ ನಮ್ಮ ಜನಗಳಲ್ಲಿ ಮದ್ಯಪಾನ ಮಾಡುವವರಿದ್ದಾರೆಂತ ನಿರ್ಣಯಿಸಿಕೊಟ್ಟರು. ಆಮೇಲೆ ಆ ಶಿವರಾಮಯ್ಯನವರು ನಮ್ಮ ಜನರಲ್ಲಿ ಯಾರಾದರೂ ಅಸಂಭಾವಿತರು ಮದ್ಯಪಾನ ಮಾಡಿದರೂ ಕೂಡ ಶಿಷ್ಯರು ಆ ಪ್ರಕಾರ ಮಾಡೋಣವಿಲ್ಲ ಎಂತ ಹೇಳಿದ್ದಕ್ಕೆ ಆ ಮಲ್ಯರು ನಮ್ಮ ಜನರಲ್ಲಿ ಕೂಡಾ ಕೆಲವು ಮೂರ್ಖರು ಮತ್ಸ್ಯಾಹಾರ ಮಾಡಿದರೂ ಶಿಷ್ಯರು ಕದಾಪಿ ಮಾಡುವುದಿಲ್ಲ ಎಂತ ಹೇಳಿದರು.

ಆ ಸಮಯದಲ್ಲಿ ಶಿವರಾಮಯ್ಯನವರು ಅನೇಕ ನಿರ್ಣಯಗ್ರಂಥಗಳಲ್ಲಿ ನೀವು ಬ್ರಾಹ್ಮಣರಲ್ಲಾ, ಮತ್ಸ್ಯಾಹಾರ ಮಾಡತಕ್ಕವರು, ತ್ರಿಕರ್ಮಿಗಳು, ಆ ಪ್ರಕಾರ ಗೋವೆ ಪಾದ್ರಿ ಸಹಾ ಬರಸಿಯಿರುತ್ತಾನೆಂತ ಹೇಳಿದ್ದಕ್ಕೆ ವಿನಾಯಕ ಮಲ್ಯರು ಆ ಪುರಾಣೋಕ್ತರು ನೀವೇ ಆಗಿರಬಹುದು. ಆ ಮತ್ಸ್ಯಾಹಾರ ನೀವೇ ಮಾಡಿದ್ದಾಗಿರಬಹುದು ಎಂತ ಹೇಳಿದರು. ಸಭೆಯಲ್ಲಿ ಆ ಮಾತು ಕೇಳಿ ಶಿವರಾಮಯ್ಯನವರು ಕರ್ತುಗಳ ಮುಂತಿಟ್ಟು ಇದನ್ನು ನೀವು ರಾಜು ಮಾಡಿಕೊಡಬಬೇಕು ಇಲ್ಲವಾದರೆ ಸರಕಾರಕ್ಕೆ ಆ ತಕ್ಕ ಅಪರಾಧಕೊಡಬೇಕು ಎಂತ ಹೇಳಿದ್ದಕ್ಕೆ ವಿನಾಯಕ ಮಲ್ಯರು ಈ ಶಿವರಾಮಯ್ಯನವರ ಹಲ್ಲುಗಳು–ಕೀಳಿಸಿದರೆ ಆ ಹಲ್ಲುಗಳ ಸಂಧಿಯಲ್ಲಿ ಇವ ಭಕ್ಷಣೆ ಮಾಡಿದ ಮೀನುಗಳ ಮುಳ್ಳುಗಳನ್ನು ತೋರಿಸಿಕೊಡುತ್ತೇನೆ, ತೋರಿಸಿ ಕೊಡದೇ ಇದ್ರೆ ಹಲ್ಲು ಒಂದಕ್ಕೆ ಒಂದು ಲಕ್ಷ ವರಹಾನ್ನ ಮೇರೆಗೆ ಸರಕಾರಕ್ಕೆ ಅಪರಾಧಕೊಡುತ್ತೇನೆಂತ ಹೇಳಿ ಐದು ಲಕ್ಷ ವರಹ ಆ ಕ್ಷಣದಲ್ಲಿ ಸರಕಾರದಲ್ಲಿ ಕರ್ತುಗಳ ಮುಂದೆ ಹಾಜ್ರು ಮಾಡಿದರು. ಆ ಸಮಯದಲ್ಲಿ ಶಿವರಾಮಯ್ಯನವರು ಬಹಳ ಖೇದ ಪಟ್ಟು ಇರುವಾಗ್ಯೆ ಕರ್ತುಗಳು ಇಕ್ಕರ್ತರಿಗೂ ಸಮಾಧಾನ ಹೇಳಿ ಕಳುಹಿ ಕೊಟ್ಟರು.

ಆದಾಗ್ಯೂ ಶಿವರಾಮಯ್ಯನವರು ಸಭೆಯಲ್ಲಿ ಆ ವಿಧದ ಅವಮಾನಪಟ್ಟು ಸಹಿಸಿಯಿರಲಿಕ್ಕೆ ಕೂಡದ ಪುನಶ್ಚ ಕರ್ತುಗಳ ಮುಂದೆ ಸಕಲ ದೇಶದಲ್ಲಿ ಇರುವ

ಪಂಡಿತರನ್ನು, ಆವಾವ ಮಠದ ಸ್ವಾಮಿಗಳವರನ್ನು, ಬರಮಾಡಿಕೊಂಡು ಮಹಾಸಭೆ ಮಾಡಿಸಿ ಈ ಕೊಂಕಣಿಗಳು ಯಾರು ಎಂಬುದು ನಿರ್ಣಯ ಮಾಡಿಸಬೇಕು, ಇದಕ್ಕೆ ಬೇಕಾದ ಖರ್ಚಿನ ಹಣ ನಾವೆಲ್ಲರೂ ಕೂಡಿ ನಮ್ಮ ನಮ್ಮ ಭಾಗಾನುಸಾರವಾಗಿ ಎಟ್ಟು ಮಾಡಿಕೊಡುತ್ತೇವೆಂದು ಹೇಳಿಕೊಂಡರು. ಅದನ್ನು ಕೇಳಿ ಕರ್ತುಗಳು ಆ ವಿನಾಯಕ ಮಲ್ಯರನ್ನು ಕರೆ ಕಳಿಸಿ ಅಪ್ಪಣೆ ಕೊಟ್ಟರು. ಅದನ್ನು ಕೇಳಿ ಆ ಮಲ್ಯರು ಈ ಸಭೆಯನ್ನು ಕರ್ತುಗಳು ಮಾಡಿಸುವುದಾದರೆ ಅದಕ್ಕೆ ಮುಟ್ಟುವ ಆದ್ಯಂತ ಖರ್ಚಿನ ದ್ರವ್ಯ ತಾನೊಬ್ಬನೇ ಕೊಡುತ್ತೇನೆಂತ ಅರಿಕೆ ಮಾಡಿಕೊಂಡರು. ಅನಂತರ ಕರ್ತುಗಳು ಸಂಸ್ಥಾನದಿಂದಲೇ ಸಭೆಯನ್ನು ಮಾಡಿಸುತ್ತೇನೆಂತ ಅಪ್ಪಣೆ ಕೊಟ್ಟು ಆವಾವ ದೇಶಗಳಲ್ಲಿದ್ದ ಸಮಸ್ತ ಮಠಾಧಿಪತಿಗಳನ್ನು, ಪಂಡಿತರನ್ನು, ಬರಮಾಡಿಸಿಕೊಂಡು ಆರು ತಿಂಗಳ ಪರಿಯಂತವಾಗಿ ಎಲ್ಲಾ ಪಂಡಿತರು ಕೂಡಿ ಆ ಮೇಲೆಯೂ ಫಕ್ತ ಒಂದು ದಿವಸ ಪರ್ಯಂತವಾಗಿ ಸಕಲ ನಿರ್ಣಯಗ್ರಂಥಗಳ ವಿಚಾರ ಆಗುವ ಸಮಯದಲ್ಲಿ ಸಾಸಷ್ಟಿ ಶಿಮ್ಮ ಕೊಂಕಣ ಬ್ರಾಹ್ಮಣರಾದ ಸಾಗರದ ವೆಂಕಟರಾಮಾಚಾರ್ಯರ ಮಕ್ಕಳು ಘಟಿಕಾಶತತಿ ಬಿರುದುಳ್ಳ ರಾಮಾಚಾರ್ಯರು – ಗಂಟೆ ತೋಟ ವೆಂಕಟಾದ್ರಿ ದೀಕ್ಷಿತರು ಇಕ್ಕರ್ತರು ಬಹಳ ವಾಗ್ವಾದಗಳನ್ನು ಮಾಡಿ ಆಮೇಲೆ ಶೃಂಗೇರಿ ರಾಮಾಶಾಸ್ತ್ರಿಗಳ ಸಮ್ಮತಿಯಿಂದ ಸಾಗರ ರಾಮಾಚಾರ್ಯರು ಆವಾವ ನಿರ್ಣಯ ಗ್ರಂಥಗಳ ವಾಕ್ಯಗಳನ್ನು ಉದ್ಧರಿಸಿ ವ್ಯಾಖ್ಯಾನ ಪೂರ್ವಕ ಈ ಕೊಂಕಣಿ ಜನರು ವೇದೋಕ್ತ ಯಜನ ಯಾಜನಾದಿ ಷಟ್ಕರ್ಮಾಧಿಕಾರ ಉಳ್ಳವರೆಂದು ಸ್ಥಾಪಿಸಿದರು. ಆಮೇಲೆ ಕೆಲವರು ಇವರು ಪಾಂಡಿತ್ಯ ಬಲದಿಂದ ಹಣವಿನ ಬಲದಿಂದ ಸಹಾ ಬ್ರಾಹ್ಮಣ್ಯಸ್ಥಾಪನೆ ಮಾಡುತ್ತಾರೆ. ಆದರೂ ಇವರು ಬ್ರಾಹ್ಮಣರೆಂದು ನಾವು ಒಪ್ಪತಕ್ಕವರಲ್ಲಾ ಎಂತ ಹೇಳಿದರು.

ಆಮೇಲೆ ಕರ್ತುಗಳು ಇಕ್ಕರ್ತರ ಸಂಮ್ಮತಿಯಿಂದ ಕುಂಭಕೋಣಮಠದ ಶ್ರೀಮದ್ರಾಘವೇಂದ್ರ ತೀರ್ಥ ಶ್ರೀಪಾದಂಗಳವರ ಸನ್ನಿಧಾನಕ್ಕೆ ಭಿನ್ನಹಾ ಪತ್ರ ಬರಕೊಂಡದ್ದಕ್ಕೆ ಅವರು ಕುಂಭಕೋಣದಿಂದ ಈ ಸಾಸಷ್ಟಿ ಅಂತ್ರೋಜಿ ಕೊಂಕಣ ದೇಶದ ಜನರು ವೇದೋಕ್ತ ಸಂಪೂರ್ಣ ಷಟ್ಕರ್ಮಾಧಿಕಾರ ಉಳ್ಳವರೆಂದು ಅಪ್ಪಣೆರಾಯಸ ಕಳುಹಿಸಿಕೊಟ್ಟರು. ಆ ಸಮಯದಲ್ಲಿ ದೊರೆಗಳು ಆ ರಾಘವೇಂದ್ರ ಸ್ವಾಮಿಗಳ ರಾಯಸಪತ್ರವನ್ನವಲೋಕಿಸಿ ಈ ಜನರು ಬ್ರಾಹ್ಮಣರೇ ಸರಿ. ಇಷ್ಟು ದಿವಸಪರಿಯಂತ್ರವಾಗಿ ನೀವು ಇವರ ಮೇಲೆ ನಡಿಸಿದ್ದು ಅನ್ಯಾಯವಾಗಿರುತ್ತದೆ ಎಂತ ಅಪ್ಪಣೆ ಕೊಟ್ಟು ಇನ್ನು ಮುಂದೆ ನೀವು ವಿವೇಕವಾಗಿರಬೇಕು ಎಂತ ಅಪ್ಪಣೆ ಕೊಟ್ಟರು.

ಕರ್ತುಗಳು ಆ ಮೇರೆಗೆ ಅಪ್ಪಣೆ ಕೊಟ್ಟರೂ ಕೂಡಾ ಆಮೇಲೂ ಸಭಾ ಪ್ರವೇಶಾದಿಗಳಲ್ಲಿ ನಾವು ಸ್ವಲ್ಪ ವೈಶಮ್ಯವಾಗಿ ನಡಕೊಳ್ಳುತ್ತಾ ಇರುವಲ್ಲಿ ಇದೇ

ಸರ್ವಜಿತ್ಸಂವತ್ಸರದಲ್ಲಿ ಈ ರಾಜ್ಯದಲ್ಲಿ ಅನಾವೃಷ್ಟಿಯಾಗಿ ಪ್ರಜೆಗಳು ಬಹಳ ಕ್ಷೋಭಪಟ್ಟಿರು ಸಮಯದಲ್ಲಿ ಈ ಕಳೆದ ಭಾದ್ರಪದ ಶುಕ್ಲ ಚತುರ್ಥಿ ಗಣೇಶನ ಹಬ್ಬದ ಸಂಬಂ ಕರ್ತುಗಳ ಉಗ್ರಾಣದಲ್ಲಿ ಸಮಸ್ತರಿಗೂ ಫಲದಾನ ತಿದ್ದುವ ಸಮಯದಲ್ಲಿ ಇದೇ ನಗರ ಛತ್ತದ ಪೇಟೆಯಲ್ಲಿ ಶ್ರೀ ವೀರಮುಖ್ಯಪ್ರಾಣ ದೇವರ ಅರ್ಚಕರಾದ ನಿಮ್ಮಜಾ ರಾಮಚಂದ್ರಭಟ್ಟರು ನಮ್ಮ ಬ್ರಾಹ್ಮಣಸ್ತೋಮದ ಮಧ್ಯದಲ್ಲಿ ಬಂದು ಕುಳಿತುಕೊಂಡಿರು ಸಮಯದಲ್ಲಿ ನಾವು ಅದನ್ನು ಸೈರಿಸದೇ ಆ ಉಗ್ರಾಣದ ಶಿವಲಿಂಗಪ್ಪನವರ ಸಹಾಯದಿಂದ ಆ ರಾಮಚಂದ್ರ ಭಟ್ರಿಗೆ ಎಣಿಸಿ ಅವಮಾನದ ಮಾತುಗಳನ್ನು ಹೇಳಿದೆ

ಅವರು ಅದನ್ನು ಕೇಳಿ ಬಹಳ ಅವಮರ್ಯಾದೆಯಿಂದ ದುಃಖಪಟ್ಟು ಮನೆ ಹೋಗಿ ತಾನು ಪೂಜೆಮಾಡುವ ಶ್ರೀ ವೀರಹನುಮಂತದೇವರ ಸನ್ನಿಧಿಯಲ್ಲಿ ದಿನತ್ರಂ ಪರ್ಯಂತ ಉಪವಾಸದಿಂದ ಭೂಮಿಯಲ್ಲಿ ಮಲಗಿದರು. ಆ ಸಮಯ ಕರ್ತುಗ ಶರೀರದಲ್ಲಿ ಕೈಕಾಲುಸಂಧುಗಳಲ್ಲಿ ಸಹಾ ಬಹಳ ಉರಿಸಂತಾಪವಾಗಿ ಬಹಳ ಗಾಬ್ರಿಯಾ ಔಷಧೋಪಚಾರ, ದೇವತಾರಾಧನೆ ಮುಂತಾಗಿ ಮಾಡಿಸುತ್ತಿರುವಲ್ಲಿ ಮತ್ತು ಸಂತಾ ಹೆಚ್ಚಾಗಿ ಜೋಯಿಸರಲ್ಲಿ ಪ್ರಶ್ನೆ ನೋಡಿದರೂ – ಗೊತ್ತಾಗದೇ ಸರ್ವಜನರು ಬಹ ಗಾಬ್ರಿಯಾಗಿ ಇದ್ದ ಸಮಯದಲ್ಲಿ ಕರ್ತುಗಳಿಗೆ ಎರಡನೇ ದಿವಸ ಅರೆ ನಿದ್ರೆ ಸಮಯ ಒಂದು ಮಂಗ ಎದೆಯ ಮೇಲೆ ಕುಳಿತಿರುವಂತೆ ತೋರಿ ಎಚ್ಚರವಾಗಿ ಅದರ ಕಾರಣ ಗೊತ್ತಾಗದೇ ಆ ವಿಧದ ರೂಪವನ್ನು ಪುನಃ ಪುನಃ ಅರೆನಿದ್ರೆಯಲ್ಲಿ ನೋಡಿ ಮಾರನೆ ದಿನ ಎಲ್ಲರನ್ನು ಕರೆ ಕಳಿಸಿ ಈ ವೃತ್ತಾಂತ ಹೇಳಿದ್ದಕ್ಕೆ ಆ ಶಿವಲಿಂಪನು ಭಯಭೀತನಾ ಕರ್ತುಗಳ ಮುಂದೆ ಆ ರಾಮಚಂದ್ರ ಭಟ್ರೇಗೆ ಸಭೆಯಿಂದ ನಮ್ಮ ಜನರು ಎಳಸಿ ವರ್ತಮಾನವನ್ನು ಅರಿಕೆ ಮಾಡಿಕೊಂಡನು. ಅದನ್ನು ಕೇಳಿ ಕರ್ತುಗಳು ಅದೆ ಸಂಶಯದಿಂದ ರಾಮಚಂದ್ರ ಭಟ್ಟರಿಗೆ ಕರೆ ಕಳುಹಲಾಗಿ ಅವರು ಶೋಕದಿಂದ ದಿನತ್ರಯ ಪರ್ಯಂತ ಮೌನ ಉಪವಾಸವಾಗಿ ಶಯನ ಮಾಡಿದವರು ಮಾತನಾಡಲಿಲ್ಲಾ. ಕರ್ತುಗಳ ಅದನ್ನೆಲ್ಲಾ ಸವಿಸ್ತಾರವಾಗಿ ಕೇಳಿ ಬಹಳ ಘಾಬ್ರಿಯಿಂದ ವಿನಾಯಕಮಲ್ಯರನ ಕರೆಸಿಕೊಂಡು ತಾವೇ ಆ ವೀರಹನುಮಂತ ದೇವಸ್ಥಾನಕ್ಕೆ ಹೋಗಿ ಬಹಳ ನಮ್ರತೆಯಿಂ ಆ ರಾಮಚಂದ್ರ ಭಟ್ಟರಿಗೆ ಕ್ಷಮಾಪಿಸಿ ವಿಭವದಿಂದ ದೇವಡಿಯಲ್ಲಿ ಕರೆತಂದು ಬಂಗಾರ ಹರಿವಾಣದಲ್ಲಿ ಸಮಸ್ತ ಬ್ರಾಹ್ಮಣರ ಸಭೆಯಲ್ಲಿ ಐದು ಫಲಗಳನ್ನು ಕೊಟ್ಟು ಬೇ ವಸ್ತ್ರಾದಿಗಳಿಂದಲೂ ಸಂತೋಷಪಡಿಸಿ ಆ ಕ್ಷಣವೇ ಆ ಶಿವರಾಮಯ್ಯನಿ ಪ್ರಧಾನತ್ವಾಧಿಕಾರದಿಂದ ತಪ್ಪಿಸಿ ವಿನಾಯಕ ಮಲ್ಯರಿಗೆ ಆ ಅಧಿಕಾರವನ್ನು ಕೊಟ ಆ ಮೇಲೆ ಈ ತನ್ನ ರಾಜ್ಯದಲ್ಲಿ ಎರಡು ಮೂರು ವರುಶದ ಇತ್ತಲಾಗಿ ಮ

ಡಿಮೆಯಾಗುತ್ತಾ ಬಂದು ಈ ವರುಷ ಕ್ಷಾಮ ಬಂದಿರುತ್ತದೆ. ಇದು ಯಾವ ಕಾರಣದಿಂದ ರಬಹುದು ಎಂತ ಅಪ್ಪಣೆ ಕೊಟ್ಟದ್ದಕ್ಕೆ ಆ ಮಲ್ಕರು ಈ ರಾಮಚಂದ್ರ ಭಟ್ಟರ ದೃಷ್ಟಾಂತದಿಂದಲೇ ಶ್ರೀಮತ್ಕಾಶೀಮಠದ ಯಾದವೇಂದ್ರ ತೀರ್ಥ ಸ್ವಾಮಿಗಳವರಿಂದ ಮತ್ತು ಗೋಕರ್ಣಮಠದ ಶ್ರೀ ಜೀವೋತ್ತಮ ತೀರ್ಥ ಸ್ವಾಮಿಗಳವರಿಂದ ಸಹಾ ಈ ವಿಧ ಕ್ಷಾಮ ಬಂದಿರಬಹುದು ಎಂತ ತರ್ಕಿಸಿ ಮೂರು ವರ್ಷದ ಹಿಂದೆ ಅವರು ಬಹಳ ಅವಮರ್ಯಾದೆಯಿಂದ ಹೋಗಿರುತ್ತಾರೆ ಅವರು ಎಲ್ಲಿರುತ್ತಾರೆಂಬ ನಿಶ್ಚಯವಿಲ್ಲಾ ಎಂತ ಅರಿಕೆ ಮಾಡಿಕೊಂಡು ಆಮೇಲೆ ದೊರೆಗಳ ಅಪ್ಪಣೆಯಿಂದ ಅವರು ಇರುವ ಸ್ಥಳವನ್ನು ಶೋಧಿಸಿ ನಗರದ ಸಂಸ್ಥಾನಕ್ಕೆ ದಯಮಾಡಿಬರಬೇಕಾಗಿ ಅರಸುಗಳ ಭಿನ್ನಹಾ ಪತ್ರ ಸಮೇತ ತಾವು ಭಿನ್ನಹಾ ಲಪತ್ರ ಬರಕೊಂಡದ್ದಕ್ಕೆ ಉಭಯ ಶ್ರೀ ಪಾದಂಗಳವರು ಪ್ರಾಕು ನಮ್ಮ ಶಿಷ್ಯ ಜನರಿಗೆ ನಿರ್ಬಂಧ ಪಡಿಸಿ ಅಪರಾಧ ನಿರ್ಣಯ್ಸು ಕೆಲವು ಅಪರಾಧ ದ್ರವ್ಯವನ್ನು ತೆಗೆದುಕೊಂಡು ಯಲ್ಲಾಜಿಹತ್ತ್ರದವರಿಗೆ ಯಂತಾ ಯಾವಪ್ರಕಾರವಾಗಿ ಭಿನ್ನೋತ್ತ್ರಳೆ ಭಾಷಾಲಪತ್ರ ಬೇರೆ ಜನರು ಬರಸಿಕೊಂಡಿರುತ್ತಾರೋ ಅದೇ ಪ್ರಕಾರವಾಗಿ ಅದೇ ಜನರು ಅದರ ದ್ವಿಗುಣ ಅಲಪರಾಧವನ್ನು ನಿರ್ಣಯಿಸಿ ಅದರ ದ್ವಿಗುಣ ಅಪರಾಧವನ್ನು ಕೊಟ್ಟು ಈ ಎಲ್ಲಾ ನಮ್ಮ ಜನರ ಆದ್ಯಂತ ವೃತ್ತಾಂತವನ್ನು ಪ್ರಧಾನವಾಗಿ ಭಿನ್ನೋತ್ತ್ರಳೆ ಭಾಷಾಪತ್ರ ಬರಸಿ ಕೊಟ್ಟರೆ ನಾವು ಆ ರಾಜಧಾನಿಗೆ ತೆರಳಿ ಬಂದೇವು ಇಲ್ಲವಾದರೆ ಸರ್ವಥಾ ಬರಲಿಕ್ಕೆ ಇಲ್ಲಾ ಎಂತ ಆಜ್ಞಾಪತ್ರ ಬರ್ದದ್ದಕ್ಕೆ ಈಗ ಶ್ರೀ ಶಿವಪ್ಪನಾಯಕರು ನಮ್ಮೆಲ್ಲರನ್ನು ಕರಸಿ ಪುನಶ್ಚ ಆದ್ಯಂತ ವೃತ್ತಾಂತವನ್ನು ಹೇಳಿ ಪ್ರಾಕು ಆ ಕೊಂಕಣಜನರಿಂದ ನೀವು ಗೋಕರ್ಣದಲ್ಲಿ ಭಿನ್ನೋತ್ತ್ರಳೆ ಭಾಷಾಪತ್ರಬರಕೊಡಬೇಕು. ಕೊಡದೇ ಇದ್ರೆ ಆ ತಕ್ಕ ಶಿಕ್ಷೆಯಾಗಿ ಮುಂದೆ ನಿಮ್ಮ ನಿಮ್ಮ ಉತ್ಪತ್ತಿಗಳು ಜಂಮು ಮಾಡಲ್ಪಟ್ಟವು ಎಂತ ಅಪ್ಪಣೆ ಕೊಟ್ಟ ಕಾರಣ ಈಗ ಬಂದಿರುವ ರಾಜ್ಯದ ಕ್ಷಾಮದ ಭಯದಿಂದ ಮತ್ತು ನಿಷ್ಕಾರಣವಾಗಿ ದ್ರವ್ಯಲೋಭದಿಂದ ಇವರಿಗೆ ನಾನಾವಿಧ ಉಪದ್ರಗಳನ್ನು ಕೊಟ್ಟು ನಿಮಗೆ ದಣಿಸಿ ಪಾತಕ ಭಯದಿಂದ ಸಹಾ ಈ ಭಿನ್ನೋತ್ತ್ರಳೆ ಭಾಷಾಪತ್ರ ನಾವು ಬರಕೊಳ್ಳಲಿಕ್ಕೆ ಕಾರಣವಾಯಿತು. ಇದರಲ್ಲಿ ಹಿಂದೆ ತೋರಿಸಿದ ಪ್ರಕಾರ ನಿಮಗೆ ಪ್ರಾಕು ನಾವು ಇಪ್ಪತ್ತನಾಲ್ಕು ಲಕ್ಷ ವರಹಾನ್ನು ಅಪರಾಧ ನಿರ್ಣಯ್ಸಿ ಅದರಲ್ಲಿ ಮೂರು ಸಾವಿರ ವರಹಾನ್ನು ನಗದಾಗಿ ತೆಗೆದುಕೊಂಡು ಕ್ರಮದಿಂದ ಉಳಿದ ವರಹಾನ್ನು ವಸೂಲುಮಾಡ್ಸಿಕೊಡಬೇಕಂತ ನಿರ್ಣಯ ಬರೆದಮೇರೆಗೆ ಈಗ ಅದಕ್ಕೆ ದ್ವಿಗುಣವಾಗಿ ನಾಲ್ವತ್ತೆಂಟು ಲಕ್ಷ ವರಹಾನ್ನು ನಿಮಗೆ ನಾವು ಅಪರಾಧ ಕೊಡುವುದೆಂದು ನಿರ್ಣಯಿಸಿಕೊಂಡು "ರಾಜಾ ಪ್ರತ್ಯಕ್ಷ ದೈವತಂ" ಹೀಗೆ ಪ್ರತ್ಯಕ್ಷ ದೇವತಾಸ್ವರೂಪಿಗಳಾದ ಶ್ರೀ ಶಿವಪ್ಪ ನಾಯ್ಕರ ಮುಂತಿಟ್ಟು

ಆರುಸಾವಿರವರಹಾನ್ನು ನಗದಾಗಿ ನಿಮಗೆ ಕೊಟ್ಟಿರುತ್ತೇವೆ. ಉಳಿದ ವರಹಾನ್ನು ಕ್ರಮದಿಂ ನಾವು ವಸೂಲು ಮಾಡಿಕೊಡುತ್ತೇವೆ. ಇನ್ನು ಮುಂದೆ ನೀವು ಬ್ರಾಹ್ಮಣರಲ್ಲವೆಂದೂ ಮತ್ಸ್ಯಾಹಾರಿಗಳೆಂದೂ ವಾಣಿಜ್ಯವೃತ್ತಿಯವರೆಂದೂ ಸಹಾ ಯಾವದೊಂದು ದೂಷಣ ನಾವು ನಿಮಗೆ ಹೇಳಲಿಕ್ಕೆ ಇಲ್ಲಾ – ಒಂದಾದರೂ ದೂಷಣೆಯನ್ನು ಮುಂದೆ ನಿಮಗ ಹೇಳಿದ ಪಕ್ಷದಲ್ಲಿ – ಕಾಶಿ ರಾಮೇಶ್ವರ ಗೋಕರ್ಣಾ ಮುಂತಾದ ಸ್ಥಳಗಳಲ್ಲಿ ಹೋಗಿ ಬ್ರಹ್ಮಹತ್ಯಾಗೋಹತ್ಯಾ ಸುರಾಪಾನ ಸ್ವರ್ಣಸ್ತೇಯ ಮಾಡಿದ ಪಾತಕಕ್ಕೆ ನಾವು ಒಳಗಾಗುತ್ತೇವೆ. ನಮ್ಮಲ್ಲಿ ಕಾಮ್ಯದಿಂದ ಅಭ್ಯಾಸದಿಂದ ಶಕ್ತಿ ಪೂಜೆ ಎಂಬ ಉಪಾಧಿಯಿಂದ ಕೆಲವರು ಸುರಾಪಾನಾದಿಗಳನ್ನು ಹ್ಯಾಗೆ ಮಾಡುತ್ತಾರೋ ಅದೇ ಪ್ರಕಾರ ನಿಮ್ಮಲ್ಲಿ ಕೆಲವರು ಸಾರಸ್ವತ ಋಷಿ ಸಾಂಪ್ರದಾಯವೆಂದು ಮತ್ತು ಕೆಲವರು ಪರಶುರಾಮ ದೇವರು ಪಂಕ್ತಿಯಲ್ಲಿ ಆಪೋಶನ ಕೊಡುವ ಸಮಯ ಒಬ್ಬ ಪ್ರಧಾನ ಬ್ರಾಹ್ಮಣನ ಹಸ್ತದಲ್ಲಿ ಕೊಟ್ಟ ಆಪೋಶನೋದಕದಲ್ಲಿ ಮತ್ಸ್ಯಬಂದದನ್ನು ಆ ಪರಶುರಾಮ ದೇವರ ಅಪ್ಪಣೆಯಿಂದ ಆ ಬ್ರಾಹ್ಮಣನು ಆಪೋಶನದೊಡನೆ ಗ್ರಹಣ ಮಾಡಿದನೆಂಬ ಕಾರಣದಿಂದ ಸಹಾ ಮತ್ಸ್ಯಭಕ್ಷಣ ಮಾಡತಕ್ಕದ್ದು ಅದೆ. ಶಿಷ್ಯರು ಆ ಪ್ರಕಾರ ಮಾಡುವದಿಲ್ಲಾ ಎಂಬುದನ್ನು ನಾವು ಒಪ್ಪಿಕೊಂಡಿರುತ್ತೇವೆ. ಮತ್ತು ಸುರಪಾನಕ್ಕೆ ಅಭ್ಯಾಸಾದಿಗಳಲ್ಲಿ ಹ್ಯಾಗೆ ಪ್ರಾಯಶ್ಚಿತ್ತವಿಲ್ಲವೋ ಈ ಮತ್ಸ್ಯಭಕ್ಷಣೆಗೆ ಅಭ್ಯಾಸಾದಿಗಳಿದ್ದಾಗ್ಯೂ ಇದಕ್ಕೆ ಪ್ರಾಯಶ್ಚಿತ್ತ ಉಂಟಾದ್ರಿಂದ ಆ ಸುರಾಪಾನದ ಪ್ರಕಾರ ಈ ಮತ್ಸ್ಯಭಕ್ಷಣವು ಮಹಾ ಜಲಪಾತಕವಲ್ಲಾ ಎಂಬುದನ್ನು ನಾವು ಒಪ್ಪಿಕೊಳ್ಳುತ್ತೇವೆ. ಮತ್ತು ಈ ವಿಧವಾದ ಪರಿಯುಷಿತಾನ್ನ ಭೋಜನ ಪಲಾಂಡು ಭಕ್ಷಣ ಗ್ರಾಂಜನಭಕ್ಷಣಾ ಮುಂತಾದ ದೂಷಣೆಗಳು ಹೆಚ್ಚಾಗಿ ನಮ್ಮ ಜನರಲ್ಲೆ ಇರುತ್ತದೆಂತ ನಾವು ಒಪ್ಪಿಕೊಂಡಿದ್ದೇವೆ. ಮತ್ತು ನಿಮ್ಮ ಗೋವೆ ದೇಶದಲ್ಲಿ ನಿಮಗಿದ್ದ ಬ್ರಹ್ಮವೃತ್ತಿಗಳನ್ನು ಪುರ್ತುಗಾಲದ ಫಿರಂಗಿಯವರು ಅಪಹರಿಸಿ ಬ್ರಹ್ಮಕರ್ಮಗಳನ್ನು ಮಾಡಲಿಕ್ಕೆ ಬಹಳ ನಿರ್ಬಂಧಪಡಿಸಿದ್ರಿಂದ ನೀವು ಅಧ್ಯಯನಾದಿಗಳನ್ನು ಬಿಟ್ಟು ಹೆಚ್ಚಾಗಿ ವಾಣಿಜ್ಯವೃತ್ತಿಯಿಂದ ಜೀವನ ಮಾಡಿ ಕೆಲವು ವರ್ಶಪರ್ಯಂತ ನಮ್ಮ ಜನ್ರುಗಳಿಂದ ಪುರೋಹಿತ್ಯ ಮಾಡಿಸಿಕೊಂಡು ಬಂದದ್ದಲ್ಲದೇ ಸ್ವಾಭಾವಿಕವಾಗಿ ನೀವು ವಾಣಿಜ್ಯವೃತ್ತಿಯವರಲ್ಲಾ, ಬ್ರಾಹ್ಮಣರೇ ಸರಿ. ಆಪದ್ಧರ್ಮವಾಗಿ ನೀವು ವಾಣಿಜ್ಯವೃತ್ತಿ ಮಾಡಿದರೂ ಕೂಡ ದೋಶಕರವಲ್ಲ ಆ ಪ್ರಕಾರ ಹಿಂದೆ ಭಾಗ್ಯನಗರದ ಮ್ಲೆಂಛರ ನಿರ್ಬಂಧದಿಂದ ಕೆಲವು ವರ್ಶಪರ್ಯಂತ ಅಲ್ಲಿಯ ಬ್ರಾಹ್ಮಣರು ಇದೇ ವಿಧದ ವೃತ್ತಿಯಿಂದ ಜೀವಿಸಿಕೊಂಡಿದ್ದರು. ಈಗಲೂ ಪ್ರಾಯೇಣ ಆವಾವ ದೇಶದಲ್ಲಿ ಬ್ರಾಹ್ಮರು ಪ್ರವೃತ್ತಿಯನ್ನು ಬಿಟ್ಟು ಪರವೃತ್ತಿಯಿಂದ ಜೀವಿಸಿಕೊಂಡಿರುತ್ತಾರೆ. ಅದು ಕಾಲಗತಿಯಿಂದ ದೂಶಣಕರವಲ್ಲಾ

ಎಂದು ನಾವು ಒಪ್ಪಿಕೊಂಡಿರುತ್ತೇವೆ. ಕೃತಾಯುಗದ್ವಾಪರಯುಗದಲ್ಲಿ ಸಮಸ್ತಬ್ರಾಹ್ಮಣರ ಕುಲಗಳಲ್ಲಿ ಈ ವಿಧದಲ್ಲಿ ಸಾಧಾರಣ ದೂಶಣಗಳು ತೋರಿಬರುತ್ತದೆ ಎಂಬುದನ್ನು ನಾವು ಒಪ್ಪಿರುತ್ತೇವೆ.

"ಕಸ್ಯದೋಷಃ ಕುಲೇನಾಸ್ತಿ ವ್ಯಾಧಿನಾ ತೇ ನಪೀಡಿತಾಃ।
ವ್ಯಸನಂ ತೇನ ನಪ್ರಾಪ್ತಂ ಕಸ್ಯ ಸೌಖ್ಯಂ ನಿರಂತರಂ ॥"

ಮತ್ತು ಈ ಕಾಲಪರ್ಯಂತವಾಗಿ ನಮ್ಮ ನಮ್ಮ ಅಧಿಕಾರಾದಿ ಬಲದಿಂದ ನಿಮಗೆ ಸಭಾದಿಗಳಲ್ಲಿ ಅವಮರ್ಯಾದೆಮಾಡಿ ನಾವು ಗೌಣ ಬ್ರಹ್ಮಹತ್ಯಪಡಕೊಂಡದ್ದನ್ನು ಪರಿಹರಿಸಬೇಕಾಗಿ ಪ್ರಣಿಪಾತರೂಪ ಪ್ರಾಯಶ್ಚಿತ್ತಾಚರಣಪೂರ್ವಕ ಪ್ರಾರ್ಥಿಸಿಕೊಳ್ಳುತ್ತೇವೆ.

"ಆಜ್ಞಾಭಂಗೋನರೇಂದ್ರಾಣಾಂ । ವಿಪ್ರಾನಾಂ ಮಾನಖಂಡನಂ ।
ಪ್ರಥಕ್ ಶಯ್ಯಾ ಚ ನಾರೀಣಾಂ ಅಶಸ್ತ್ರ ವದ ಉಚ್ಯತೇ ।"

ಅದನ್ನು ಕ್ಷಮಿಸಿಕೊಂಡು ಆ ಪಾತಕದಿಂದ ನಮಗೆ ವಿಮೋಚನೆ ಪಡಿಸಿ ಶ್ರೀ ಜನಾರ್ದನ ಕ್ಷೇತ್ರದಲ್ಲಿ ತಪೋ ವಿಶಯದಲ್ಲಿ ಪ್ರವೃತ್ತರಾದ ಶ್ರೀ ಯಾದವೇಂದ್ರ ತೀರ್ಥ ಶ್ರೀಪಾದಂಗಳವರನ್ನು ತಥಾ ರೇವಣ ಕ್ಷೇತ್ರದಲ್ಲಿ ತಪಸ್ಸು ಮಾಡುವ ಶ್ರೀ ಜೀವೋತ್ತಮ ತೀರ್ಥ ಶ್ರೀಪಾದಂಗಳವರನ್ನು ಈ ನಗರದ ರಾಜಧಾನಿಗೆ ಬರುವ ಹಾಗೆ ಮಾಡಿ ಈ ದೇಶ ಕ್ಷೇಮಪಡಿಸಬೇಕಾಗಿ ಸಹಾ ಪ್ರಾರ್ಥಿಸಿಕೊಳ್ಳುತ್ತೇವೆಂದು ಬರಶಿಕೊಟ್ಟು ಬಿನ್ನೊತ್ತ್ರಳೆ ಭಾಷಾಪತ್ರ.

ಇದಕ್ಕೆ ಸಾಕ್ಷಿಗಳು
ಆದಿತ್ಯ ಚಂದ್ರಾರನಿಲೋನಲಶ್ಚ ದೌರ್ಭೂಮಿ ರಾಪೋಹೃದಯಂ ಮನಸ್ಚ
ಅಹಶ್ಚ, ರಾತ್ರಿಶ್ಚ ಉಭೇಚ ಸಂಧ್ಯೇ ಧರ್ಮಶ್ಚ ಜಾನಾತಿ ನರಶ್ಚವೃತ್ತಂ ॥
ಇತ್ಯಲೌಕಿಕ ಸಾಕ್ಷಿಣಃ ॥

ಇದಕ್ಕೆ ನೀವೆಲ್ಲರೂ ಬರಶಿಕೊಳ್ಳುವವರಾದ್ರಿಂದ ನಾವೆಲ್ಲರೂ ಬರಕೊಡು ವಂಥವರಾದ್ರಿಂದ ಲೌಕಿಕ ಸಾಕ್ಷಿಗಳು ಹಾಕಲಿಲ್ಲ. ಅನೇಕ ಜನರಾದ್ರಿಂದ ಅವರವರ ಹಸ್ತಾಕ್ಷರಗಳ ರುಜು ಹಾಕಲಿಲ್ಲಾ. ಇದು ಸತ್ಯವೆಂಬ ನಿಶ್ಚಯವು ಕರ್ತುಗಳಾದ ಶ್ರೀ ಸದಾಶಿವಪ್ಪನಾಯ್ಕರ ಹಸ್ತಾಕ್ಷರದ ಶ್ರೀ ಸದಾಶಿವ ಎಂಬ ದಸ್ಕತು ಮ್ಹೊರದಿಂದಲೇ ತಿಳಕೊಳ್ಳಬೇಕಾದ್ದು. ಈ ಕೂಡಿದ ಸಮಸ್ತ ಜಗರ್ತುದವರ ಸಮ್ಮತಿಯಿಂದ ಈ ಭಿನ್ನೊತ್ತ್ರಳೇ ಭಾಷಾಪತ್ರ ಬರೆದಾತ ಶಿರೂರಮಾಗಣೆ ಶ್ಯಾನಭಾಗ ಸುಬ್ರಾಯನು. ಯಥಾಪ್ರತಿ ನಕ್ಲು. ಇಲ್ಲಿ ತೋರುವ ಶಾನಭಾಗ ಸುಬ್ರಾಯನ ಸ್ವಹಸ್ತಾಕ್ಷರದ ರುಜು. ಹಾಕಿದ್ರೆ ಮುಂದೆ

ಶ್ರೀ ಸದಾಶಿವಪ್ಪನಾಯ್ಕರ ಮೊಹರು ವತ್ತಿದ್ದಿರುತ್ತದೆ. ಮತ್ತು ಶ್ರೀ ಸದಾಶಿವ ಎಂಬ ಹಸ್ತಾಕ್ಷರ ಕನ್ನಡ ಬರಹಾ ಇರುತ್ತದೆ.

ಶರಾ – ಮೇಲ್ಕಾಣುವ ಭಾಷಾಪತ್ರದಲ್ಲಿ ನಮೂದಿಸಿರುವ ಕಾಶೀಮಠ ಯಾದವೇಂದ್ರ ತೀರ್ಥರೆಂದರೆ – 1ನೇ ಗುರುಗಳಾದ ಯಾದವೇಂದ್ರ ತೀರ್ಥ ಶಿಷ್ಯರಾದ ಶ್ರೀ ಕೇಶವೇಂದ್ರ ತೀರ್ಥರ 2ನೇ ಶಿಷ್ಯರಾದ ಯಾದವೇಂದ್ರ ತೀರ್ಥರೇ ಆಗಿರಬಹುದು. ಗೋಕರ್ಣ ಮಠದ ಜೀವೋತ್ತುಮ ತೀರ್ಥರೆಂದರೆ ಆ ಮಠದ 1ನೇ ಗುರುಗಳಾದ ನಾರಾಯಣ ತೀರ್ಥರ ಶಿಷ್ಯ ಅಣುಜೀವೋತ್ತುಮ ತೀರ್ಥರಾಗಿರಬಹುದು. ದಾಕ್ಲೆಯಲ್ಲಿ ಅಣುಜೀವೋತ್ತುಮ ತೀರ್ಥರೆಂತ ಎಲ್ಲಿಯೂ ಕಾಣುವುದಿಲ್ಲ. "ಜೀವೋತ್ತುಮ ತೀರ್ಥ"ರೆಂತಲೇ ಇದೆ. ಈಗ ಆ ಮಠದವರು "ಜೀವೋತ್ತುಮ ಮಠ"ವೆಂತ ಬರೆಯುತ್ತಿರುವುದು ಕೂಡಾ ಈ 2ನೇ ಜೀವೋತ್ತುಮರ ಹೆಸರೇ ಆಗಿರುತ್ತದೆ ಹೊರತು 1ನೇ ಜೀವೋತ್ತಮರ ಹೆಸರಲ್ಲಾ ಎಂತ ತಿಳಿದು ಬರುತ್ತದೆ.

ಗೋಕರ್ಣ ಕೋಟಿತೀರ್ಥದ ತೆಂಕ ದಿಕ್ಕಿನಲ್ಲಿರುವ ಮಠವನ್ನು ಆಚವೆ ಹಾಲುಗೇರಿ ಮಠದ ಗೋವಿಂದ ಭಾರತಿ ಸ್ವಾಮಿಗಳ ಶಿಷ್ಯ ಬ್ರಹ್ಮಾನಂದ ಭಾರತಿ ಸ್ವಾಮಿಗಳು ಗೋಕರ್ಣ ನರಸಿಂಹ ಪಂಡಿತರಿಗೆ ಕೊಟ್ಟದ್ದನ್ನು ಆ ನರಸಿಂಹ ಪಂಡಿತರಿಂದ ಮಹಾಮಂಡಲೇಶ್ವರ ಸಾಳುವ ಕೃಷ್ಣದೇವರಸ ಒಡೆಯರು ಪಡಕೊಂಡು ಅದನ್ನು ಶಾಲಿವಾಹನ ಶಕ 1473ನೇ ಸಾಧಾರಣ ಸಂವತ್ಸರದ ಜೇಷ್ಠ ಬಹುಳ 5ಲ್ಲು ಲೋಟಾವಳಿ ಗ್ರಾಮದ ಸಾಂತಕಿಣಿಯವರ ಮಗ ನರಸ ಕಿಣಿಯವರಿಗೆ ಮೂಲಸಾಧನ ಪತ್ರ ಬರಕೊಟ್ಟರು. ಈ ಸ್ಥಳದಲ್ಲಿ ನರಸಕಿಣಿಯವರು ಮಠಕಟ್ಟಿಸಿ ಅದನ್ನು ಮತ್ತು ಬಲಪುಟದಲ್ಲಿ ಕಾಣುವ ಹೆಗ್ರೆ ಗ್ರಾಮದ ಭೂಮಿಯನ್ನು ಸಹಾ ವಪ್ಪಿಸ್ತೆವೆಂದು ಬಿನ್ನವತ್ತಳೆಯನ್ನು ಕೊಟ್ಟು ಆ ಹೆಗರೆಯ ಗ್ರಾಮವನ್ನು ಜೀವೋತ್ತುಮತೀರ್ಥವಡೇರಿಗೆ ಕೊಟ್ಟರು. ಈ ಮೂಲಸಾಧನದ ನಕ್ಲು ಗೋಕರ್ಣ ಮಠದಲ್ಲಿ ಇಲ್ಲ. ಮತ್ತು ನರಸಕಿಣಿಯರು ಜೀವೋತ್ತಮ ತೀರ್ಥರಿಗೆ ಬರಕೊಟ್ಟ ಸಾಧನವೂ ಇಲ್ಲಿ ಮೇಲೆ ಹೇಳಿದ ವಿವರ ಬರೆದಿಟ್ಟದ್ದು ಮಠದ ರೆಕಾರ್ಡಿನಲ್ಲಿ ಇದ್ದದ್ದನ್ನು ನೋಡಿ ಅದರ ವಿವರ ಇಲ್ಲಿ ಬರೆದದ್ದಾಗಿರುತ್ತದೆ.

# 23. ಶ್ರೀಮತ್ ಸುರೇಂದ್ರ ತೀರ್ಥರ ರಾಯಸಪತ್ರ

ಶ್ರೀರಾಮಚಂದ್ರಾಯ ನಮಃ

ಶ್ರೀ ಮತ್ಪರಮಹಂಸ ಪರಿವ್ರಾಜಕವರ್ಯರಾದ ಪದವಾಕ್ಯ ಪ್ರಮಾಣ ಪಾರಾವಾರ ಪಾರಂಗತ ಸರ್ವತಂತ್ರ ಸ್ವತಂತ್ರರಾದ ಶ್ರೀಮದ್ವೈಷ್ಣವ ಸಿದ್ಧಾಂತ ಪ್ರತಿಷ್ಠಾಪನಾಚಾರ್ಯರಾದ ಶ್ರೀಮದ್ ರಾಮಚಂದ್ರ ದೇವರ ದಿವ್ಯಶ್ರೀಪಾದ ಪದ್ಮಾರಾಧಕರಾದ ಶ್ರೀಮದ್ ಜಿತಾಮಿತ್ರ ವರ್ಯ ತೀರ್ಥ ಶ್ರೀಪಾದ ವಡೇರ ಕರಕಮಲಸಂಜಾತರಾದ ಶ್ರೀಮತ್ ರಘುನಂದನ ತೀರ್ಥ ಶ್ರೀ ಪಾದವಡೇರವರ ಕುಮಾರಕರಾದ ಶ್ರೀಮತ್ ಸುರೇಂದ್ರ ತೀರ್ಥ ಶ್ರೀಪಾದ ವಡೇರು

ನಮಗೆ ಪರಮಪ್ರಿಯಶಿಷ್ಯರಾದ ಅಂಗಿರಸ ಬಾರ್ಹಸ್ಪತ್ಯ ಭಾರದ್ವಾಜಾದಿ ಗೋತ್ರೋತ್ಪನ್ನರಾದ ಸಮಂತ್ರೋಕ್ತ ಷೋಡಷ ಸಂಸ್ಕಾರ ಯುಕ್ತರಾದ ಸಾಸಷ್ಟಿ ಅಂತ್ರೋಜಿ ಕೊಂಕಣ ದೇಶದಲ್ಲಿಹ ಕುಂಡೋದರಿ, ಕುಶಸ್ಥಲಿ, ಮಠಗ್ರಾಮ, ಶಂಖಾವಲೀ, ಬಾಣಾವಳಿ ಮುಂತಾದ ಶ್ರೀ ಪರಶುರಾಮ ಪ್ರತಿಷ್ಠಿತ ಅಗ್ರಹಾರ ವಾಸಿಗಳಾದ ಕೊಚ್ಚಿ, ಮಂಗಳೂರ, ಬಾರಕೂರ, ಬಸರೂರ, ಭಟ್ಕಳ, ಅಂಕೊಲೆ, ಸೋದೆ, ಬಿಳಗಿ, ಗೋಮಂತಕ ಮುಂತಾದ ಸ್ಥಳಗಳಲ್ಲಿಹ ಕೊಂಕಣದೇಶಸ್ಥ ಪಿದ್ವದ್ವೈದಿಕ ಬ್ರಾಹ್ಮಣ ಮಹಾಜನಂಗಳಿಗೆ ತಥಾ ಅಶೇಷ ಗೃಹಸ್ಥರುಗಳಿಗೆ – ಮಾಡುವ ನಾರಾಯಣ ಸ್ಮರಣೆ.

ಅದ್ಯ ಪ್ಲವ ಸಂ। ಮಾಘ ಬಹುಳ ೨ ವರೇಗೆ ಗುರು ದೇವತಾನುಗ್ರಹದಿಂದ ಸ್ನಾನಜಪ ದೇವಪೂಜಾ, ಪ್ರವಚನಾದಿಗಳು ಮಾಡಿಕೊಂಡು ನಿಮಗೆ ಶ್ರೇಯೋಭಿವೃಧ್ಯರ್ಥವಾಗಿ ಶ್ರೀ ರಘುಪತಿ ವೇದವ್ಯಾಸದೇವರ ಪ್ರಾರ್ಥನಾ ಮಾಡುತಾ ಯೋಗಕ್ಷೇಮದಲ್ಲಿದ್ದೇವೆ. ನಿಮ್ಮ ಸುಖಕ್ಷೇಮಾತಿಶಯಂಗಳಿಗೆ ಬರೆವುದು. ನಾವು ನಿಮ್ಮ ದೇಶಗಳಲ್ಲಿ ತೆರಳಿಬಂದಾಗ ಅಶೇಷರೀಗೆ ಮಂತ್ರ ಮುದ್ರಾಧಾರಣೆ ಮಾಡಿದ್ದೇವೆ. ತರುವಾಯ ನಿಮ್ಮ ದೇಶಸ್ಥರಾದ ಯಾದವೇಂದ್ರ ತೀರ್ಥವಡೆರಿಗೆ ಪಲ್ಲಕ್ಕಿ, ಉಭಯಚಾಮರ, ಶ್ವೇತಛತ್ರ, ಉಭಯಾಸನ, ಉಭಯದೀವಟಿಗೆ, ದವಳಶಂಖ, ತಾಳಗಳು ಮೊದಲಾದ ನಮ್ಮ ಸಂಸ್ಥಾನದಲ್ಲಿಹ ಅಶೇಷ ಮಾನಗಳು ಕೊಟ್ಟು ನಿಮ್ಮ ಅಶೇಷರಿಗೆ ಮಂತ್ರಮುದ್ರಾ ಧಾರಣೆ ಮಾಡುವ ರೀತಿ ಅಪ್ಪಣೆ ಕಳುಹಿಸಿದ್ದೇವೆ. ಅವರ ಹತ್ರ ಮಂತ್ರ ಮುದ್ರಾಧಾರಣೆ ಮಾಡಿಕೊಂಬೋದು. ನಾವು ನಮ್ಮ ಶಿಷ್ಯರು ಆ ದೇಶಗಳಲ್ಲಿ ಬಂದವೇಳ್ಯದಲ್ಲಿ ನಾವೇ ಮಂತ್ರಮುದ್ರಾಧಾರಣೆ ಮಾಡೇವು. ನಾವು ದೇಶಾಂತರಗಳಲ್ಲಿ ಇದ್ದಾಗ ಇವರು ಇವರ

ಶಿಷ್ಯರ ಕೈಯಿಂದ ಮಂತ್ರ ಮುದ್ರಾಧಾರಣೆ ಮಾಡಿಕೊಂಡು ಉತ್ತರೋತ್ತರ ನಡಿಸಬೇಕು. ಇವರಿಗೆ ಎಲ್ಯಾದರೂ ವಿವಾದ ಬಂದರೆ ನಾವೇ ಪರಿಹರಿಸಿಕೊಟ್ಟೇವು. ಇದೇ ರೀತಿ ನಮ್ಮ ಪಾರಂಪರೆಗೂ ನಡಿಸಿಕೊಂಡೆವು. ಶ್ರೀ ರಘುಪತಿವೇದವ್ಯಾಸದೇವರ ಪೂಜಾಮಾಡಿದವರಾಗಿ ಇದ್ದೀರಿ. ಸ್ವತಯೇವ ಪರಮಾಭಿಮಾನಿಗಳಾದವರೀಗೆ ವಿಶೇಷ ಬರೆವದೇನು ಅದೆ. ಗಂಧ–ಪ್ರಸಾದ ಮಂತ್ರಾಕ್ಷತೆ ಕಳುಹಿದ್ದೇವೆ. ತೆಗೆದುಕೊಂಬೋದು. ಇತಿ ನಾರಾಯಣ ಸ್ಮರಣೆ ದಸ್ಕತು.

ಹೀಗೆ ಅಸ್ಲಿನಲ್ಲಿ ಅದೆ. ಬರಹಾ ನಾಗರ ಅಸ್ಲು ಶ್ರೀ ಕಾಶಿ ಮಠದಲ್ಲಿ ಇದ್ದದ್ದನ್ನು ನೋಡಿ ಮೊಕಾಬಾಲೆ ಮಾಡಿದೆ – ಗೋಕರ್ಣ ಮಠದ ಪರ್ತಗಾಳಿಯಲ್ಲಿರ್ವ ರಿಕಾರ್ಡಿನಿಂದ ನಕ್ಲು ತೆಗೆದ ತಾ. ೨೨.೩.೧೯೪೭. ಅಸ್ಲು ದೇವನಾಗರಿ ಬರಹದಲ್ಲಿ ಉಂಟು. ಇದು ಶಾಲಿವಾಹನ ಶಕ ೧೪೬೩ನೇ ಪ್ಲವ ಸಂ। ಮಾಗ ಬ. ೨ ಆಗಿರುತ್ತದೆ.

ಕುಂಭಕೋಣ ಮಠದ ಪಾರಂಪರ್ಯದಲ್ಲಿ ಶ್ರೀ ಸುರೇಂದ್ರ ತೀರ್ಥರು ಸಮಾಧಿಯಾಗಿದ್ದು ೧೪೬೧ ವಿಕಾರಿ ಸಂ। ರದ ಪುಷ್ಯ ಶು ೧೨ ಎಂತ ಭಾವಿಸಿದ್ದಾರೆ. ಅದು ತಪ್ಪು; ಅವರ ನಿಧನ ತಿಥಿ ಜೇಷ್ಠ ಬ ೪ ಎಂತ ನಮ್ಮ ಗೋಕರ್ಣಮಠದ ದಾಕ್ಲೆಯಿಂದ ಕಾಣುತ್ತದೆ. ಸಂವತ್ಸರ ವಿಕಾರಿ ಅಲ್ಲಾ, ಶುಭಕೃತು ಅಥವಾ ಅದ್ರ ನಂತ್ರ ಆಗಿರಬೇಕು.

## 24. ಕುಂದಾಪುರ ವೆಂಕಟರಮಣ ದೇವರ ಭಂಡಾರಕ್ಕೆ

ಶಾಲಿವಾಹನ ಶಕ ವರುಶ 1779ನೇ ಕಾಲಯುಕ್ತಿ ಸಂವತ್ಸರ ಮಾರ್ಗಶಿರ
೪ ಲ್ಲು ಶ್ರೀಮದ್ವಸುಧೇಂದ್ರತೀರ್ಥ ಶ್ರೀಯವರು ಬರ್ಸಿಕೊಟ್ಟ ಧರ್ಮಸಾಧನಯೇಂದ್ರ
ಸನ್ನಿಧಿಯಲ್ಲಿ ನಡಿಯುವ ಅಮೃತಪಡಿಬಗ್ಗೆ ರು ೧೨. ನಂದಾದಿಪ್ತಿ ಬಗ್ಗೆ ರು
ಕಾರ್ತಿಕ ಶು ೧೨ ಗೆರು ೩ ಈ ಪ್ರಕಾರ ವಿನಿಯೋಗಗಳು. ನಡೆಯತಕ್ಕ ಬಗ್ಗೆ
ವು ಕುಂದಾಪುರ ಚಿಕ್ಕಯ್ಯ ಕಮ್ತಿ ಕೈಯ ನಳ ಸಂ। ರದ ಮಾಗ ಜ ೧೨ರಲ್ಲು.
ೂಲನಂಬ್ರ ೪ನೇ ಚಿಕ್ಕಯ್ಯ ಕಮ್ತಿ ಎಂಬ ವರ್ಗದ ಗ ೧೩ - ೪ ||| - ೧
ರೆಜಿನ ಭೂಮಿ ಬಾಗೈತು ಪೈಕಿ ತನ ಚಿಕ್ಕ ತಂದೆ ಮಗ ರಾಮಕೃಷ್ಣ ಕಮ್ತಿ ಹಿಶೆಗೆ
೭ ರಾಶಿ. || - ಜೆರೆಜು ಕೊಡಿಯಲ್ಲು ಇರುವ ತಪಶಿ ದೇವರ ಹಿತ್ಲು ಸ್ಥಳದ
ಕಿ ಚತುರ್ಗಡಿನಿಶಿಂ ದಾನ ಮುಡಿ ಗದ್ದೆ ಸ್ಥಳ ಮುಡಿ ನಿಗದಿ ಮಾಡಿದ ವರುಶ
ರ ನಗದು ಗೇಣಿ ರುಪಾಯಿ ೨೭ರ ಗ ೬೧೨॥ ಹುಟ್ಟುಳ್ಳ ಆಗುವ ತಳಗದ್ದೆ ಸ್ಥಳವನ್ನು
0 ನಾನೂರು ರುಪಾಯಿಗೆ ಠಸೆ ಕಾಗದದಲ್ಲು ಭೋಗ್ಯಾದಿ ಸಾಧನ 1 ಠಸೆ
ಗದಮೂಲಗೇಣಿ ಚೀಟು 1 ಸಾಹಾ ಈ ಯರ್ಡು ದಸ್ತ್ರೈವಜನ್ನು ಶ್ರೀ ದೇವರ
ಂಡಾರಕ್ಕೆ ಒಪ್ಪಿಸಿರುತ್ತೇವೆ. ಮತ್ತು ಈ ತಾರೀಕಿನಲ್ಲಿ ಸದ್ರಿ ಶೇಶಕಮ್ತಿಗೆ ಶ್ರೀ
ನಿಧಿಯಲ್ಲಿನಡೆಯುವ ವಿನಿಯೋಗಗೋಸ್ಕರ ತಪ್ಶಿಲು ಪಟ್ಟಿನಿಶಿಂವಾಪ್ಲು ಕೊಟ್ಟಿರುತ್ತೇವೆ.
ರಾಯಸ ಹತ್ತು ಸಮಸ್ತರು ನೋಡಿ ಅದ್ರಲ್ಲಿ ಬರೆದ ತಪ್ಶಿಲು ಮೇರೆಗೆ ವಿನಿಯೋಗಗಳು
ಡೆಯುತ್ತಾ ಬರಬೇಕು. ಸದ್ರಿ ಶೇಶಕಮ್ತಿಯ ಪ್ರಾಯ ಮುಂದಾಗಿ ದಸ್ತ್ರೈವಜು ಪ್ರಕಾರ
ಪಾಯಿ 400 ನಾನೂರು ರೂಪಾಯಿ ಇನ್ನು ಯೇಕ ಗಂಟಿನಲ್ಲಿ ಭಂಡಾರಕ್ಕೆ
ಪ್ಪಿಸಿಕೊಟ್ಟಲ್ಲಿ ಸದ್ರಿ ಭೋಗ್ಯಾದಿ ಸಾಧನ ಮುಲಗೇಣಿ ಚೀಟು ಸಾಹಾ ಹತ್ತು ಮಂದಿ
ದ್ದು ವಾಪ್ಸುಕೊಡ್ಸುವರು. ಸದ್ರಿ ಐವಜು ಬೇರೆ ಆಸ್ತಿ ಶಿಕ್ಕುವ ವರೇಗೆ ಇದ್ರ ಬಡ್ತಿ
ಂಶದಿಂದ ಶ್ರೀ ಸನ್ನಿಧಿಯಲ್ಲಿ ನಡೆಯುವ ವಿನಿಯೋಗಗಳು ನಡಿಸುತ್ತಾ ಬರಬೇಕು.
ಮದ್ವಸುಧೇಂದ್ರ ತೀರ್ಥ ರುಜು. ಶೇಶ ಕಮ್ತಿ ಸಾಕ್ಷಿ ರುಜು. ಕುಂದಾಪುರ ಭಂಡಾರಿ
ಂಜಪ್ಪನ ಸಾಕ್ಷಿ ಕುಂದಾಪುರ ನಾರಾಯಣ ನೈಕರ ಮಗ ವೆಂಕಟರಮಣನ ಬರಹಾದ
ರ್ಮಸಾಧನ = ಅಸ್ಲು ನೋಡಿ ಬರೆದ ಯಥಾನಕ್ಲು ತಾ. 11-2-1950ರಲ್ಲು -
ೂಹರು

## 25. ಶ್ರೀ ಯಾದವೇಂದ್ರ ತೀರ್ಥರಿಗೆ ಬರಕೊಟ್ಟ ತಮ್ಲಿಖನಾಮೆ

ಕಾಶೀಮಠದ ಕೇಶವೇಂದ್ರ ತೀರ್ಥರು ಕಾಶಿಯಲ್ಲಿ ಒಂದು ಸ್ಥಳವನ್ನು ತನ್ನ ಶಿಷ್ಯರಾದ ಯಾದವೇಂದ್ರ ತೀರ್ಥರಿಗೆ ಬಕ್ಷಿಸಮಾಡಿ ಕೊಟ್ಟು ಬರಕೊಟ್ಟ ತಮ್ಲಿಖನಾಮೆಯಲ್ಲಿ ಕಾಣುವ ವಿವರ

1. ಕಾಜಿ ಇನಾಯುತ್ತುಲ್ಲಾ ಇವರ ಮೊಹರು 2 ಶೇಖವಲಿಲಿಲ್ಲಾ ಇವರ ಮೊಹರು
2. ಬೈಕುಲಮಹಾಲಿನ ಮಾಚಿದಾರುಗಾ ದೊಸ್ತಬೇಗ ಇವರ ಮೊಹರು
3. ಶೇಕ ದೊಸ್ತ ಮಹಮ್ಮದ ಇವರ ಮೊಹರು. ಈ ನಾಲ್ಕು ಮೊಹರುಗಳುಳ್ಳದ್ದು

ತಾ. 4ನೇ ಶವ್ವಾಲ್ 1078ನೇ ಹಿಜರಿ (9–3–1668) ಶಾ. ಶ. 1589ನೇ ಪ್ಲವಂಗ ಸಂ। ಫಾಲ್ಗುಣ ಇದ್ರಲ್ಲಿ ಹೇಳುವದೇನಂದ್ರೆ ಪೂರ್ವ ರಾಜರಸ್ತೆ, ಪಶ್ಚಿಮ ರಘುಭಟ್ಟ ಇಬ್ನ ಭೀಮ ಭಟ್ಟ ಇವರ ಮನೆಯ ಪಾಗಾರ ಉತ್ತರ ರಾಜ ರಸ್ತೆ ಮತ್ತು ಬಾಗಿಲು, ದಕ್ಷಿಣ ಯಾದವ ಇಂದ್ರರ ಕಟ್ಟಡದ ಗೋಡೆ – ಈ ಚತುರ್ಗಡಿ ವಳಗಿನ ಪೂರ್ವ ಪಶ್ಚಿಮ ಇಲಾಹಿ ಗಜ 17 ಉತ್ರ ದಕ್ಷಿಣ ಇಲಾಹಿ ಗಜ 15ರ ಸ್ಥಳವನ್ನು "ರಾಮಭಟ್ಟ ಇಬ್ನ ರಾಮಭಟ್ಟ ವಲದ ನಾರಾಯಣ ಭಟ್ಟ ನಂತ್ರ ಸನ್ಯಾಸಿಯಾಗಿ ಕೇಶವತೀರ್ಥರೆಂದು ಕರೆಯಲ್ಪಡುವ ನಾನು ನಾಮದೇವ ಭಟ್ರ ಮಗಳು ಶಿವಾಯಿ ಹೆಂಗ್ಸು (ಅನಂತಭಟ್ರ ಹೆಂಡತಿ) ಇವಳಿಂದ ರು. 600ಕ್ಕೆ ಪಡೆದು ಅದರಲ್ಲಿದ್ದ ಹಳೇ ಕಟ್ಟಡವನ್ನು ತೆಗೆದು ಹೊಸ ಕಟ್ಟಡಗಳನ್ನು ಕಟ್ಟಿಸಿ ಅನುಭವಿಸಿ ಬರುತ್ತೇನೆ. ಸದ್ರಿ ಕ್ರಯಪತ್ರ ನಾನು ಇಟ್ಟಿರುವಲ್ಲಿ ಮಳೆನೀರು ಬಿದ್ದು ಹಾಳಾಗಿ ಹೋಗಿದೆ. ಅದಕ್ಕೆ ಕಾಜಿ ಸಾದುಲ್ಲಾರ ದಸ್ಕತು ಮೊಹರು ಇರುತ್ತಿತ್ತು. ಈ ಸಂಗ್ತಿ ಗಣೇಶಭಟ್ಟ ಬಿಂನ್ ಈಶ್ವರ ಭಟ್ಟ ಬಿನ್ ನರಸಿಂಹ ಇವರೀಗೆ ಗೊತ್ತುಂಟು ಮತ್ತು ಪಾವನ ಭಟ್ಟ ಇಬ್ನ ಅನಂತ ಭಟ್ಟ ವಲದ ಉನಿರಲಸ ಭಟ್ಟ ಇವರ ಸಾಕ್ಷಿ ಆ ದಸ್ತೈವಜಿನಲ್ಲಿತ್ತು.

ಅವರಿಬ್ಬರು ಅದನ್ನು ನಮ್ಮ ಮುಂದೆ ಒಪ್ಪಿಕೊಳ್ಳುತ್ತಾರೆ. ಕೇಶವತೀರ್ಥರೆಂಬವರು ಸದ್ರಿ ಸ್ಥಳ ಮತ್ತು ಕಟ್ಟಡಗಳನ್ನು ತನ್ನ ಶಿಷ್ಯರಾದ ಜಾದವ ಇಂದ್ರ (ಯಾದವೇಂದ್ರ) ಇಬ್ನಿ ತಮ್ಮಣ ಭಟ್ಟ ವಲದ ನಾರಾಯಣ ಭಟ್ಟ ಇವರೀಗೆ ಏನೂ ಪ್ರತಿಫಲ ಪಡಕೊಳ್ಳದೇ ಬಕ್ಷಿಸಾಗಿ ಕೊಟ್ಟು ಅದನ್ನು ಅವರ ಸ್ವಾಧೀನ ಬಿಟ್ಟುಕೊಟ್ಟಿರುವದಾಗಿ ನುಡಿಯುತ್ತಾರೆ.

ಕ್ಷಿಸ ಪಡದವರು ನಮ್ಮ ಮುಂದೆ ಬಂದು ಬಕ್ಷಿಸನ್ನು ಒಪ್ಪಿ ಸದ್ರಿ ಸ್ಥಳ ಮತ್ತು ನ್ನ ಸ್ವಾಧೀನ ಬಂತಾಗಿ ಒಪ್ಪಿಕೊಳ್ಳುತ್ತಾರೆ. ಗಣೇಶ ಭಟ್ಟು ಮತ್ತು ಪಾವನ ಭಟ್ಟರು ದಕ್ಕೆ ದಸ್ಕತು ಮಾಡಿದ್ದಾರೆ. ಇವರ ಚಹರೆ ಪ್ರಾಯ ಕುಡಾ ಉಂಟು – ಕೇಶವ ೀರ್ಥರ ಚಹರೆ _ ವಿವರ

ಗೋಧಿಯ ಬಣ್ಣ – ವಿಶಾಲವಾದ ಹಣೆ – ಉದ್ದವಾದ ದೇಹದವರು ದೂರ ದೂರವಾಗಿ ಹುಬ್ಬುಗಳು – ಆಡಿನಂತೆ ಕಣ್ಣುಗಳು ಎತ್ತರವಾದ ಮೂಗು ಲಬದಿಯ ಕೆನ್ನೆಯ ಮೇಲ್ಬದಿಯಲ್ಲಿ ಒಂದು ದೊಡ್ಡದಾದ ತಿಲ ಮೂಗಿನ ಮಧ್ಯದ ಮೇಲೆ ಒಂದು ತಿಳ ಮುಗಿನ ಯಡಬದಿ ಕಿನಾರೆಯಲ್ಲಿ ಒಂದು ತಿಲ ಇರುತ್ತದೆ. ಪ್ರಾಯ ವರ್ಶ 85.

ತಮಲಿಖನಾಮಾ ಕಾಜಿ ಸಯದ ಇನಾಮತುಲ್ಲಾ ಇವರ ಮುಂದೆ ತಾ ೪ ಮಾಹೆ ರಮಜಾನ 1081ನೇ ಹಿಜರಿ 28.1.1671

ಹನುಮಂತ (ನಂತ್ರ ಸನ್ಯಾಸಿಯಾಗಿ) ಯಾದವೇಂದ್ರ ತೀರ್ಥ ವಲದ ತಮಣಭಟ್ಟ ವಲದ ನಾರಾಯಣ ಭಟ್ಟ ಇವರು ಬನಾರಸದಲ್ಲಿ ಹಾಜರಾಗಿ ಹೇಳುವದೇನಂದ್ರೆ ಟ್ಟಡದ ವಿವರಣೆ ಮತ್ತು ಗಡಿಗಳು ಪೂರ್ವರಾಜರಸ್ತೆ ಪಶ್ಚಿಮ ರಘುಭಟ್ಟ ಇಬ್ನ ೀಮ ಭಟ್ಟ ಇವರ ಮನೆಯ ಮಧ್ಯದ ಪಾಗಾರ ಉತ್ತರ ರಾಜರಸ್ತೆ ಮತ್ತು ಬಾಗಿಲು ಕ್ಷಿಣ ಉಪೇಂದ್ರ ತೀರ್ಥರ ಕಟ್ಟಡದ ಗೋಡೆ ಈ ಮಧ್ಯೆಯಿರುವ ಪೂರ್ವಪಶ್ಚಿಮ ಲಾಹಿ ಗಜ ೧೭ ಉ.ದ. ಯಿಲಾಹಿ ಗಜ ೧೫ರ ಬ್ರಹ್ಮಾಘಾಟದಲ್ಲಿರುವ ಸ್ಥಳ ೂಡಾ ಕೇಶವ ತೀರ್ಥರೆಂತ ಕರೆಯಲ್ಪಡುವ ರಾಮಭಟ್ಟ ಇಬ್ನ ರಾಮಭಟ್ಟ ವಲದ ನಾರಾಯಣ ಭಟ್ಟ ಇವರ ಹಕ್ಕಿನದ್ದು – ಸದ್ರಿ ಕೇಶವ ತೀರ್ಥರು ನನಗೆ ತಮ್ಲಿಖನಾಮೆ ಮಾಡಿಕೊಟ್ಟರು. ಅದನ್ನು ನಾನು ಅಂಗಿಕರಿಸಿ ಸ್ವಾಧೀನ ಹೊಂದಿದ್ದೇನೆ. ಈಗ ನಾನೇ ಅದರ ಹಕ್ಕುದಾರನಾಗಿದ್ದೇನೆ. ಸದ್ರಿ ತಮ್ಲಿಖನಾಮೆಗೆ ನಿಮ್ಮ ಕೋರ್ಟಿನ ಮೊಹರು ಮತ್ತು ಶೇಖ ವಲಿಯುಲ್ಲಾ ಇವರ ಮೊಹರು ಜೈತಾಲ ಮಹಲಿನ ಮಾಜಿ ದಾರುಗಾ ದೋಸ್ತ ಬೇಗ ಇವರ ಮೊಹರು ಶೇಖ ದೊಸ್ತ ಮಹಮ್ಮದ ಇವರ ಮೊಹರು. ೇಕ ಅಂಜಿಯಾ ಮುಷ್ತಿಯಾನ) ಸಹಾ ಇರುವಂಥಾದ್ದು ಈಗ ನನ್ನ ಹತ್ರ ಉಂಟು ಂತ ತೋರಿಸಿದರು. ಅದನ್ನು ಮಂಜುರು ಮಾಡ್ಲಿಕೊಂಡು ಸದ್ರಿ ಹನುಮಂತ ಯಾನೆ ಯಾದವೇಂದ್ರ ತೀರ್ಥರು ಸದ್ರಿ ಸ್ಥಳವನ್ನು ನಾರಾಯಣ ಇಬ್ನ ವೆಂಕಟಭಟ್ಟ ವಲದ

ತಮಣ ಭಟ್ಟ ನಾರಾಯಣ ಭಟ್ಟ ಇವರೀಗೆ ಏನು ಪ್ರತಿಫಲ ಪಡಕೊಳ್ಳದೇ ಬಕ್ಷಿಸ ಮಾಡಿಕೊಟ್ಟದ್ದೆನಂತ ಹೇಳುತ್ತಾರೆ. ನಾರಾಯಣ ಭಟ್ರು ಹಾಜರಾಗಿ ಸದ್ರಿ ಬಕ್ಷಿಸ ನಾಮೆಯನ್ನು ನಮ್ಮ ಸಭೆಯ ಮುಂದೆ ಒಪ್ಪಿಕೊಂಡಿರುತ್ತಾರೆ ಮತ್ತು ಸದ್ರಿ ಸ್ಥಳ ತನಗೆ ಬಂತೆಂತ ಹೇಳುತ್ತಾರೆ. ಹನುಮಂತ ಉರ್ಫ ಯಾದವೇಂದ್ರರ ಬಂಣ ಗೋಧಿಯಂತೆ. ವಿಶಾಲವಾದ ಹಣೆ, ಥೋರವಾದ ಹುಬ್ಬುಗಳು, ಎತ್ತರವಾದ ಮೂಗು, ದೊಡ್ಡ ಕಣ್ಣಗಳು. ಬಲಗಡೆ ಹುಬ್ಬಿನ ಮೇಲೆ ಒಂದು ಸಣ್ಣ ಗೊಂಜು ಉಂಟು. ಪ್ರಾಯ ವರ್ಶ 42.

ಮೇಲೆ ಹೇಳಿದ ಯಾದವೇಂದ್ರ ತೀರ್ಥ ಬಿಂನ್ ತಮ್ಮಣ ಭಟ್ಟ ವಲದ ನಾರಾಯಣ ಭಟ್ಟ ಇವರು ರಘುನಾಥ ಭಟ್ಟ ವ ಭೀಮಾ ಭಟ ವಲದ ರಾಮೇಶ್ವರ ಭಟ್ಟ ಇವರಿಂದ ತಾ. 28 ಜಿಲಹಜ 1084ನೇ ಹಿಜರಿ ದಿವ್ಸ 19.04.1674 ಕೆಳಗಿ ಚತುರ್ಗಡಿವಳಗುಳ್ಳ ಸ್ಥಳವನ್ನುರುಪಾಯಿ 201ಕ್ಕೆ ಕ್ರಯಕ್ಕೆ ಪಡಕೊಂಡರು. ವಿವರ : ಉತ್ತರ ದಕ್ಷಿಣ ಗಜ 18 ಪೂರ್ವ ಪಶ್ಚಿಮ ಗಜ 9–4 ಒಟ್ಟು ಚಚೌಕ ಹಜ 166–8. ಬ್ರಹ್ಮಾಘಾಟದಲ್ಲಿರುವದು ಇದ್ರ ಗಡಿಗಳು. ಪೂರ್ವ ನಾರಾಯಣ ಭಟ್ಟ ಬಿಂನ್ ವೆಂಕಟಭಟ್ಟ ಇವರ ಮನೆ ಗೋಡೆ ವ ದುರ್ಗಾ ಮತ್ತು ಜವಾನಿ ಇಮಾರತಿ ಗೋಡೆ ಮತ್ತು ಗಜಾಧರ ಭಟ್ರ ಮನೆಗೋಡೆ ಸಹಾ ಉತ್ತರ – ಜಮೀನ ಜೀವನಿವ (ದುರ್ಗಾ ತಿಮ್ಮಾ ಭಟ್ರ ಮಗಳು) ದಕ್ಷಿಣ ನಾಲೆಯ ಜಮೀನು ದಿಲೇರಭಟ್ಟ ಇಬ್ನ ಶಿಮಾಧಭಟ್ಟ ಇವರ ಮನೆಗೋಡೆ ಸೆಟ್ಲ್‌ಮೆಂಟ್ ನಂಬ್ರ 5551ನೇ ಸ್ಥಳ.

ಇದ್ರ ದಕ್ಷಿಣಭಾಗ ಮತ್ತು 5565ರ ಉತ್ತರ ಭಾಗ ಕೂಡಾ 1ನೇ ಯಾದವೇಂದ್ರರು ಪಡಕೊರದ್ದಂತ ಕಾಣುತ್ತದೆ. ಸದರಿ ನಾರಾಯಣ ಭಟ್ಟ ಇಬ್ನ ವೆಂಕಟಭಟ್ಟರೇ ನಂತ್ರ ರಾಘವೇಂದ್ರತೀರ್ಥರ ಶಿಷ್ಯರಾಗಿ ದೇವೇಂದ್ರ ತೀರ್ಥರಾದರು. ತಾ. 28ನೇ ರಜಬ 1087ನೇ ಹಿಜರಿಯಲ್ಲಿ (21.10.1676) ನಾರಾಯಣ ಉರ್ಫ ರಾಘವೇಂದ್ರ ತೀರ್ಥ ರಾಘವೇಂದ್ರ ತೀರ್ಥ (ಇದ್ರಲ್ಲಿ ರಾಘವೇಂದ್ರ ತೀರ್ಥರ ಪ್ರಾಯ 25 ವರ್ಶ ಹಾಕಿದ್ದಾರೆ) ಇಬ್ನ ಕಿಶನ ಭಟ್ಟ ಇಬ್ನ ಸೊಇರ ಭಟ್ಟ ಇಬ್ನ ಮರ್ತು ಭಟ್ಟ ವಾಮನ ಭಟ್ಟ ಇಬ್ನ ರಾಜಕೃಷ್ಣ ಭಟ್ಟ ಇಬ್ನ ಬಲ್ಲಭ ಭಟ್ಟ ಇವರು ಸೊಇರ ಭಟ್ರ ಮಗಳು ಭಾಗೀರಥಿ ಅಮ್ಮನ ಮಗನಾಗಿರುತ್ತಾರೆ. ಇವರು ಕೆಳಗೆ ಕಾಣಿಸಿದ ಸ್ಥಳವನ್ನು ಬಕ್ಷೀಸ ಮಾಡಿದ್ದಾರೆ.

ಇದರ ಚತುರ್ಗತಡಿಗಳು ಬ್ರಹ್ಮಾ ಘಾಟದಲ್ಲಿರುವಂಥಾದ್ದು. ಪೂರ್ವ ಗಂಗಾ ನದಿಯ ಕಿನಾರಾ ಮತ್ತು ಘೋರಯಲ ಇಬ್ನ ಪು ರಣಯಲ ಇವರ ಧರ್ಮಾಶಾಲೆ ಪಶ್ಚಿಮ ನಾಲಾ ಶ್ರಿಮತ್ ಯಾದವೇಂದ್ರ ಇಬ್ನ ನಾರಾಯ ಭಟ್ಟ ಇವರ ಹವೇಲಿ ಮತ್ತು ಬ್ರಹ್ಮಾಘಾಟ್. ದಕ್ಷಿಣ ದುರ್ಸಾಘಾಟದ ಮೆಟ್ಲುಗಳು ಮತ್ತು ಘೋರಾಯಿಲ

ವರ ಧರ್ಮಸಾಲೆ ಸಹ. ಇದ್ರಲ್ಲಿರುವ ಇಟ್ಟಿಗೆಯ ಕಟ್ಟಡ ಕುಡಾ. S. No. 5555 ದಕ್ಷಿಣ ಭಾಗ ಇದು ಹಿಜರಿ 1035ನೇ ಸಫರ ತಿಂಗಳ ತಾ. 29ರಲ್ಲಿ ಉಪೇಂದ್ರ ೀರ್ಥರು ರು. 525ಕ್ಕೆ ಕ್ರಯಕ್ಕೆ ಪಡೆದ ಸ್ಥಳವಾಗಿರುತ್ತದೆ.

ತಾ. 27 ಸಫರ 1127 ಹಿಜರಿ (31.3.1715) ರಂದು ಮನೆಯನ್ನು ನಾರಾಯಣ ಟ್ಟ ಉರ್ಫ ದೇವೇಂದ್ರ ಸ್ವಾಮಿ ವಲದ ವೆಂಕಟ ಭಟ್ಟ ಇಬ್ನ ತಿರುಣ ಭಟ್ಟ ಇಬ್ನ ರುಣ ಭಟ್ಟ ಇವರೀಗೆ ಇಬ್ನ ವೆಂಕಟ ಭಟ್ಟ ವಲದ ತಮಸ್ ಭಟಯಿವರು ವಂದು ಮನೆಯನ್ನು ಬಕ್ಷಿಸ ಮಾಡಿಕೊಟ್ಟರು. ಚತುರ್ಗಡಿ, ಪೂರ್ವ ನಾರಾಯಣ ಭಟ್ರ ಮನೆ ಪಶ್ಚಿಮ ಬಿದೇಸರ ಭಟ್ರ ಮನೆ ಉತ್ತರ ಚುನಾಬಾಯಿ ದುರ್ಗಾ ಬಾಯಿ ಯಿವರ ಮನೆ ದಕ್ಷಿಣ ಜಮೀನ್ ನಾಲಾ ದುರ್ಗಾ ಘಾಟ್. ಎ.ಓ. 5551.

ರಾಜೇಂದ್ರತೀರ್ಥರು ಪ್ರಯಾಗ ಮಠದ ಪಶ್ಚಿಮ ಬದಿಯಲ್ಲಿ ರಸ್ತೆಗೆ ತಾಗಿರುವ ಂಶವನ್ನು ಹಿಜರಿ 1514ಲ್ಲಿ ರುಪಾಯಿ 10/–ಕ್ಕೆ ಕ್ರಯಕ್ಕೆ ಪಡಕೊಡಿದ್ದಾರೆ. ಇದ್ರ ಪೂರ್ವ ಬದಿಯ ಸ್ಥಳ ಅವರು ಅದ್ರ ಮುಂಚೆ ಕ್ರಯಕ್ಕೆ ಪಡಕೊಂಡಿದ್ದಾರೆತ ಕಾಣುತ್ತದೆ.

# 26. ಶ್ರೀ ಉಪೇಂದ್ರ ತೀರ್ಥರ ದಸ್ತೈವಜು

ತಾ. 5 ರಮಜಾನ ನ 1031 ಹಿಜರಿ ದಿವ್ಸ (25.7.1622) ಜಗದೀಶ ರಾವತ್ ಬಿಂನ್ ವಿಶ್ವನಾಥ ರಾವತ್ ಬ್ರಹ್ಮಾಘಾಟದಲ್ಲಿರುವವರು ಕೆಳಗೆ ಮನೆಯನ್ನೂ ರು 150ಕ್ಕೆ – ಶ್ರೀ ಉಪೇಂದ್ರ ತೀರ್ಥ ಸ್ವಾಮಿಗಳಿಗೆ ಕ್ರಯಕ್ಕೆ ಕೊಟ್ಟಿದ್ದಾರೆ. ಚತುರ್ಗಡಿ ಪೂರ್ವ ಬ್ರಹ್ಮಾಘಾಟಕ್ಕೆ ಹೋಗುವ ರಸ್ತೆ ಪಶ್ಚಿಮ ಬಾಮದ ಗಲ್ಲಿ ಉತ್ತರ ಮೂಸಿಂಗನ ಮನೆ ದಕ್ಷಿಣ ರಸ್ತೆ ಮತ್ತು ಘಾಟಿ ಇದು ಬಹುಶ್ಯಾ ಕೃಷ್ಣ ಚೌಕವಾಗಿರುತ್ತಾರೆ.

25 ರಜಬ 1031 ಹಿಜರಿ ದಿನ ಜಗದೀಶ ರಾವತ್ ಇಬ್ನ ವಿಶ್ವನಾಥ ರಾವತ್ ಯಿಬ್ನೆ ನಾರಾಯಣ ರಾವತ್ ಇವರು ಶ್ರೀ ಉಪೇಂದ್ರ ತೀರ್ಥ ಸ್ವಾಮಿಗಳಿಗೆ ರು 145ಕ್ಕೆ ಬರಕೊಟ್ಟ ಕ್ರಯಚೀಟು. ಇದ್ರ ಅಸ್ಲು ಇಲ್ಲಾ. ನಕ್ಲು ಉಂಟು. ಇದ್ರ ಗಡಿಗಳ ಪೂರ್ವ ಗಡಿಗಳು ಪೂರ್ವ ಉಪೇಂದ್ರ ತೀರ್ಥರಿಗೆ ಮುಂಚೆ ಕ್ರಯಕ್ಕೆ ಕೊಟ್ಟ ಸ್ಥಳ ಪಶ್ಚಿಮ ಸಾರ್ವಜನಿಕ ರಸ್ತೆ ಉತ್ತರ ಸದ್ರಿ ಉಪೇಂದ್ರತೀರ್ಥರಿಗೆ ಮುಂಚೆ ಕ್ರಯಕ್ಕೆ ಕೊಟ್ಟ ಸ್ಥಳ ನಾಲೆಯ ವರೆಗೆ. ದಕ್ಷಿಣ ದುರ್ಗಾಘಾಟ ಇದ್ರಲ್ಲಿ ಮುಂಚೆ ಉಪೇಂದ್ರ ತೀರ್ಥರಿಗೆ ಕ್ರಯಕ್ಕೆ ಕೊಟ್ಟ ಸ್ಥಳ ಎಂತ ಬರೆದಿರುವದರಿಂದ ಅದು 29 ಸಫಲ 1035ರಲ್ಲು ರುಪ್ಯೆ 525ಕ್ಕೆ ಕೊಟ್ಟ ಸ್ಥಳವೇ ಆಗಿರಬೇಕು ವಿನಹಾ ಬೇರೆ ಕಾಣುವುದಿಲ್ಲ ಹಾಗಾದ್ರೆ ಆ ದಸ್ತೈವಜಿನ ತಾರೀಕು ನಾವು 1035 ಎಂತ ಬರಕೊಂಡಾದ್ದು ತಪ್ಪು 1030 ಆಗಬೇಕು ಅಥವಾ ಅದು 1035 ಆದ್ರೆ ಈ ದಸ್ತೈವಜಿನ ತಾರೀಕು 1031 ಆಗಲಾರದು. 1035ರ ನಂತರದ್ದಾಗಬೇಕು. ಹ್ಯಾಗೂ ಯಾವದೋ ಒಂದು ತಪ್ಪು ಉಂಟು. ರು. 145ರ ಸ್ಥಳವು ಗಡಿಗಳ ಪ್ರಕಾರ ಸ. ನಂ. 5565ರ ಪೈಕಿ ಪಶ್ಚಿಮ ದಿಕ್ಕಿನಲ್ಲಿ ದುರ್ಗಾಘಾಟದಿಂದ ಉತ್ತರ ನಾಲೆಯಿಂದ ದಕ್ಷಿಣ ಮತ್ತು 5565ರ ಪೂರ್ವ ಬದಿಯ ವಂದಂಶ ಬಿಟ್ಟು ಅದರ ಪಶ್ಚಿಮಕ್ಕೆ ಇರುವ ಸ್ಥಳ ಎಂತ ಕಾಣುತ್ತದೆ.

## 27. ಶ್ರೀ ಉಪೇಂದ್ರ ತೀರ್ಥ ಸ್ವಾಮಿಗಳ ಪಿರ್ಯಾದು

ಮೊಹರೆ ಅದಾಲತ ದಿವಾನೆ ಜಿಲ್ಲಾ ಬನಾರಸ ಮುತಾಲ್ಲಿಕಾ ೧೨೦೩ ಹಿಜರಿ ಮುತಾಬಿಕ ಸನ್ 1788 ಇಸವಿ

ಫೈಸಲಿನಾಮಾ ಅಜಿತಸಿಂಗ ವಕೀಲ ಉಪೇಂದ್ರಾನಂದ ಮುದ್ದೈ ವ ಜೋಗಪುರಿ ಮುದ್ದೈ ಅಲೆ ದಸ್ಕತ್ ಹಕಂ ಜಮೊಹರೆ ಅದಾಲತ್ ದಿವಾನೆ ಜಿಲ್ಲಾ ಬನಾರಸ ಈ 11 ಜೂನ್ 1789 ಮುಕಾಂಬಿಕ 16 ರಮಜಾನ 1203 ಹಿಜರಿ. ಈ ವ್ಯಾಜ್ಯದ ಸಾರಾಂಶಯೇನಂದ್ರೆ ಜೋನಪೆರಿಯ ಶಿಷ್ಯಜಮಾನಿಪುರಿ ಅವರ ಶಿಷ್ಯರಲ್ಲಿ ಪುರಿ ಅವರ ಶಿಷ್ಯ ಜೋಗಪುರಿಯ ಹಿರಿಯರ ಕಾಲದಿಂದ ಬನಾರಸ ಕಾಶೀಮಠ ಬ್ರಹ್ಮಾ ಘಾಟದಲ್ಲಿದ್ದ ರಾಘವೇಂದ್ರ ಧರ್ಮಶಾಲಾ ಎಂಬ ಕಟ್ಟಡದಲ್ಲಿ ವಾಸಿಸಲಿಕ್ಕೆ ಕಾಶೀಮಠದ ಸ್ವಾಮೀರು ಅನುಮತೆ ಕೊಟ್ಟಿರುತ್ತಿದ್ರು ಆ ಪ್ರಕಾರ ಅವರು ವಾಸ್ತವಿಶಿದ್ರು. ಜೋಗಪುರಿ ಎಂಬವನು ಸದ್ರಿ ಕಟ್ಟಡ ತನ್ನ ಹಕ್ಕಿನದ್ದು ಹೊರತು ಕಾಶೀ ಮಠದವರ ಹಕ್ಕಿನದ್ದಲ್ಲಾ, ತನ್ನ ಹಿರಿಯರೀಗೆ ರಾಜಾ ಉಮೇದಸಿಂಗರ ಹಿರಿಯರು ಕೊಟ್ಟದ್ದು ಎಂತ ಸಾಧಿಸ ತೊಡಗಿದ್ರಿಂದ ರಾಜೇಂದ್ರತೀರ್ಥರ ಗುರುಗಳಾದ ಉಪೇಂದ್ರ ತೀರ್ಥ ಸ್ವಾಮಿಗಳು ಕೋರ್ಟನಲ್ಲಿ ಪಿರ್ಯಾದು ಮಾಡಿದರು. ಕೋರ್ಟಿನ ದರೋಗಳು ಜೋಗಪುರಿಯನ್ನು ಹೊರಗೆ ಹಾಕಿ ಬೀಗ ಹಾಕಿದ್ರು, ಆ ಬೀಗವನ್ನು ಜೋಗಪುರಿಯು ಮುರಿದು ಸ್ವಾಧೀನ ಮಾಡಿಕೊಂಡ ನಂತ್ರ ಉಪೇಂದ್ರ ತೀರ್ಥರು ಶಿವಿಲ ದಾವಾ ಮಾಡಿದರು. ಆ ದಾವೆಯಲ್ಲಿಯೂ ಕೂಡಾ ಸದ್ರಿ ಪುರಿಯು ತನ್ನ ಹಿರಿಯರೀಗೆ ರಾಜಾ ಉಮೇದಸಿಂಗ ಹಿರಿಯರು ಪುಣ್ಯ ಸಂಪಾದಿಸುವದಕ್ಕಾಗಿ ಕೊಟ್ಟದೆಂತ ಸಾಧನೆ ಮಾಡಿದಾ. ಮತ್ತು ರಾಜಾ ಉಮೇದಸಿಂಗರ ಮಗ ಕಸ್ಸ ಸಿಂಗರ ಕಾಗ್ದ ಪತ್ರಗಳನ್ನು ತಂದು ಕೋರ್ಟಿಗೆ ಹಾಜ್ರ ಮಾಡಿದಾ. ಸ್ವಾಮಿರು ತಮ್ಮ ಹಕ್ಕಿನದ್ದೆಂತ ತೋರಿಸುವ ದಾಕ್ಲಗಳನ್ನು ಹಾಜ್ರ ಮಾಡಿದ್ರು, ನಂತ್ರ ಮುದ್ದೈ ಮುದ್ದೈ ಅಲೆಮ ಒಪ್ಪಿಕೊಂಡು ಮಹಾರಾಜಾ ಬುಂದಿಯವರು ಈ ವಿವಾದವನ್ನು ಕೇಳಿ ಅವರು ಮಾಡುವ ಇತ್ಯರ್ಥಕ್ಕೆ ತಾವು ಉಭಯತರು ಕಬೂಲಿದ್ದೇವೆಂತ ಅರ್ಜಿಕೊಟ್ರು, ಆನಂತ್ರ ರಾಜಾ ಬುಂದಿಯವರು ಸದ್ರಿ ಕಟ್ಟಡ ಜೋಗಪುರಿಯ ಹಕ್ಕಿನದ್ದೆಂತ ಕೋರ್ಟಿಗೆ ಬರೆದು ಕಳುಹಿಸಿದ್ರಿಂದ ಕಟ್ಟಡ ಜೋಗಪುರಿಯ ಸ್ವಾಧೀನವೈತು.

ಆ ನಂತ್ರ ಉಪೇಂದ್ರತೀರ್ಥ ಸ್ವಾಮೀರ ಕಡೆಯಿಂದ ರಾಜಾಉಮೇದ ಸಿಂಗರಮಗ ಕಸ್ಸಸಿಂಗರಿಂದಲೂ ಅವರ ದಿವಾನ ಸಕ್ರಾಮರಿಂದಲೂ ಕಾಗ್ದಗಳನ್ನು ತಂದು ರಾಜಮಂಡಲದ ದರೋಗರೀಗೆ ಕೊಟ್ರು, ಮತ್ತು ರಾಜಾ ಬುಂದಿಯವರಿಂದಲೂ

ತಾನು ಮುಂಚೆ ಬರೆದದ್ದು ಜೋಗಪುರಿ ಒಬ್ಬನ ದಾಕ್ಲೆಗಳನ್ನು ಮಾತ್ರ ನೋಡಿ ಬರೆದ
ಈಗ ಉಪೇಂದ್ರ ತೀರ್ಥರ ದಾಕ್ಲೆಗಳನ್ನು ನೋಡಿ ಆಲೋಚಿಸುವಾಗ್ಯೆ ಸದ್ರಿ ಸ್ಥ
ಉಪೇಂದ್ರ ತೀರ್ಥರ ಹಿರಿಯರೇ ಕ್ರಯಕ್ಕೆ ಕೊಂಡದ್ದೆಂತಲೂ ಅವರೇ ಕಟ್ಟಡಗಳ
ಕಟ್ಟಿದೆಂತಲೂ ಸದ್ರಿ ಸ್ಥಳದ ಕಟ್ಟಡ ಕೂಡಾ ಉಪೇಂದ್ರ ತೀರ್ಥರ ಸ್ವಾಧೀನ ಕೊಡಿಸುವ
ವಿಹಿತವಾದದ್ದೆಂತ ತನಗೆ ಸಮಾಧಾನವ್ಯಾತು ಎಂಬದಾಗಿ ಕೋರ್ಟಿಗೂ ರಾಜಮಂಡಲ
ದರೋಗರಿೀಗೆ ಬರೆದು ತಂದುಕೊಟ್ರು. ಇವುಗಳ ಪರಾಂಬರಿಸಿ ದರೋಗರು ಸ
ಕಟ್ಟಡವನ್ನು ಉಪೇಂದ್ರ ತೀರ್ಥರಿಗೆ ಬಿಡ್ಸಿಕೊಟ್ರು ಮತ್ತು ಹಾಗೆ ಬಿಡ್ಸಿಕೊಟ್ಟಿದ್ದ
ಕೋರ್ಟಿನವರು ಮಂಜುರುಮಾಡಿ ರಿಕಾರ್ಡು ಮಾಡಿದರು ಎಂಬದಾಗಿ ತೀಪು
ತಾರೀಕು 15ನೇ ಮಾಹೆ ಜೂನ್ 1789 ಮುತಾಬಿಕ 20 ರಮಜಾನ 1203 ಹಿಜ

ಈ ತೀರ್ಪಿನ ಬದಿಯಲ್ಲಿ ಶ್ರೀ ಉಪೇಂದ್ರತೀರ್ಥರ ಸ್ವಹಸ್ತಾಕ್ಷರದಿಂ
ಬರೆದಿರುವದೇನಂದ್ರೆ –

लिखित श्री उपेन्द्रतीर्थस्वामी आगे अदालत में किसीकु कुच देता नही देणे
किया नही।

# 28. ಶ್ರೀ ಉಪೇಂದ್ರ ತೀರ್ಥ ಸ್ವಾಮಿಗಳ ಚಟ್ಟಂ

ಕೊಚ್ಚಿ ದೇವಸ್ಥಾನದಲ್ಲಿ ನಡೆಯುವ ಕ್ರಮಗಳ ಕುರಿತು ಶ್ರೀ ಉಪೇಂದ್ರ ತೀರ್ಥ ಸ್ವಾಮಿಗಳು ಶಾಲಿವಾಹನ ಶಕ 1576 ಜಯ ಸಂ। ರದ ಜೇಷ್ಠ ಶುಕ್ಲ ದ್ವಾದಶಿ ಶುಕ್ರವಾರದಲ್ಲಿ ಮಾಡಿದ ಚಟ್ಟಂ (ಪ್ರಧಾನಪತ್ರಿಕಾ)

ಶ್ರೀ ಮತ್ಪರಮಹಂಸ ಪರಿವ್ರಾಜಕಾದ್ಯನೇಕಗುಣ ಸಂಪನ್ನ ಶ್ರೀ ಮದ್ರಾಮಚಂದ್ರದೇವ ದಿವ್ಯ ಶ್ರೀ ಪಾದಪದ್ಮಾರಾಧಕ ಶ್ರೀ ಮದ್ಯಾದವೇಂದ್ರ ತೀರ್ಥ ಶ್ರೀಪಾದ ಕರಕಮಲಸಂಜಾತ ಶ್ರೀಮತ್ಕೇಶವೇಂದ್ರ ತೀರ್ಥ ವಡೇರ ಶ್ರೀಪಾದವರ ಕುಮಾರಕ ಶ್ರೀ ಮದುಪೇಂದ್ರ ತೀರ್ಥ ಶ್ರೀಪಾದೈ – ಎಂತ ಬರೆದಿರುವದು ನೋಡುವಾಗ್ಯೆ ಶ್ರೀ ಉಪೇಂದ್ರ ತೀರ್ಥರು ಶ್ರೀ ಕೇಶವೇಂದ್ರ ತೀರ್ಥರ ಶಿಷ್ಯರೆಂತ ತಿಳಕೊಳ್ಳಬೇಕಾಗುತ್ತದೆ.

ಇದರಲ್ಲಿ ಕಾಣುವ ಮತ್ತೊಂದು ವಿಶಯ :– "ಕಲಿವರ್ಷ 4655 ಶಕಾಬ್ದ 1476 (1554AD) ಆನಂದ ಸಂವತ್ಸರದಲ್ಲಿ ಗೋವೆಯಲ್ಲಿ ಪೋರ್ತುಗೀಸರು ಹಿಂದುಗಳನ್ನು ಕ್ರೈಸ್ತರಾಗಿ ಮಾಡಲುಪಕ್ರಮಿಸಿ 2 1/2 ತಿಂಗಳೊಳಗೆ ಎಲ್ಲರೂ ಕ್ರೈಸ್ತರಾಗಬೇಕು, ಇಲ್ಲವಾದ್ರೆ ಊರು ಬಿಟ್ಟು ಪರವೂರಿಗೆ ಹೋಗಬೇಕು. ಹೋಗದೇ ಉಳಿದವರನ್ನು ಬಲಾತ್ಕಾರದಿಂದ ಕ್ರೈಸ್ತರನ್ನಾಗಿ ಮಾಡೋಣಾದೀತೆಂತ ಪ್ರಕಟಿಸಿದ್ರಿಂದ ನಮ್ಮವರು ಗೋವೆಯನ್ನು ಬಿಟ್ಟು ದಕ್ಷಿಣಕ್ಕೆ ಬಂದು ಕೆಲವರು ಕಲ್ಲಿಕೋಟೆಯಲ್ಲಿ ಇಳಕೊಂಡು ಅಲ್ಲಿಂದ ಕೊಚ್ಚಿಗೆ ಬಂದು ನೆಲಸಿದರು. ಶ್ರೀ ವೆಂಕಟಪತಿದೇವಸ್ಥಾನ ಸ್ಥಾಪಿಸಿದ್ರು, ಶಾಲಿವಾಹನಶಕ 1542 ರೌದ್ರಿ ಸಂವತ್ಸರದಲ್ಲಿ ಮುಂಚಿನ ಗುರುಗಳು ಕೊಟ್ಟ ಆಜ್ಞಾರಾಯಸದಂತೆ ದೇವಸ್ಥಾನದ ಕ್ರಮಗಳು ನಡೆಯುತ್ತಿದ್ದವು. ಆ ನಿಯಮಗಳು ಇತ್ತಲಾಗೆ ಶಿಥಿಲವಾದುದರಿಂದ ಪುನಹಾ ಈ ನಿಯಮಗಳನ್ನು ನಿಶ್ಚಯಿಸಿದ್ದೇವೆ ಎಂತ ವಗೈರೆ ಬರೆದಿದ್ದಾರೆ. ಆ ತರುವಾಯ ನಿಯಮಗಳನ್ನು ಬರೆದಿದ್ದಾರೆ.

## 29. ಉಡುಪಿ ಶ್ರೀಕೃಷ್ಣದೇವಸ್ಥಾನದ ಶಿಲಾಶಾಸನಗಳು

ಉಡುಪಿ ಶ್ರೀ ಕೃಷ್ಣ ದೇವಸ್ಥಾನದ ಪಶ್ಚಿಮ ಬದಿ ಗೋಡೆಯ ಮೇಲಿರುವ ಶಿಲಾಶಾಸನಗಳು 2ರ ವಿವರ

ಇವುಗಳು South Indian Inscriptions (S. 11) Vol. VII ಈ ಪುಸ್ತಕದಲ್ಲಿ ಮುದ್ರಿತವಾದ ನಂಬ್ರ 301ನೇ ಶಾಸನ (ಪುಟ 154 – 55)

ಸ್ವಸ್ತಿ ಜಯಾಭ್ಯುದಯ ಶಾಲಿವಾಹನ ಶಕ ವರ್ಷ 1536ನೇ ಆನಂದ ಸಂವತ್ಸರದ (1615AD) ಪುಷ್ಯ ಶು 10 ಸ್ಥಿರವಾರದಲ್ಲು ವಿದ್ಯಾಧೀಶತೀರ್ಥ ಶ್ರೀಪಾದ ವಿದ್ಯೋಪದೇಶ ಶ್ರೀಪಾದರ ಉಡುಪಿನ ಶ್ರೀ ಕೃಷ್ಣ ದೇವರ ಪೂಜಾ ಕಾಲದಲ್ಲಿ ತೊಳಸಿ ಗ್ರಾಮದ ಸಂತುವಾಳಿ ಅಗ್ರಹಾರದ ಕೊಂಕಣವರ್ಗದ ಬ್ರಾಹ್ಮಣ ರುಕ್ ಶಾಖೆಯ ಭಾರದ್ವಾಜ ಗೋತ್ರದ ಸೌದೆಯ ಚಿನ್ನ ವರದ ನಾರಣಪ್ಪಯ್ಯನ ಮಗ ಲಿಂಗಪ್ಪಯ ಶ್ರೀಕೃಷ್ಣ ದೇವರ ಸನ್ಮುಖದಲಿ * * * * * * * *

ಶ್ರೀ ಕೃಷ್ಣ ದೇವರಿಗೆ ಭೂಸ್ವಾಸ್ಥಿ ಬಗೆ ಧಾರಾಪೂರ್ವಕವಾಗಿ ಕೊಟ್ಟದ್ದು ದೊಡ್ಡವರಹ 100 ಅಕ್ಷರದಲು ನೂರು ವರಹ * * * * *

ಮಂಗಳ ಮಹಾ ಶ್ರೀ ಮಹಾ ಶ್ರೀ ಶ್ರೀ ಶ್ರೀ ಶ್ರೀ

ನಂಬ್ರ 302ನೇ ಶಾಸನ

* * * ಜಯಾಭ್ಯುದಯ ಶಾಲಿವಾಹನ ಶಕ ವರ್ಷ 1536 ಪ್ರಮಾಥಿ ಸಂವತ್ಸರದ .......ಧ 12ರಲ್ಲು ಸ್ವಸ್ತಿ ಶ್ರೀ ವಾದಿರಾಜ ತೀರ್ಥ ಶ್ರೀಪಾದಂಗಳ ಕರಕಮಲ ಸಂಜಾತರಾದ ವೇದವೇದ್ಯ ತೀರ್ಥರು ಉಡುಪಿಯ ಶ್ರೀ ಕೃಷ್ಣ ದೇವರ ಮಿ * * * * * ನ ಕಾಲದಲು ಸಾಸಷ್ಟಿ ಗ್ರಾಮದ ಅಷ್ಟ ಗ್ರಾಮದ ಅಷ್ಟ ಗ್ರಾಮಕೆ ಮುಖ್ಯವಾಗಿರುವ ಮಠ ಗ್ರಾಮಕೆ ಪ್ರಥಮಸ್ಥಾನದ ಕೌಶಿಕ ಗೋತ್ರದ ಋಕ್ ಶಾಖೆಯ ದಾಮಪ್ರಭೂ ಮಗ ದಾಮರ್ಸಪ್ರಭು ಮಾಡಿದ ಧರ್ಮದ ವಿವರ – ತನ್ನ ಜೇಷ್ಟ ಪಿತು ರಂಗಪ್ರಭು ಇವರ ಮಗ ಮಾಳ ಯಾನೆ ಸಹಾ ಅಕ್ಷಯಪುಣ್ಯಲೋಕ ಪ್ರಾಪ್ತಿಯಾಗಲೆಂದು ಶ್ರೀ ಕೃಷ್ಣದೇವರಿಗೆ * * * * * ನಡೆವ ಬಗೆ ಈ ಸ್ಥಳದಲ್ಲಿ ದೊಡ್ಡ ವರಹ ಗ 160 ನೂರ ಅರ್ವತ್ತು ವರಹ ಸಹಿರಣ್ಯೋಧಾರಾಪೂರ್ವಕವಾಗಿ ಬಿಟ್ಟ ಧರ್ಮ ಶ್ರೀ ಕೃಷ್ಣಾಯ ನಮಃ

ತತ್ವವಂತ್ಸರದ ಅದೇ ದಿನದಲು ಸಾಸಷ್ಟಿ ದೇಶದ ಅಷ್ಟಗ್ರಾಮಕೆ ಮುಖ್ಯವಾದ
ುಠ ಗ್ರಾಮಕೆ ಪ್ರಥಮ ಸ್ಥಾನದ ದಾಮಪ್ರಭು ಮಗ ಗೋವಿಂದಪ್ರಭೂ ತನ್ನ ಮಾತಾ
ತೃಗಳಿಗೆ ಅಕ್ಷಯ ಪುಣ್ಯಲೋಕ ಪ್ರಾಪ್ತಿಯಾಗಲೆಂದು ತನ್ನ ಮಕ್ಕಳಿಗೆ ಪುತ್ರ
ೌತ್ರಾಭಿವೃದ್ಧಿಯಾಗಲೆಂದು ಮಾಡಿದ ಧರ್ಮದ ವಿವರ - * * * * * ದೊಡ್ಡ
ರಹ ಗ 55 ವರಹಾನ್ನು ಕೊಟ್ಟು ಸಹಿರಣ್ಯಧಾರಾಪೂರ್ವಕವಾಗಿ ಕೊಟ್ಟು ಮಾಡಿದ
ರ್ಮಶಾಸನ । ಶ್ರೀ ಕೃಷ್ಣಾರ್ಪಣ.

ಶ್ರೀ ಕೃಷ್ಣಮಠದ ಬಡಗುದಿಕ್ಕಿನ ಗೋಡೆಯ ಮೇಲೆ ಇರುವ ಶಾಸನ (ನಂಬ್ರ
97)ದಲ್ಲಿ ಕಾಣುವಂತೆ ಶ್ರೀ ಕೃಷ್ಣ ದೇವರ ಮಠವು ಮುಂಚೆ ಮರದ ಮಾಡಿನಲ್ಲಿದ್ದದ್ದು
ೀರ್ಣವಾದುದನ್ನು ಸೋದೆ ಮಠದ ಶ್ರೀ ವಾದಿರಾಜ ತೀರ್ಥರ ಶಿಷ್ಯರಾದ
ೇದವೇದ್ಯತೀರ್ಥರು ತಮ್ಮ ಪರ್ಯಾಯ ಕಾಲದಲ್ಲಿ ಶ್ರೀ ದೇವರನ್ನು ಗರ್ಭಗೃಹದಿಂದ
ಗೆದು ಹೊರಗಿನ ಮಂಟಪದಲ್ಲಿ ಇಟ್ಟು ಪೂಜಿಸುತ್ತಾ ಗರ್ಭಗೃಹ ಮತ್ತು ಮಠವನ್ನು
ಲೆಯಿಂದ ಕಟ್ಟಿಸಿ ಮಾಡಿಗೆ ತಾಂಬ್ರದ ಹೊದಿಕೆ ಮಾಡಿ ಕಲಶಸ್ಥಾಪನೆ ಮಾಡಿ
ಮತ್ತು ಶಾ। ಶ। 1536 ಪ್ರಮಾದಿ ಸಂ। ವೈಶಾಖ ಶು 12 (ಕ್ರಿ. ಶ. 1613ನೇ ಎಪ್ರಿಲ್
21) ಬುಧವಾರ ದಿನ ಶ್ರೀ ಕೃಷ್ಣ ದೇವರನ್ನು ಪುನಃ ಪ್ರತಿಷ್ಠೆ ಮಾಡಿಸಿದರೆಂತಲೂ
ಅದೇ ಸಂವತ್ಸರದ ಕಾರ್ತಿಕ ಶು 15 ಚಂದ್ರ (17-10-1613)ಪುಣ್ಯಕಾಲದಲ್ಲಿ
ವಿಜಯನಗರದ ವೀರವೆಂಕಟಪತಿ ಮಹಾರಾಯರ ನಿರೂಪದಂತೆ ಕೆಳದಿ ಸಂಸ್ಥಾನದ।
ವೆಂಕಟಪ್ಪನಾಯಕರು ಬಾರಕೂರ ಸೀಮೆಯಲ್ಲಿ ಉಂಬಳಿ ಬಿಟ್ಟರು ಎಂತಲೂ ಅದೇ
ವರ್ಷದ ಮಾಘ ಶು 1 ವು ಶನಿವಾರ (1-1-1614) ಶ್ರೀ ವೇದವೇದ್ಯ ತೀರ್ಥರು
ಶ್ರೀಕೃಷ್ಣ ದೇವರಿಗೆ ಬನ್ನಿಂಜೆ ಪ್ರಾಂತ್ಯದಲ್ಲಿ ದತ್ತಿ ಮಾಡಿದರು ಎಂತಲೂ ಇದೆ._

# 30. ಕೊಂಕಣಿಯಲ್ಲಿ ಒಂದು ಮನವಿ

ತೈಕಾರಾಸಿ ಬರೌನುದಿಲ್ಲೆ ಬರ್ಷಾಪ್ರತಿ ಸ್ವಾಮ್ಯಾಂಕ

ಶ್ರೀಮತ್ಪರಮಹಂಸ ಪರಿವ್ರಾಜಕಾಚಾರ್ಯಾದ್ಯನೇಕ ಗುಣಸಂಪನ್ನ ಶ್ರೀಮದ್ರಾವ ಚಂದ್ರದೇವದಿವ್ಯ ಶ್ರೀಪಾದಪದ್ಮಾರಾಧಕರಾದ ಶ್ರೀಮದುಪೇಂದ್ರ ತೀರ್ಥ ಶ್ರೀಪಾದ ವಡೇ ಕರಕಮಲಸಂಜಾತರಾದ ಶ್ರೀ ಮದ್ರಾಜೇಂದ್ರ ತೀರ್ಥ ಶ್ರೀಪಾದ ವಡೇರ ವರಕುಮಾರಕರಾ ಶ್ರೀಮತ್ಸುರೀಂದ್ರ ತೀರ್ಥ ಶ್ರೀಪಾದ ವಡೇರ ಸ್ವಾಮ್ಯಾಂಚೆ ಚರಣಕಮಲಾಸಿ ಶಿಷ್ಯಾನುಶಿಷ ಗೋಶ್ರೀಪುರಸ್ಥ ಶ್ರೀಮತ್ತಿರುಮಲ ದೇವಾಲೆ ಅಧಿಕಾರ್ಯಾನಿ ಸಾಷ್ಟಾಂಗ ನಮಸ್ಕಾರು ಕೆಲಾ

ಶ್ರೀ ಶ್ರೀ ಶ್ರೀ ಶ್ರೀ ಶ್ರೀ

ಉಪರಿ ಪ್ರಥಮ ಕೊಲ್ಲಂ 965 (ಕ್ರಿ. ಶ. 1790) ವರ್ಸಾಂತ ಕೊಚ್ಚಿರಾಯಾನ ಕಲ್ಪಸೂನು ಆಳು ಏವುನು ಆಮ್ಮಾ ಸಕಟಾಂಕ ಆಪೋನು ವೋರ್ನು ಆತ್ತಂ ತಿಸಸಾಸು (30000) ವರಾ ತುಮ್ಮಿ ದಿವ್ಕಾ ಮ್ಹೊಣು ಕರಶನ ಜಾವನು, ರಾಯಾನ ಕಲ್ಪಸಿಲ್ಲೆ. ಶೇಷಂ। ಪ್ರಥಮ ಆಮ್ಮಾ ಸಾಬಾರದ್ರವ್ಯ ಏಲೆ ಆಸ್ತಾನಾ, ಆನಿಕಯಿ ಆತ್ತಂ ದಿವ್ಕಾಮಳ್ಯಾರಿ ಆಮಚೆಲಾಗಿ ದಿವ್ಚಾಕ ಜಾಂವ್ಚೆನಾ, ಪೂರ್ವಿಂ ಆಶಿಲ್ಲೆ ರಾಯಾನಿ ಆಮ್ಗೆಲ್ಯಾ ಮಾಲ್ಗಡ್ಯಾಂಕ, ಬಲಾಧಿಕಾರಾನ ತುಮ್ಚೆಲಾಗಿ ಏಕದ್ರವ್ಯ ನಿಮ್ಗಿ ನಾ ಮ್ಹೊಣು ಆಧಾರುಯಿ ಕೊರ್ನು ದಿವುನು ತೇ ಲೆಕಾನ ಆಜಿ ಪರ್ಯಂತಯಿ ಚಮಕೂನು ಎತ್ತಾತಿ ಮ್ಹೊಣು ಸಾಂಗ್ತಚಿ ನ್ಯಾಯು, ನೀತಿ, ಮರ್ಯಾದಾ, ಪಳಯಿ ನಾತಿಲ್ಲೆಂ ಆಮ್ಮಾ ಕಾವಲಾಂತು ಘಾಲ್ನು ಮಾನಕ್ಷಯು ಕೊರೂಂಕ ಭಾಯ್ರ ಸರ್ಲೊ, ನಿಮಿತ್ತಿ ತೇಂ ಜಾಯ್ತ ಮಳ್ಳೆಲೆ ಭಯಾನ । ಕಲ್ಪಶಿಲ್ಲೆಂ ಆಯ್ಕುನು ತಿಸಸಾಸು ವರಾಕ ಕೈಚೀಟಿ ಬರೌನು ದಿಲ್ಲಿ । ತೆದುಸು ತೇ ಲೆಕಾನ ಬರೌನು ದೀನಾಜಾಲ್ಯಾರಿ ನಘಾವಜಾಲ್ಲೆ. ನುಪುರ್ಪಣಿ, ಮಾನಕ್ಷಯು ಜಾತ್ತ ಜಾಲ್ಲೆ ನಿಮಿತ್ತಿ ಬರೌನು ದೀವುನು ಏವುನು ಮಹಾಜನ ಸಕಟಾಂಕ ಕಾಂಬೊಳಂಘಾಲ್ನು ದೆವಳಾಕಡೆ ಮೇಳ್ನು ಹೇ ಕಾರ್ಯಾ ವಿಚಾರಿಚ್ಚ ಕೋರ್ನು ಆಸ್ತಾನಾ । ಕೊಟ್ಯಾಂ ಥಾಕೂನು ಆಲಪ್ಯಾರಿ ಏವುನು ಕಾಂಬೊಳಂ ಘಾಲ್ನು ರಾಬೂ ನಯೇ ತುಮ್ಚೆಲಾಗಿ ಆತ್ತಂ ರಾಣುವೆಲೆ ದ್ರವ್ಯ ಕಾರ್ಯಾಕ ಆಲ್ಲೆ ಶೊದ್ಯಂ ಯದಲೆರಾನ ತಿರ್ತಕೊರ್ನು ದಿವಯೇತ ಮ್ಹಣುಯಿ ಕಾಂಬೊಳಂ ಕಾಣ್ಣು ಬ್ಯಾರು, ಶಾರು, ಕೊರ್ಕಾಮ್ಹಣು ಯದಲೆರಾನ ಸಾಂಗಿಲೊ ಪ್ರಕಾರು ಆಲಪ್ಯಾರಿನ ಏವುನು ಸಾಂಗಿಲ್ಲೆ ನಿಮಿತ್ತಿಂ ಮಹಾಜನ

ಕಾವಲಾಸಿಲೆ ಆಳಾಂಕಯಿ ಜೀವಶಿಮಾರ್ನ್ಯು ದೆವಸ್ವಾಲೆ ಬಗೆ ನಿಕ್ಷೇಪಂ ಆದಿ ಜಾವನ
ಆಶಿಲ್ಲೆ ಸರ್ವಸ್ವಯಿ ಆಧಾರುಸಕಟಯಿ ಜನಪದಾಲೆ ಸರ್ವಸ್ವಯಿ ಪೆಟಿ ಪ್ರಮಾ
ಹೇ ಸಕಟ ರಾಣುವೆಲೆ ಆಳಾನಿ ನಿಪೊವನು ವ್ಹೆಲ್ಲೆಂ । ತಾಜೆ ಉಪರಾಂತೆ ಯದಲೆ
ಹಾಲಂಡಾಂ ಥಾಕ್ಕುನು ಆಯಿಲೆ ಕರಹೇಕಾಲಾಚೆ ಎಕ್ಕಯಿ ತೀರ್ಚ ಕರ್ನಾತೀ
ನಿಮಿತ್ತಿ ತೇ ಕಾರಣ ಪೆಲೆರಾಜ್ಯಾಕ ಏವನು ರಾಬ್ಯೆಲ್ಲೆ ಆಮಿ ಏವನು ಚಾರಿಪಾಂ
ವರ್ಶ ಜಾಲ್ಲಿ. ದೇವಾಕ ಪೂಜಾಪನಸ್ಕಾರು ನಾತ್ತಿಲ್ಲೆ ಪಳೆನಿತಿ ಹೇ ಕಾರ್ಯಾ
ಏಕಸ್ಥಿತಿ ಜಾವನು ಕಿಳ ಮರ್ಯಾದಾ ಪ್ರಕಾರಿ ಕೊಚ್ಚಿ ವ್ರೊಚ್ಚುನು ರಾಬುಕ ಜಾ
ಪರ್ಯಂತ ದೇವಾಕ ಪೂಜಾಪನಸ್ಕಾರು ಚಮಕ್ಯೆಶಿ ಆಶಿಲ್ಯಾಕಯಿ ಆಮಗೆಲಿ ಅವನ
ಕಳಿ ಜಾಯೆಶಿ ಆಶಿಲ್ಯಾಕಯಿ ಆಮಗೆಲ್ಯಾ ಮರ್ಯಾದೇನ ಚಮಕೂಕ ಆಶಿಲ್ಯಾಕಯ
ಸ್ವಾಮ್ಯಾನಿ ದಯಾ ಕೊರ್ಕಾ ಹೋ ಭೂಭಾರು ಸ್ವಾಮ್ಯಾಂಕ ಲಾಗಲಾ ಹೇ ಸಾಷ್ಟಾಂ
ವಿಜ್ಞಾಪನಾ। ಕೊಲ್ಲಂ 972 (ಕ್ರಿ. ಶ. 1797) ವರ್ಷ ಮಕರ ಮಾಸು 29 ದಿಸ
ದೇವಾಲೊ ಶೆಣಯಿ ಆಳವೆರಾಲೆ ಕೃಷ್ಣಾಲೆ ಬರ್ಪ ಶ್ರೀ

## 31. ಕೆಲವು ರಾಯಸಪತ್ರಗಳ ವಿಷಯ

ಶ್ರೀ ವಿಬುಧೇಂದ್ರ ತೀರ್ಥರಿಗೆ ಕೊಚ್ಚಿ ತಿರುಮಲ ದೇವಸ್ಥಾನದ ಅಧಿಕಾರಿಗಳು ಖರ ಸಂವತ್ಸರದ ವೈಶಾಖ ಬ ೨ ಶುಕ್ರವಾರದಲ್ಲು ಬರಕೊಂಡ ಬಿನ್ನಹಪತ್ರದಲ್ಲಿ ಶ್ರೀ ಸ್ವಾಮೀರು ಆಲಪಳಿಗೆ ಹೋಗಿ ಅಲ್ಲಿಂದ ಕೊಲ್ಲಂ ವರೇಗೆ ಹೋಗಿ ತುರವೂರಿಗೆ ವಾಪ್ಸು ಬಂದು ಬಡಗುದೇಶಕ್ಕೆ ಪ್ರಯಾಣಿಸಿದ ವಾರ್ತೆಯನ್ನು ಗುರುಗಳಾದ ಶ್ರೀ ಸುಧೀಂದ್ರ ತೀರ್ಥರು ಕೇಳಿ ಬಹಳ ವ್ಯಸನ ಪಟ್ಟರು. ಹಾಗೂ ಅವರ ದೇಹಸ್ಥಿತಿ ಬಹಳವಾಗಿ ಕೆಟ್ಟ ಹಾಗೆ ಕಾಣುತ್ತದೆ. ಕ್ಷೀಣವಾಗಿದ್ದಾರೆ. ಕೈಕಾಲುಗಳಲ್ಲಿ ಬೀಗು ಬಂದದೆ. ಆಹಾರ ಸೇರುವದಿಲ್ಲ. ಔಷಧೋಪಚಾರ ಮಾಡಿದಾಗ್ಯೂ ಹೆಚ್ಚಿನ ಪ್ರಯೋಜನ ಕಾಣುವುದಿಲ್ಲಾ. ಆದುದರಿಂದ ಕೂಡ್ಲೆ ಆಲಪೆಗೆ ಬಂದು ಅವರ ಆರೈಕೆ ನೋಡಬೇಕು ಎಂತ ಬರೆದಿದ್ದಾರೆ. ಆದುದರಿಂದ ಶ್ರೀ ಸುಧೀಂದ್ರ ತೀರ್ಥರು ಖರಸಂವತ್ಸರದಲ್ಲಿ (1831ನೆ ಇಸವಿ) ಮುಕ್ತರಾಗಿದ್ದಾರೆಂತ ಕಾಣುತ್ತದೆ.

ಶಾಲಿವಾಹನ ಶಕ 1704 ಶುಭಕೃತು ವೈಶಾಖ ಬ 2 ಯಲ್ಲು ಕಾಶೀ ಕ್ಷೇತ್ರದಲ್ಲಿರುತ್ತಿದ್ದ ಶ್ರೀಮತ್ ಯಾದವೇಂದ್ರ ತೀರ್ಥ ಶ್ರೀಪಾದ ವಡೇರ ಕರಕಮಲಸಂಜಾತರಾದ ಶ್ರೀಮತ್ ಉಪೇಂದ್ರ ತೀರ್ಥ ಶ್ರೀಪಾದ ವಡೇರ ವರ ಕುಮಾರಕರಾದ ಶ್ರೀಮತ್ ರಾಜೇಂದ್ರ ತೀರ್ಥ ಶ್ರೀಪಾದ ವಡೇರರಿಗೆ ಗೋಶ್ರೀಪುರಸ್ಥ ವಿದ್ವದ್ವೈದಿಕ ಮಹಾಜನರು ಬರಕೊಂಡ ವಿನಂತಿ ಪತ್ರ ಶ್ರೀ ಮಠದಲ್ಲಿದೆ.

ಇದೇ ರಾಜೇಂದ್ರ ತೀರ್ಥರಿಗೆ ಶ್ರೀ ಮಾಧವೇಂದ್ರ ತೀರ್ಥ ಸ್ವಾಮಿಗಳು ವಿಜಯ ಸಂ। ಫಾಲ್ಗುಣ ಬ 14 (ಶಾಲಿವಾಹನ ಶಕ 1695 ಕ್ರಿಸ್ತಶಕ 1773)ಲ್ಲು ಬರೆದ ರಾಯ್ಸ ಪತ್ರ ಶ್ರೀ ಮಠದಲ್ಲಿ ಉಂಟು. ಇದು ಶ್ರೀ ಮಾಧವೇಂದ್ರ ತೀರ್ಥರು ಹೊನ್ನಾವರದಿಂದ ಬರೆದದ್ದಾಗಿ ಕಾಣುತ್ತದೆ. ಇದರಲ್ಲಿ ರಾಜೇಂದ್ರ ತೀರ್ಥರಿಗೆ ಸರಿಯಾಗಿ ವಿದ್ಯಾಭ್ಯಾಸ ಮಾಡಬೇಕಾಗಿಯೂ ತ್ರಿಕಾಲ ಜಪಮಾಡಬೇಕಾಗಿಯೂ ಬರೆದಿದ್ದಾರೆ. ಬಾಳಬೋಧ ಲಿಪಿ ಕನ್ನಡ ಭಾಷೆ. ಶಾರ್ವರಿ ಸಂ। ರದ (ಶಾಲಿವಾಹನ ಶಕ ೧೬೮೨ ಕ್ರಿ. ಶ. 1760) ಶ್ರಾವಣ ಶು ೧೨ಲ್ಲು ರಾಜೇಂದ್ರ ತೀರ್ಥರು "ನಮ್ಮ ಶ್ರೀ ಸ್ವಾಮಿಯವರ ಪರಮಪ್ರಿಯ ಶಿಷ್ಯರಾದ ಅಪ್ಪಯ್ಯ ಶ್ಯಾನಭಾಗರಿಗೆ" ಬರೆದ ರಾಯಸ ಪತ್ರ ಶ್ರೀ ಮಠದಲ್ಲಿ ಇದೆ. ಇದರಲ್ಲಿ ಶ್ರೀ ರಾಜೇಂದ್ರ ತೀರ್ಥರು ಕುಂದಾಪುರ ಹನುಮಂತ ದೇವಸ್ಥಾನದಲ್ಲಿ ವಿದ್ಯಾಭ್ಯಾಸ ಮಾಡುತ್ತಿರುವುದಾಗಿ ಕಾಣುತ್ತದೆ. ಇದರಲ್ಲಿ ನಮ್ಮ ಶ್ರೀ ಸ್ವಾಮಿಯವರ ಪರಮಪ್ರಿಯಶಿಷ್ಯರಾದ ಅಪ್ಪಯ್ಯ ಶ್ಯಾನಭಾಗರಿಗೆ ಎಂತ

ಬರೆದಿರುವದ್ರಿಂದ ಅಕಾಲದಲ್ಲಿ ಇವರ ಗುರುಗಳಾದ ಉಪೇಂದ್ರ ತೀರ್ಥರು ಇದ್ದರೆಂ
ಕಾಣುತ್ತದೆ.

ಇದೇ ರಾಜೇಂದ್ರ ತೀರ್ಥರಿಗೆ ಹೇವಿಳಂಬಿ ಸಂ। (ಶಾಲಿವಾಹನ ಶಕ 1699
ಫಾಲ್ಗುಣ ಶು ೩ ಯು ಸೊಮವಾರದಲ್ಲು ಕೊಚ್ಚಿ ಮಹಾಜನರು ಬರಕೊಂ
ಬಿನ್ನಹಾ ಪತ್ರದಲ್ಲಿ ಕಾಣುವ ವಿಶಯ – ತಾಂವು ಕಾಶಿಯಿಂದ ಶ್ರೀ ಉಪೇಂ
ತೀರ್ಥರ ರಾಯ್ಸ ಪತ್ರ ಸಮೇತ ಬರೆದ ರಾಯ್ಸ ಪತ್ರ ತಲ್ಪಿತು. ಮತ್ತು ಹ
ಕಳುಹಿಸಲಿಕ್ಕೆ ಬರೆಯೋಣದ ವಿಶಯದಲ್ಲಿ ಈ ಮುಂಚೆ ಶ್ರೀ ಉಪೇಂದ್ರ ತೀರ್ಥ
ಇಲ್ಲಿಂದ ಕಾಶೀಗೆ ಹೊರಟು ಹೋಗುವಾಗ್ಯೆ ರೂಪಾಯಿ 1440 ಕೊಟ್ಟಿತ್ತು ಮ
ಹಿಂದೆ ಶ್ರೀ ಮಾಧವೇಂದ್ರ ಸ್ವಾಮಿಗಳು ಇಲ್ಲಿರುವಾಗ್ಯೆ ಕಾಲೋಚಿತ ವಿಚಾರಮಾ
ಮಹಾ ಜನರನ್ನು ಸೇರಿಸಿಕೊಂಡು ಮುಂದೆ ಸ್ವಾಮಿಗಳವರ ನಡವಳಿಕೆ ವಿಶಯದ
ಒಂದು ಬರಹಾ ಮಾಡಿಟ್ಟದ್ದು ಉಂಟು – ಪೂರ್ವದಾರಭ್ಯ ಕಾಶಿ ಮಠದ ಪರಾಮಶ
ತುಳುನಾಡಿನ ಮಹಾಜನರಿಂದಲೂ ರಾಮೇಶ್ವರ ಮಠದ ಪರಾಮರ್ಶೆ ಕೊ
ಮಹಾಜನರಿಂದಲೂ ನಡೆದು ಬರುತ್ತಿರುವ ಸಂಗ್ತಿ ಕೂಡಾ ತಮ್ಮ ಚಿತ್ತಕ್ಕೆ ಪರಾಂಬರಿ
ಇರಬಹುದು. ಈಗ ಕಳುಹಿಸೋಣಾದ ರಾಯ್ಸ ಪತ್ರಕ್ಕೆ ಏನಾದರು ಕೊಟ
ಕಳಿಹಿಸಬೇಕೆಂಬ ಆಲೋಚನೆ ಉಂಟು –

ಆದ್ರಿಂದ ಬರುವ ಕಾರ್ತಿಕ ಮಾಸದಲ್ಲಿ ತಮ್ಮ ವಿಶ್ವಾಸ ಉಳ್ಳ ಇಬ್ಬರು ಜನರನ
ರಾಯ್ಸಪತ್ರ ಸಮೇತ ಕಳುಹಿಸುವದಲ್ಲಿ ಅನುಕೂಲವಿರುವಷ್ಟನ್ನು ಕಳುಹಿಸುತ್ತೇವೆ. ಈ
ಜರಿಯಂಚಿನ ಎರಡು ಶಾಲು ಕಳುಹಿಸಿ ಅದೆ.

ಶೃಂಗೇರಿ ಮಠದ ನರಸಿಂಹಭರತೀ ಸ್ವಾಮಿಗಳ ಕರಕಮಲಸಂಜಾ
ಶ್ರೀಮಧಿನವವಿದ್ಯಾರಣ್ಯಭಾರತಿ ಸ್ವಾಮಿಗಳವರು ವೈರಾಗ್ಯದಲ್ಲಿದ್ದಾಗ್ಯೆ ಸಾರಸ್ವತ ಗೌ
ಬ್ರಾಹ್ಮಣ ರಂಗರಾವ ರಾಮಚಂದ್ರ ಬೆಂಡೆ ಇವರು ತಮ್ಮಲ್ಲಿ ಮರಣವಾದ್ರೆ ಶ
ತೆಗೆಯಲಿಕ್ಕೆ ಬ್ರಾಹ್ಮಣರು ತಕ್ರಾರು ಮಾಡುತ್ತಾರೆ ಎಂತ ಹೇಳಿಕೊಂಡದ್ರಿಂದ ಶೆಣವಿಯವ
ಶಟ್ಕರ್ಮಾಧಿಕಾರ ಮತ್ತು ವೇದಾಧಿಕಾರ ಉಳ್ಳ ಬ್ರಾಹ್ಮಣರೇ ಆಗದಿರುವದರಿಂದ ಅವ
ಶವ ಹೊತ್ತುಕೊಂಡು ಹೋಗುವುದರಿಂದ ದೋಷ ಬರುವುದಿಲ್ಲಾ ಎಂತ ವೈರಾಗದಲ್ಲಿರು
ಸಮಸ್ತ ಬ್ರಹ್ಮವೃಂದ ವೈದಿಕ ಗೃಹಸ್ಥ ಮಹಾಜನಗಳಿಗೆ ರಾಯಸಪತ್ರ ಕೊಟ್ಟದ್ದಾ

ಕಾಶೀಮಠದ ವಸುದೇಂದ್ರ ತೀರ್ಥರು 1779ನೇ ಪಿಂಗಳ ಸಂ। ದ
ಕುಂದಾಪುರದಲ್ಲಿ ಆಶ್ವಿಜಮಾಸದಲ್ಲಿ ತಿರುಪತಿಗೆ ಹೋಗಿ ಮಾಘಮಾಸದಲ್ಲಿ ಕುಂದಾಪುರ
ವಾಪ್ಸು ಬಂದರು. ಅವರೀಗೆ ಕಾಲಯುಕ್ತಿ ಭಾದ್ರಪದದಲ್ಲಿ ಕುಂದಾಪುರದಲ್ಲಿ ಕಾಹ

ಶೆಜ್ಜಾಗಿ ಶು. ೧೨ ದಿನ ಗೋದಾನ ವಗೈರೆ ಮಾಡಿದ್ದು ದೇವರ ಪೂಜೆ ಪರರಿಂದ ಮಾಡ್ಸಿದ್ದು ನಂತ್ರ ಹುಶಾರಾಗಿ ಪುಶ್ಯ ಶು ೮ ದಿನ ಕುಂದಾಪ್ರುರದಿಂದ ಮಂಜೇಶ್ವರಕ್ಕೆ ಹೊರಟು ಹೋದರು. ಹೋಗುವಾಗ್ಯೆ ತಮಗೆ ಆಪತ್ತು ಸಂಘಟಿಸಿದ್ದೆ ಮುಂದಿನ ಏರ್ಪಾರಿ ವಿಶಯ ಬರಹ ಮಾಡಿಯಿರುತ್ತೇವೆ. ಆ ಪ್ರಕಾರ ಮಾಡಬೇಕೆಂತ ಹೇಳಿಹೋದರು ಎಂತಲೂ ಮುಂದೆ ಸಂಸ್ಥಾನ ಪಾಲಾಗುವ ಹಾಗೆ ಕಾಣುವ್ರುದಿಲ್ಲಾ ಎಂತಲೂ ಶ್ರೀ ಭುವನೇಂದ್ರ ತೀರ್ಥರಿಗೆ ಕುಂದಾಪ್ರುರ ಲಕ್ಷ್ಮಣ ಕಮ್ತಿರು ಮತ್ತು ಗುಜ್ಜಾಡಿ ಪರಮೇಶ್ವರ ನಾಯ್ಕರ ಮಗ ಪದ್ಮನಾಭ ನಾಯ್ಕರು ಕಾಲಿಯುಕ್ತಿ ಪ್ರುಶ್ಯ ವ ೧೦ಲ್ಲು ಬರಕೊಂಡಿದ್ದಾರೆ. ಅದರಲ್ಲಿಯೇ ಮಾರ್ಗಶಿರ ಬ ೧೬ಲ್ಲು ಗುಜ್ಜಾಡಿ ಪರಮೇಶ್ವರನಾಯ್ಕರು ಪುಶ್ಯ ಶು ೬ಲ್ಲು ಪೈಲೂರ ಲಕ್ಷ್ಮಣ ಶಾನಭಾಗರು ಮೃತಪಟ್ಟ ಸಂಗ್ತಿ ಬರೆದಿದ್ದಾರೆ.

ಗೋಕರ್ಣ ಮಠದ ಪದ್ಮನಾಭ ತೀರ್ಥರು ಮಂಗ್ಳೂರ ವೆಂಕಟ್ರಮಣ ದೇವಸ್ಥಾನದಲ್ಲಿ ಪ್ರವೇಶಿಸಕೂಡದೆಂತ Dy Magistrate Leggat ಇವರು Injunction Order ಕೊಟ್ಟಿದ್ದು 1880ನೇ ಇಸವಿಯಲ್ಲಿ ಎಂಬದಾಗಿ ತಾರೀಕು 19 ಸಪ್ಟಂಬರ್ 1896ರಲ್ಲು ಮಂಗ್ಳೂರ II Class ಮೆಜಿಸ್ಟ್ರೇಟ ಮಹಮ್ಮದಖಾನನು Mis. Case No. A of 1896 ಇಂದಿರಾಕಾಂತ ಸ್ವಾಮಿರು ಸದ್ರಿ ದೇವಸ್ಥಾನದಲ್ಲಿ ಪ್ರವೇಶಿಸಕೂಡದೆಂತ ಸಿ.ಪಿ.ಸಿ. ಕೋಡಿನ 144ನೇ ಕಲಂ ಪ್ರಕಾರ ಕೊಟ್ಟ ಹುಕುಮಿನಲ್ಲಿ ಕಾಣ್ಸಿದ್ದಾರೆ. 1896ನೇ ಇಸವಿಯಲ್ಲಿ ಆದ ಹುಕುಮಿನ ಕಾರಣದಿಂದ ಅರ್ಜಿಯನ್ನು ಮೊಕ್ತೇಸರ ರಂಗ ಪೈ ಮಿಜಾರ ಅನಂತ ಪೈಗಳು ಕೊಟ್ಟಿದ್ದು. ಇನ್ನಿಬ್ಬರು ಮೊಕ್ತೇಸರರು ಯು. ರಘುನಾಥ ಕಿಣಿ ಮತ್ತು ಕೊಂಚಾಡಿ ವೆಂಕಟೇಶ ಶೆಣಯಿಯವರಿದ್ದಾಗ್ಯೂ ಅವರು ಮೇಲ್ಕಂಡ ಅರ್ಜಿದಾರರ ಕೂಡುಪಿಕೆಯಿಂದಲ್ಲದೆ ಸ್ವತಂತ್ರವಾಗಿ ದೇವಸ್ಥಾನದ ಕಾರ್ಯಗಳಲ್ಲಿ ಪ್ರವೇಶಿಸಕೂಡದೆಂತ ಡಿಸ್ಟ್ರಿಕ ಕೋರ್ಟಿನಲ್ಲಿ ಆದ ಹುಕುಂ ಹೈಕೋರ್ಟಿನಲ್ಲಿ ಕಾಯಂ ಮಾಡಲ್ಪಟ್ಟಿತ್ತು.

## 32. ಗುರುಪರಂಪರೆಯ ಪರಾಮರ್ಶೆ ಸಂಸ್ಕೃತ ಶ್ಲೋಕಗಳು

ನಾಗರಿಲಿಪಿಯಲ್ಲಿರುವ ಈ ಕೆಳಗಿನ ಭಾಗವನ್ನು ಕನ್ನಡಲಿಪಿಯು ನಿರೂಪಿಸಲಾಗಿದೆ.

ಶ್ರೀಮಜ್ಜೀವೋತ್ತಮಾರಭ್ಯಾ ಯತಿಕುಲಸುಹೃದಾ ವಿಠ್ಠಲಾರಾಧಕಶ್ಚ
ವೇದೇಶಾಸ್ತ್ರೇಷ್ವಭಿಜ್ಞಾಃ ಶುಭಗುಣಮಹಿಮಾಃ ಸರ್ವವಿದ್ಯಾಸುದಕ್ಷಾ ಃ ।
ವಿದ್ಯದ್ವೇದೇ ಸುಧೀರಾಃ ಕ್ರಮಪದಸಹಿತೈಃ ಷಡ್ಭಿರಂಗೈರ್ವಿಶಿಷ್ಟಾಃ
ಸತ್ತರ್ಕೈರ್ಜಿತು ಶೀಲಾಃ ಪ್ರವಿತತಸುಗುಣಾಃ ಪಾತುಮಾಂ ಸುಪ್ರಸನ್ನಾಃ
ಶ್ರೀಮಧ್ವಂಚ ಹೃಷೀಕೇಶಂ ತಥಾತ್ಮೇಶ್ವರಸಂಭವಂ
ವಂದೇಽಪರಾಜಿತಂ ವಿದ್ಯಾನಿಧಿ ಶ್ರೀನಿಧಿಯೋಗಿನಂ ।
ವಿದ್ಯೇಶತೀರ್ಥಮುನಿಪಂ ಶ್ರೀವಲ್ಲಭಗುರುಂ ತಥಾ
ಜಗದ್ಭೂಷಣತೀರ್ಥಾರ್ಯ ರಾಮಚಂದ್ರಮುನಿಂ ತಥಾ ॥
ನಾರಾಯಣಂ ವಾಸುದೇವಂ ಜೀವೋತ್ತಮಗುರುಂಪರಂ ।
ಪುರುಷೋತ್ತಮಂ ತಥಾ ಚಾಣು ಜೀವೋತ್ತಮ ಯತೀಶ್ವರಮ್ ॥
ರಾಮಚಂದ್ರಂ ದಿಗ್ವಿಜಯ ರಾಮಚಂದ್ರಮುನಿಂ ತತಃ ।
ರಘುಚಂದ್ರಮಹಂ ವಂದೇ ಲಕ್ಷ್ಮೀನಾರಾಯಣಂ ಗುರುಂ ॥
ಲಕ್ಷ್ಮೀಕಾಂತಂ ರಮಾಕಾಂತಂ ಕಮಲಾಕಾಂತಯೋಗಿನಂ ।
ಶ್ರೀಕಾಂತಂಚ ಸದಾವಂದೇ ಭಕ್ತ್ಯಾ ವಿಠ್ಠಲಪೂಜಕಾನ್ ॥
ನವಮೀ ಮಾಘ ಮಾಸಸ್ಯ ಶುಕ್ಲಾನಂದಮುನೇರ್ದಿನಂ ।
ಸ ಚ ತತ್ತ್ವಾನಿ ಸರ್ವಾಣಿ ಬದರ್ಯಾಂ ವ್ಯಾಸಸನ್ನಿಧೌ ॥
ವದನ್ಮುನಿಭ್ಯಃ ತತ್ರೈವ ಮಧ್ವಾಖ್ಯಗುರುಃ ಸತಾ ।
ಚೈತ್ರೇ ಮಾಸಾಂ ಪುಣ್ಯತಿಥೌ ನಾರಾಯಣ ಯತೇರಹಃ ॥
ಗ್ರಾಮೇ ಭಟ್ಕಳಕೇ ನದ್ಯಾಸ್ತೀರೇ ವೃಂದಾವನಂ ಶುಭಂ ।
ತೃತೀಯಾಯಾಂ ತು ವೈಶಾಖೇ ವಾಸುದೇವಯತೇ ಪರಂ ॥
ದಿನಂ ವೃಂದಾವನಂ ಕ್ಷೇತ್ರೇ ಪಾಂಡುರಂಗಾಭಿಧೇ ಪದೇ ।
ಮಾಸೇ ಭಾದ್ರಪದೇ ಶುಕ್ಲಪಂಚಮ್ಯಾಂಚೈವ ಪಕ್ಷಕೇ ॥
ಗುರೋರ್ಜೀವೋತ್ತಮ ಮುನೇ ಸುದಿನಂ ಸಮುದೀರಿತಂ ।
ಗ್ರಾಮೇ ಭಟ್ಕಳಕೇ ಪುಣ್ಯೇ ತದ್ವೃಂದಾವನಪಿಂಡಿಕಾ ॥
ಮಾರ್ಗಶೀರ್ಷೇ ಕೃಷ್ಣಪಕ್ಷೇ ದ್ವಿತೀಯಾಯಾಂ ತು ಸತ್ತಿಥೌ ।

ಪುರುಷೋತ್ತಮ ತೀರ್ಥಾನಾಂ ಪುಣ್ಯಾಹಃ ಪರಿಕೀರ್ತಿತಃ ॥
ಗೋಕರ್ಣರುದ್ರಭೂಮೌಚ ತದ್ವೃಂದಾವನಮೀರಿತಂ ।
ಕಾರ್ತಿಕೇ ಕೃಷ್ಣಸಪ್ತಮ್ಯಾಂ ಜೀವೋತ್ತಮ ಯತೇಃ ಪರಃ ॥
ವಿಠ್ಠೋಳಿ ಗ್ರಾಮಮಧ್ಯಸ್ಥ ಮಠೇ ವೃಂದಾವನಂ ಶುಭಂ ।
ತೃತೀಯಾಯಾಂ ತು ವೈಶಾಖೇ ಕೃಷ್ಣಾಯಾಂ ಚ ತತಃ ಪರಂ ॥
ರಾಮಚಂದ್ರ ಮುನೀಂದ್ರಾಣಾಂ ಪುಣ್ಯಂದಿನಮುದೀರಿತಂ ।
ಶ್ರೀಮದ್ಋಷಿವನೇರಮ್ಯೇ ತತ್ಸಮಾಧಿರ್ಮಹೀಯತೇ ॥
ತತಃ ಪರಂ ದಿಗ್ವಿಜಯ ರಾಮಚಂದ್ರಯತೇರಪಃ ।
ಮಾಘ ಕೃಷ್ಣ ನವಮ್ಯಾಂ ತು ಅಂಕೋಲಾಯಾಂ ಸಮಾಧಿಭೂಃ ॥
ಪುಷ್ಯಮಾಸೇ ಪೌರ್ಣಮಾಸ್ಯಾಂ ರಘುಚಂದ್ರಮುನೇರ್ದಿನಂ ।
ಹೊನ್ನಾವರೇ ಮಹಾಗ್ರಾಮೇ ತತ್ಪ್ರತಿಷ್ಠಾ ಕೃತಿಃ ಪರಾ ॥
ಫಾಲ್ಗುಣೇ ಕೃಷ್ಣಸಪ್ತಮ್ಯಾಂ ಲಕ್ಷ್ಮೀನಾರಾಯಣಸ್ಯ ತು ।
ಗೋದಾವರ್ಯಾಸ್ತಟೇ ರಮ್ಯೇ ತದ್ವೃಂದಾವನ ಭೂಮಿಕಾ ॥
ಮಾರ್ಗಶೀರ್ಷೇ ಶುಕ್ಲಪಕ್ಷೇ ದ್ವಿತೀಯಾಯಾಂ ಮಹಾತಿಥೌ ।
ಲಕ್ಷ್ಮೀಕಾಂತಯತೇಶ್ಚೈವ ಸುದಿನಂ ಚ ಪ್ರಕೀರ್ತಿತಂ ॥
ಹೊನ್ನಾವರೇ ತಥಾರಮ್ಯೇ ತತ್ಪೂಜಾಭೂರುದೀರಿತಾ ।
ಮಾರ್ಗಶೀರ್ಷೇ ಶುಕ್ಲಪಕ್ಷೇ ಪ್ರತಿಪದ್ಯಾಂ ಶುಭೇದಿನೇ ॥
ರಮಾಕಾಂತ ಯತೀನಾಂ ಚ ಸುದಿನಂ ಪರಿಕೀರ್ತಿತಂ ।
ಅಂಕೋಲಾಯಾಂ ಗ್ರಾಮಮಧ್ಯೇ ಮಠೇ ವೃಂದಾವನಂ ಶುಭಂ ॥
ಪುಷ್ಯೇಚ ಶುಕ್ಲಪಕ್ಷೇಚ ಅಷ್ಟಮ್ಯಾಂ ಚ ಶುಭೇದಿನೇ ।
ಕಮಲಾಕಾಂತ ಯತೇಶ್ಚೈವ ಸುದಿನಂ ಪರಿಕೀರ್ತಿತಂ ॥
ಗೋಕರ್ಣಕ್ಷೇತ್ರ ಮಧ್ಯೇಚ ಮಠೇ ವೃಂದಾವನಂಶುಭಂ ।
ಆಷಾಢೇ ಸಿತಪಕ್ಷೇಚ ಪುಣ್ಯಾಯಾಂ ನವಮೀತಿಥೌ ॥
ಶ್ರೀಶ್ರೀಕಾಂತಯತೀಂದ್ರಾಣಾಂ ಪುಣ್ಯಾಹಂ ಸಂಪ್ರಕೀರ್ತಿತಂ ।
ಶ್ರೀಪರ್ತಗಾಳಿಪ್ರಖ್ಯಾತೀ ಮಠವಾಯುವ್ಯಕೋಣಕೇ ॥
ತೇಷಾಂ ವೃಂದಾವನಂ ರಮ್ಯಂ ಜ್ಞೇಯಂಸರ್ವಾರ್ಥಸಿದ್ಧಿದಂ ।
ಏತತ್ ಪರಂಪರಾಂ ಜ್ಞಾತ್ವಾ ಕರ್ತವ್ಯಂ ಚ ವಿಚಕ್ಷಣೈಃ ॥

## ಶ್ರೀ ಕುಂಭಕೋಣ ಮಠದ ದೇವರು

ಮಧ್ವಾದ್ಯೈರ್ದಶವಿಗ್ರಹೈ ಪರಿವೃತಂ ಪೀಠಂ ಶುಭಂ ವರ್ತುಲಂ ।
ಮಧ್ಯೇತತ್ರ ಸುದರ್ಶನಂ ಪ್ರಪದಯೋರಗ್ರೇ ನೃಕಂಠೀರವಃ ॥
ಜಂಘಾಯಾಂ ಜಯಕೀಂಕಿಣೀ ಕ್ಷಣಸಮಂ ವಾಮಂ ಕರಾಬ್ಜಂ ಶಿರಃ
ಚಕ್ರೇಶ್ಲಕ್ಷ್ಣ ಸುದರ್ಶನಂ ಚ ಮುಕುಟಂ ಜ್ವಾಲೋ....ಕೇಶಾನ್ವಿತಂ ॥
ರಾಜತಂ ರಜತಪೀಠಪಟ್ಟಣೇ ಸರ್ವದಿಗ್ವಿಜಯ ರಾಮವಿಗ್ರಹಂ ।
ಪೂರ್ಣಬೋಧಯತಿರಾಟ್ ಸ್ವಪಾಣಿನಾ ಸಂವಿಧಾಯಬಹುಕಾಲಮರ್ಚಯತ್
ರಘುಪೌ ಕಾಳಿಯಮರ್ದನೌ ಸುವಿಠ್ಠಲೌ ಭೂವರಾಟ್ ನರಸಿಂಹೌ ।
ಅನ್ಯಂವಿಠ್ಠಲಮಗಣಿತ ಮಹಿಮಾನಂ ನೌಮಿ ಮಧ್ವಗುರುಪೂಜ್ಯಾನ್ ॥
ಕರ್ಣತೋವರ್ಣತಶ್ಚೈವ ಪೀಠತಃ ಪರಿಮಾಣತಃ ।
ಸೀತಾರಾಮಾರ್ಚಯೋಃ ಸಾಮ್ಯಂ ಮೂಲರಾಮಂ ತು ಮನ್ಮಹೇ ॥

ಸತ್ಯಬೋಧರು ಹೇಳೋದು –

ಅಸ್ತ್ಯನ್ಯ ಸ್ವಮತಸ್ಥಯೋಃ ಶ್ರೀಮಧ್ವಂ ಪದ್ಮನಾಭಂ

ಆಗೋಡುರ ಶ್ಲೋಕ ಕುಂಭಕೋಣ ಪೀಳೀಗ ಹೇಳೋದು –

ಶ್ರೇಷ್ಠ ಶ್ರೀ ರಾಘವೇಂದ್ರಂ ಸಕಲಗುಣನಿಧಿಂ ಧೀರಯೋಗೀಂದ್ರ ತೀರ್ಥಂ
ಸೂರೀಂದ್ರಂ ಸದ್ಗುಣಾಢ್ಯಂ ರಘುಪತಿ ಚರಣಧ್ಯಾನಧೌತಾಘಸಂಘಂ ॥
ರಾಮಂ ವ್ಯಾಸಪ್ರಪೂಜಾಮತಿರತಿ ಸುಮತೀಂದ್ರಾಭಿಧಂ ಸಂಯಮೀಂದ್ರಂ।
ಭಕ್ತ್ಯಾಪ್ರಸ್ತೌಮ್ಯುಪೇಂದ್ರಂ ಗುರುವರಮಪಿ ಮೇ ಪ್ರೌಢವಾದೀಂದ್ರವರ್ಯಂ ॥
ವಸುಧಾತಲವಿಖ್ಯಾತಂ ವೈರಾಗ್ಯಾದಿ ಗುಣಾನ್ವಿತಂ ।
ವೇದವೇದಾಂಗ ಚತುರಂ ವಸುಧೇಂದ್ರಗುರುಂ ಭಜೇ ॥
ವಾದೇ ವಿಜಯಶೀಲಾಯ ವರದಾಯ ವರಾರ್ಥಿನಾಂ ।
ವಾದಾಂಧಜನಸಿಂಹಾಯ ವರದೇಂದ್ರಾಯ ತೇ ನಮಃ ॥
ಭೂದೇವ ವಂದ್ಯಪಾದಾಬ್ಜಂ ಭೂತಿಮಂತಮಭೀಷ್ಟದಂ ।
ಭೂತಲೇ ಸಾಧು ವಿಖ್ಯಾತಂ ಭುವನೇಂದ್ರಗುರುಂ ಭಜೇ ॥

# 33. ಶ್ರೀ ಗೋಕರ್ಣಮಠದಲ್ಲಿರುವ ನಕ್ಲು

ನಿವಾಡಾ ಪತ್ರ ಶಕೆ 1671 ಶುಕ್ಲ ನಾಮ ಸಂ। ರದ ಮಾಹೆ ಆಷಾಡ ಶು ಟಿಕ್ಕೆ ದಿವಸಿ ಲಿಖಿತೆ – ರಾಜೇಶ್ರೀ ಯಶ್ವಂತರಾವ ಮಹಾದೇವಪರಭು ವ ಗೋವಿಂದ ಪಿಂಡೇರಾವ ಪರಭು ಚಿಟನಿಸ ವ ಸಮಸ್ತ ಗೋತ್ರ ಯಾನಿ ಸಾತಾರ ಜಾಮುಕಾಮು ಶ್ರೀಮಂತ ಮಹಾರಾಜ ಛತ್ರಪತಿ ಸ್ವಾಮಿ ಸಂನಿದ ವಿನಂತಿಕೇಲಿ _ ಕೀ ವ್ರತ್ರಬಂಧ ಶ್ರೀ ಗಾಯತ್ರಿ ಉಪದೇಶ ಕರೂನ ಬ್ರಹ್ಮ ಕರ್ಮಾಸ ಅಧಿಕಾರ ದ್ಯಾಲಾ

– ಈ ಬಾಬ್ತಿನಲ್ಲಿ ಆದ ತೀರ್ಪಿನ ನಕ್ಲು ಶ್ರೀ ಗೋಕರ್ಣ ಮಠದಲ್ಲಿ ಉಂಟು. ಅದೇ ತೀರ್ಪಿನ ನಕ್ಲು ನಮ್ಮ ಹತ್ರ ಇರುವ ರಾಮಚಂದ್ರ ನರಹರ ಸೋಹನಿ ವಕೀಲಗಡ ಓಂಗಲಜ ಇವರು 1937ರಲ್ಲಿ ಮಿರಾಪುರ ಧನಂಜಯ ಪ್ರೆಸ್ಸಿನಲ್ಲಿ ಮುದ್ರಿಸಿ ಪ್ರಕಟಿಸಿದ ಪುಸ್ತಕದಲ್ಲಿ 176ನೇ ಪುಟದಲ್ಲಿ ಇರುತ್ತದೆ.

ಶ್ರೀ ಗೋಕರ್ಣಮಠದಲ್ಲಿರುವ ಇನ್ನೊಂದು ನಕ್ಲು –

ಕುಂಭಕೋಣ ಮಠದ ಯೋಗೀಂದ್ರ ತೀರ್ಥ ಸ್ವಾಮಿಗಳವರು ಸಾಗರ ಗ್ರಾಮೀಣ ತಿಮ್ಮ ಯಾ ವೆಂಕಟೇಶ ಮಹಾಲೆ ಈಶ್ವರ ಕಾಮತಿ ನಾರಾಯಣ ಶೆಣೈ ಪ್ರಮುಖ ಕೊಂಕಣ ಮಹಾಜನಾಸ – ಇವರೀಗೆ ಶಾಶ। ವರ್ಷ 1599 ನಳ ಸಂವತ್ಸರ ಆಶ್ವೀಜ ವದ್ಯ 10ರಲ್ಲು ಬರೆದ ರಾಯಸಪತ್ರದ ನಕ್ಲು ಉಂಟು. ಅದರ ನಕ್ಲು ತೆಗೆಯಲಾಗಲಿಲ್ಲಾ – ಹಿಂದಿನ ಚರಿತ್ರೆ ಉಂಟು. ಸಾರಸ್ವತರು ಬ್ರಾಹ್ಮಣರೆಂಬ ಶಾಸ್ತ್ರಾಧಾರಗಳನ್ನು ಬರೆದಿದ್ದಾರೆ. ಸಾಧಾರಣವಾಗಿ ನಮ್ಮ ಹತ್ರ ಇರುವ ಇದೇ ಸ್ವಾಮಿರು ನಗರದ ಜನ್ನಮ್ಮಾಜಿಯವರೀಗೆ ಬರೆದ ರಾಯಸದಂತೆಯೇ ಉಂಟು.

ಈ ಮೇಲೆ ಇರುವುದು ಮತ್ತು ಈ ಹಾಳೆಯ ಹಿಂಬದಿಯಲ್ಲಿರುವುದು ಕೂಡಾ ಶ್ರೀ ಗೋಕರ್ಣಮಠದ ಶ್ರೀಮದ್ ದ್ವಾರಕನಾಥ ತೀರ್ಥ ಸ್ವಾಮೀರು ಗಂಗೋಳಿಗೆ ಬರುವಾಗ್ರೆ ನನ್ನ ಅರಿಕೆಯಂತೆ ಅವರ ಜೊತೆಯಲ್ಲಿ ತಂದಿರುವ ಹಿಂದಿನ ದಾಕ್ಲೆಗಳಲ್ಲಿ ಇದ್ದ ಒಂದು ಹಳೇ ಪತ್ರದ ಯಥಾ ಉತಾರನ್ನು ಅವರ ಜೊತೆಯಲ್ಲಿ ಬಂದಿದ್ದ ಕುಮಟಾ ಅನಂತ ವೈಕುಂಠ ಭಟ್ಟ (ಜೀರಬಲ ಅಡ್ಡ ಹೆಸರು) ಯೆಂಬವರ ಹಸ್ತಾಕ್ಷರದಿಂದ ಇದರಲ್ಲಿ ಬರಸಿಟ್ಟ ತಾರೀಕು 5ನೇ ಮಾರ್ಚ 1945ನೆ ಇಸ್ವಿ. ಮೊಕ್ಕಾಂ ಗಂಗೊಳ್ಳಿ.

ಶ್ರೀ ವೇದಾವ್ಯಾಸಾಯ ನಮಃ 4691 ಗತ ಕಲಿಃ (ಶಾಲಿವಾಹನ ಶಕ 1512 ವಿಕ್ರಮ ಸಂ। ) ಏಕನವತ್ಯಧಿಕ ಷಟಶತೋಸ್ತ್ರತು ಸಹಸ್ರಾಬ್ದಕ್ಕೆ ಕೊಟ್ಟಿ ಮಹಾ ದೇವಸ್ಥಾನೇ ಶ್ರೀ ವೆಂಕಟೇಶ ಸಂನಿಧೌ ವೈದಿಕಪ್ರಭೃತಿ ಸರ್ವೇ ಗೃಹಸ್ಥಾಶ್ಚ ಏಕತ್ರ ಮಿಲಿತ್ವಾ ।

ಶ್ರೀಮದ್ವತೀಯ ಜೀವೋತ್ತಮಾನುವಾದ ಪೂರ್ವಕಂ ಭಟಕಳಸ್ಥ ಸಮತ್ಯಾ ಸರ್ವೇಷಾಂ ಅಸ್ಮದೀಯಾನಾಂ ಕೊಚ್ಚಿ ಪಟ್ಟಣಸ್ಥಾನಾಂ ಚ ಸಮತ್ಯಾ ವಿಜಯೀಂದ್ರಯತೀಂದ್ರಾಣಾಂ ಚ ಅಸ್ಮಾಸು ಅತೀವಧೀತಿಃ ನಿತರಾಂಚ ಸತ್ಪ್ರತಿ ಪಕ್ಷಿತ್ವ ದರ್ಶನೇನ ಚ ತದ್ ಹಸ್ತಾದ್ದಂಡಪ್ರವೃತ್ತಿ ಕೀಯತೇ ॥ ಯದು ತೀರ್ಥೇನ ಇತಿ ಸಕಲ ಸಮತ್ಯಾಚ ಏಕಂ ತಾಮ್ರಪಟ್ಟ ಲಿಖಿತ್ವಾ ಅಸ್ಮಾಕಂ ತೇಷಾಚ ಮರ್ಯಾದಾ ಯಥಾಯೋಗ್ಯತ ಯೇತಿ ತತ್ರಾಪಿಪಟೇ ಲಿಖಿತಮಸ್ತಿ ಅಸ್ಮಾಭಿರ್ದಿವ್ಯಜಯಾಜಿತೇವದ್ವಸುತ್ ತೃತೀಯಾಂಶಾಸ್ತೇಭ್ಯಃ ತಥಾಚೇತೇ ರಾಜಿತಸ್ಯಾಸ್ಮಚಃ ತತ್ತಿಯಾಂಶೋಸ್ಮಾಕಂ ಮಿತಿ ಅಸ್ಮಾಭಿಃ ಯದಾರ್ಜಿತಂ ತತ್ಸರ್ವಂ ಪೂರ್ವಂ ವಿಠಲಾರ್ಪಣಂ ವಿಧಾಯ ಅಸ್ಮದ್ವರ್ಗಪಾಲನಂ ಕರ್ತವ್ಯಂ ॥ ಏವಂ ವೃತ್ತಂ ॥ ಏತಸ್ಯ ಕಾರಣಂ ಸರ್ವ ಲಿಖಿತ್ವಾ ಗೋಕರ್ಣೇ ಅಸ್ತಿ ॥

# 34. ಇನ್ನೂ ಕೆಲವು ಶಿಲಾಶಾಸನಗಳು

ಸೋಂದೆಯಲ್ಲಿ ಶ್ರೀ ವಾದಿರಾಜ ಸ್ವಾಮಿಗಳು ಶಾ. ಶ. 1504ನೇ ಚಿತ್ರಭಾನು ಸಂ। ರದ ವೈಶಾಖ ಶು ೧೫ಯು ಬುಧವಾರ ದಿನ ಪ್ರತಿಷ್ಠೆ ಮಾಡಿದ ಶ್ರೀ ತ್ರಿವಿಕ್ರಮ ದೇವರ ವಿನಿಯೋಗಗಳ ಬಗ್ಗೆ "ಶ್ರೀಮದ್ರಾಜಾಧಿರಾಜ ರಾಜಪರಮೇಶ್ವರ ಶ್ರೀ ವೀರಪ್ರತಾಪ ಶ್ರೀ ವೆಂಕಟಪತಿ ಮಹಾರಾಯರ ಆಜ್ಞಾಧಾರಕರಾದ ಸೋದೆಯ ಅರಸಪ್ಪ ನಾಯಕರು" ಶಾ. ಶ. 1515ನೇ ವಿಜಯ ಸಂ। ರದ ಕಾರ್ತಿ ಶು 15ರಲ್ಲು ಕೆಲವು ಗ್ರಾಮಗಳನ್ನು ಬಿಟ್ಟು ಬರಕೊಟ್ಟ ಶಿಲಾಶಾಸನ ಸದ್ರಿ ದೇವಸ್ಥಾನದಲ್ಲಿ ಉಂಟು. –

ಶ್ರೀ ವಾದಿರಾಜ ಸ್ವಾಮಿಗಳು ಪರಂಧಾಮವನ್ನು ಹೊಂದಿದ ದಿನ ಶಾಲಿವಾಹನ ಶಕ ವರ್ಷ 1522ನೇ ಶಾರ್ವರಿ ಸಂ। ರದ ಫಾಲ್ಗುಣ ಬ 3ಯು ಬುಧವಾರ (ಕ್ರಿ. ಶ. 1600)

1958ನೇ ಇಸ್ವಿ ಒಕ್ಟೋಬರ ತಿಂಗಳಲ್ಲಿ ಪ್ರಕಟವಾದ **ಮುಂಬೈ ಮರಾಠಿ ಸಂಶೋಧನ** ಪತ್ರಿಕಾ ತ್ರೈಮಾಸಿಕ – ಇವರಲ್ಲಿ ಈ ಕೆಳಗಿನ ಶಿಲಾಶಾಸನದ ಚಿತ್ರ ಮತ್ತು ಅದನ್ನು ಓದಿ ಅರ್ಥವನ್ನು ವಿವರಿಸಿದ್ದಾರೆ. ಈ ಶಿಲಾಶಾಸನವು ಕೊಲಾಬಾ ಜಿಲ್ಲಾ ಆಲಿಬಾಗ ತಾಲೂಕಿನ ಅಕ್ಷಿ ಎಂಬ ಊರಿನಲ್ಲಿ ಅದೆ. ಇಲ್ಲಿ ಮುಂಚೆ ಶಿಲಾಹಾರ ಅರಸರು ರಾಜ್ಯವಾಳುವಾಗ್ಗೆ ಗೋವೆಯ ಸಾರಸ್ವತರು ಅವರ ಮಂತ್ರಿಗಳಾಗಿದ್ದರು. ಈ ಶಾಸನದಲ್ಲಿ ಶ್ರೀ ಕೊಂಕಣಾಚಲಪತಿಯಾದ ಶ್ರೀ ಕೇಶವ ದೇವರಾಯನ ಮಹಾಪ್ರಧಾನನಾದ "ಭಯಿರ್ಜ ಶೆಣಯಿ" ಎಂಬವರು ಶ್ರೀ ಲಕ್ಷ್ಮೀ ದೇವಿಗೆ ಶಾಲಿವಾಹನ ಶಕ 924ನೇ ಪರಿಧಾವಿ ಸಂವತ್ಸರದ ಅಧಿಕ ಜೇಷ್ಠ ಬಹುಳ...... ಶುಕ್ರವಾರದಲ್ಲು ಮಾಡಿದ ಭೂದಾನಯೆಂತ ಬರೆದದೆ –

ಶರಾವತಿ ನದಿಯ ದಕ್ಷಿಣಕ್ಕೆ ಕಾಸ್ರಕೊಡ ಹೊಳೆಬದಿಯಲ್ಲಿ ಪೂರ್ವಾಭಿಮುಖಿ ವಾಗಿರುವ ಬಿಂದುಮಾಧವದೇವರು ಮತ್ತು ಯಡಬದಿಯ ಕೋಣೆಯಲ್ಲಿ ವಿಶ್ವೇಶ್ವರ ದೇವರ ಲಿಂಗ ಸಹಾ ಪ್ರತಿಷ್ಠಿತವಾಗಿರುವ ದೇವಸ್ಥಾನದ ಶಾಸನದ ನಕ್ಲು.

ಶುಭಕೃತು ಸಂವತ್ಸರ (ಶಾಲಿವಾಹನ ಶಕ 1585) ಜೇಷ್ಠ ಬ 5ಯಲ್ಲು ಶ್ರೀಮತು ಕೆಳದಿ ಭದ್ರಸ ನಾಯ್ಕರು ರಾಮಚಂದ್ರ ಮಲ್ಲಿಗೆ ಬರೆಸಿ ಕಳುಹಿಸಿದ ಕಾರ್ಯ

ವಿಠಲ ಮಲ್ಯರ ಮಗ ನಾರ್ಣ ಮಲ್ಯನು ಗೆರ್ಸಪ್ಪೆ ಹೊಬಳಿ ಕಾಸರಗೋಡು ಗ್ರಾಮದಲ್ಲು ಕಟಿಸ್ತ ವಿಶ್ವೇಶ್ವರ ಬಿಂದು ಮಾಧವ ದೇವರಿಗೆ ಸಹಾ ಸ್ವಾಸ್ತಿ ಆಗಬೇಕೆಂದು ಹೇಳಿಕೊಂಡಲ್ಲಿ ಆ ಸ್ವಾಸ್ತಿ ಬಗ್ಗೆ ಅರಮನೆಗೆ ಕ್ರಯವಾಗಿ ಗ 240 ಇನ್ನೂರ ನಾಲ್ವತ್ತು

ವರಹಾನ್ನ ತೆಗೆದುಕೊಂಡು ಗೆರಸಪ್ಪಿ ಹೋಬಳಿ ಕಾಸ್ರಕೊಡ ಗ್ರಾಮದಿಂದಲು ಗ ೨೪ ಇಪ್ಪತ್ತನಾಲ್ಕು ವರಹಾನ್ನ ಸ್ವಾಸ್ತಿಯನ್ನು ಕ್ರಯದಾನವಾಗಿ ಶಿವಾರ್ಪಿತವಾಗಿ ಬಿಟ್ಟಿದ್ದೇವೆ. ಇದಕ್ಕೆ ಭೂಮಿ ವಕ್ಕಲು ಸಹಾ ವಿಂಗಡಮಾಡಿಕೊಟ್ಟುಚಗ್ರಾಮದವರ ಕರ್ಸಿಕೊಂಡು ಗಡಿ ತಕ್ರಾರು ಬಾರದ ರೀತಿಯಲ್ಲಿ ಚತುರ್ಗಡಿಗೆ ಲಿಂಗಮುದ್ರ ಕಲ್ಲು ಸ್ಥಾಪಿತವ ಮಾಡಿಕೊಡುವದೆಂದು ಬರೆದ ನಿರೋಪಪ್ರತಿ.

ಈ ಪ್ರಮಾಣೆಗೆ ತಾಂಬ್ರ ಸಾದನ ಪ್ರಮಾಣೆ ಕಾಸ್ರಕೊಡ ಜಿಳಿಹೊಯ್ಗೆ ಬೈಲಲ್ಲು ವಳಂಬೈಲು ಗದ್ದೆ ಜೀಜ ಮು ೨೪ ॥ ಗೇಣಿ ಅಕ್ಕಿ ಮುಡಿ ೮೫॥ರ ಅಕ್ಕಿ ಮುಡಿ ೧ರ ಭತ್ತ ಮುಡಿ ೩೧೬ಲ್ಲು ಸಲುವ ಭತ್ತ ಮುಡಿ ೨೭೪।೧೨ರ ಕಣಜ ಮುಡಿ ೮ರ ನಾಡ ಮುಡಿ ೭ಲ್ಲು ಸಲುವ ಭತ್ತ ಮುಡಿ ೨೪೦ರ ೧ರ ಮುಡಿ ೧೦ರ ಪ್ರಕಾರ ಗ ೨೪ರ ವಿವರ ಆ ದೇವರ ದೇವತಾ ವೆಚ್ಚ ಗ ೧೨ ಸತ್ರ ಧರ್ಮಕ್ಕೆ ಗ ೧೨ ಉಭಯಂ ಗ ೨೪ ಈ ದೇವಸ್ಥಾನದ ಸುತ್ತುವರಿ ಬೇಲೆ ಮೇಲೆ ಹಾಕುವ ತೆಂಗಿನ ಸಶಿ 1200 ಸಾವಿರದ ಇನ್ನೂರು ಸಶಿ ಫಲ ಬಂದ ಮೇಲೆ ಆ ಫಲವನ್ನು ಆ ದೇವರ ದೇವತಾ ವೆಚ್ಚಕ್ಕೆ ನಿನ್ನ ಸಂತಾನ ಪಾರಂಪರ್ಯಾಗಿ ನಡಿಸಿಕೊಂಡು ಬಹಾದೆಂದು ಕೊಟ್ಟ ತಾಂಬ್ರ ಸಾಧನ ೧ರ ಪ್ರತಿ

ಮಿಸಲೆನ್ಸ ಸಂಬ್ರ 348/1848ನೇ ಅರ್ಜಿಗಾದ ಹುಕುಂ ಪ್ರಕಾರ ಅರ್ಜಿದಾರನ ಅಪೇಕ್ಷೆ ಪ್ರಕಾರ ಎಂದ್ರೆ ಈ ಪಾನಿನಲ್ಲಿರುವ * * * * *

ತಾಂಬ್ರ ಶಾಸನದ ನಕ್ಲು ಅರ್ಜಿದಾರ ಹಾಜರು ಮಾಡಿದ ಠಸೆ ಕಾಗ್ತ ೧ಲ್ಲು ತಯಾರು ಮಾಡ್ಲಿ ಕೊಡಲಾಯ್ತು. ಬ ತಾ ೯ನೇ ಅಗೋಸ್ತು 1848ನೇ ಇಶ್ವಿ –

ಸಹಿ ಉತಾರ

ಮೊ ಮಂಜುನಾತಯ್ಯಾ

ಕಾ। ಎಂತ ಅದೆ. (Sd) Fr. Lascelles

(Civil Judge)

ತಾ. ನಂಬ್ರ ೨೪೦ನೇ ಅರ್ಜಿಗಾದ ಹುಕುಂ ಪ್ರಕಾರ ಇದನ್ನು ಅರ್ಜಿದಾರ ಕೃಷ್ಣ ಪುರಾಣಿಕ ಈತಗೆ ಕೊಡಲಾಯ್ತು. ತಾ. 14ನೇ ಮಾರ್ಚಿ 1887 ಇಸ್ವಿ – ಇಂಗ್ರೆಜಿ ಸಹಿ ಅದೆ. ಕ್ಲಾರ್ಕ್ ಆಫ್ ದಿ ಕೋರ್ಟ್ ಎಂತ ಅದೆ. ಮೃತ ಖಾತೆದಾಕಲಾಗೊ ಸಂಬಂಧ ಇದ್ರ ಉಕಾರ ತೆಗೆದುಕೊಂಡು ಪ್ರಕರಣದ ಲಗ್ತ ಕಳುಪ್ಸಿ ಅದೆ.

ತಾ. 22ನೇ ಜೂನ 1887ನೇ ಇಸ್ವಿ – ಮಂಜುನಾಥಯ್ಯ ಶ್ಯಾ॥ಬಾಗ ಕಾಸ್ರಕೊಡ ಸದರಿ ದೇವನಿಜನದ ಪುರಾಣಿಕರಿಂದ ಪತ್ರಗೋಡಿ ಏಥಾನಕ್ಲು ಬರಕೊಂಡ ತಾ. 29–8–1955

## 35. ಕುಂಭಕೋಣ ಮಠದ ಶ್ರೀಮತ್ಸತ್ಯಾಭಿನವತೀರ್ಥರ ರಾಯಸಪತ್ರ

### ಶ್ರೀ ರಾಮಚಂದ್ರ

ಶ್ರೀಮತ್ಪರಮಹಂಸ ಪರಿವ್ರಾಜಕಾಚಾರ್ಯವರ್ಯೇತ್ಯಾದ್ಯನೇಕ ಗುಣಸಂಪನ್ನರಾದ ಶ್ರೀಮದ್ರಾಮಚಂದ್ರ ದೇವರ ದಿವ್ಯಶ್ರೀಪಾದಪದ್ಮಾರಾಧಕರಾದ ಶ್ರೀ ಸತ್ಯನಾಥ ತೀರ್ಥಶ್ರೀಪಾದ ವಡೆಯರ ಕರಕಮಲಸಂಜಾತರಾದ ಶ್ರೀಮತ್ಸತ್ಯಾಭಿನವತೀರ್ಥ ಶ್ರೀಪಾದವಡೆಯರು –

ಅಸ್ಮತ್ ಪರಮಪ್ರಿಯಮಿತ್ರ ಗೌಡಸಾಂಪ್ರದಾಯಿಕ ಕಾಶೀಮಠದ ಕೊಂಕಣದೇಶಸ್ಥ ರಾಘವೇಂದ್ರ ತೀರ್ಥವಡೆರಿಗೆ ಮಾಡುವ ಸ್ಮರಣೆ – ಅದ್ಯ ಶ್ರೀಮುಖಿ ಸಂವತ್ಸರದ (ಶಾ. ಶ. 1615) ಚೈತ್ರ ಶುದ್ಧ ೫ಮಿ ನಿರುದ್ದಕ್ಕೆ ಶ್ರೀ ಸ್ವಾಮಿಗಳಾದ ಪರಮಾನುಗ್ರಹದಿಂದ ಸ್ನಾನಜಪದೇವತಾರ್ಚನೆ ವ್ಯಾಖ್ಯಾನ ಮಾಡಿಕೊಂಡು ಯೋಗಕ್ಷೇಮದಲ್ಲಿ ಇದ್ದೇವೆ. ನಿಮ್ಮ ಯೋಗಕ್ಷೇಮಾತಿಶಯಂಗಳಿಗೆ ಬರಸಿ ಕಳುಹೋದು ತರುವಾಯ ನಿಮಗೆ ದೇಶಸಂಚಾರ ಮಾಡುವಾಗ್ಯ ಶ್ರೀಕುಂಭಕೋಣ ಮಠದ ಶ್ರೀಪಾದಂಗಳವರು ವಿಹಿತವಾಗಿ ಕೊಟ್ಟ ಪೂರ್ವದ ತಾಮ್ರಶಾಸನದ ಪ್ರಕಾರಕ್ಕೆ ಆ ಬಿರಾದಿಂಯಲ್ಲಿ ನೀವು ಸಂಚರಿಸೋಣವಾಯಿತು. ಅದನ್ನು --ಯೋಗ ನಿಮ್ಮ ಪೂರ್ವ ಮಠ ಸಾಂಪ್ರದಾಯಿಕ ರಿಯದೇ ಕೆಲವು ಕುತ್ಸಿತ ಜನರ ನಿಮ್ಮಲ್ಲಿ ಮಾತ್ಸರ್ಯದಿಂದ ಕಾರಣವಿಲ್ಲವೆಂದು ದೂಷಿಸುತ್ತಾರೆಂಬ ಯಾವದ್ವಿದ್ಯಮಾನವು ನಮ್ಮ ಮಠಸ್ಥ ಯಮುಪತ್ಯಾಚಾರ್ಯನು ನಿಮ್ಮ ಮನೋವೃತ್ತಿಯನ್ನು ಬಿನ್ನಹ ಮಾಡಿಕೊಳ್ಳಲಾಗಿ ನಮಗೆ ಯಾವತ್ತು ವಿದಿತವಾಯಿತು. ಎಲ್ಲಾ ಮಠಸ್ಥರು ತಮ್ಮ ತಮ್ಮ ಸಂನ್ಯಾಶ್ರಮಕ್ಕೆ ಯೋಗ್ಯವಾದ್ದೇ ಬಿರುದುಗಳೆಂದು ಸ್ವೇಚ್ಛಾನುಸಾರವಾಗಿ ಬಿರುದುಗಳಾ ಧರಿಸಿಕೊಂಡು ಸಂಚರಿಸೋಣ ಆಗೋದಿಲ್ಲವೇ. ಅದು ವಿಹಿತವಾದರೆ ನಿಮಗೂ ಮತ್ತೊಬ್ಬ ಹೇಳಬಹುದು. ನಿಮ್ಮ ಸಂಸ್ಥಾನಕ್ಕೆ ಪೂರ್ವಶಾಸನಪ್ರಕಾರ ದೇಶಗಳಲ್ಲಿ ಸರ್ವಮಠಸ್ಥರು ಸಂಚರಿಸುವ ಹಾಗೆ ನೀವು ಬಿರುದುಗಳ ಧರಿಸಿಕೊಂಡು ಸಂಚರಿಸಿದರೆ ಕ್ಷುದ್ರಜನರಿಗೆ ನಿಮ್ಮನ್ನು ಕೇಳ ಕಾರಣ ವೇನಿದ್ದೀತು. ಅಥವಾ ಅಂಥಾ ಜನರು ನಿಮ್ಮನ್ನಾ ಉಪದ್ರಗಳ ಮಾಡಿದರೆ ನಾವು ಉಭಯ ಮಠಸ್ಥರು ಬರಸಿಕೊಟ್ಟ ಶಾಸನ ಪತ್ರಗಳ ನೀವು ಅವರನ್ನು ತೋರಿಸಿ ಯಥಾಪ್ರಕಾರಕ್ಕೆ ಬಿರುದುಗಳ ಧರಿಸಿಕೊಂಡು ದೇಶಸಂಚಾರಗಳ ಮಾಡಿಕೊಂಡು ನಿಮ್ಮ ಸಾಸಷ್ಟಿಯೊಳಗುಳ್ಳ ಅಷ್ಟ ಗ್ರಾಮಗಳ ಮುಖ್ಯಗ್ರಾಮ ಮಠಗ್ರಾಮ, ಕುಂಡೋದರಿ, ವರುಣಾಪುರಿ, ನಾಗವಲ್ಲಿ ಬಾಣಾವಲಿ, ಶಂಖಾವಳಿ, ಲಾವಣ್ಯಪುರಿ, ಬಾಂದವಾಡಿ,

ಕುಶಸ್ಥಳಿ ಇತ್ಯಾದಿ ದೇಶಗಳಲ್ಲಿ ಹಂತಾ ಇದಲ್ಲದೇ ಸಪ್ತಕೊಂಕಣಾ ಸೋದೆ – ಬಿಳಗಿ – ಬಿದರೂರು – ತೀರ್ಥರಾಜಪುರ – ಶೃಂಗೇರಿ – ಗೋಶ್ರೀಪುರ – ಮಂಜೇಶ್ವರ – ಮಂಗಳೂರು – ಕಾಶಿ– ರಾಮೇಶ್ವರ ಮೊದಲಾದ ದೇಶಗಳಲ್ಲಿ ಇಹಂ ಥಾ ಸ ಮಂತ್ರೋಕ್ತ ಶೋಡಶಸಂಸ್ಕಾರಯುಕ್ತರಾದ ಶಟ್ಕರ್ಮಾಧಿಕಾರಿ ಯಾವತ್ಕೊಂಕಣ ದೇಶಸ್ಥ ಬ್ರಾಹ್ಮರಗಳನ್ನು ಮಂತ್ರಮುದ್ರಾಧಾರಣೆ ಮಾಡಿ ನೀವು ನಿಮ್ಮ ಪರಂಪರೆಯವರು ಸಹಾ ಮಾಡಿಕೊಂಡು ಆಚಂದ್ರಾರ್ಕ ಸ್ಥಾಯಿಗಳಾಗಿ ಉತ್ತರತ್ರ ನಿಮ್ಮ ಸಂಸ್ಥಾನ ನಮ್ಮ ಉಭಯಸಂಸ್ಥಾನದೋಪಾದಿಯಲ್ಲಿ ಮಾನಮರ್ಯಾದೆಗಳಿಂದ ನಡಕೊಂಡು ಬಹೋದು. ಇದೇ ಮೇರೆಗೆ ನಮ್ಮ ಪರಂಪರೆಯವರು ನಿಮ್ಮ ಪರಂಪರೆ ಯವರೀಗೆನಡಿಸಿಕೊಂಬ ಹಾಗೆ ಉತ್ತರತ್ರ ವಹಿಸಿ ನಡೆಸುವ ಹಾಗೆ ಶಾಸನ ಪತ್ರಗಳ ಬರಕೊಟ್ಟು ಇದ್ದೇವೆ. ನೀವು ಗತವರ್ಶದಲ್ಲಿ ಗಂಗಾಂತರ್ಗತ ಮಣಿಕರ್ಣಿಕಾದಿ ತೀರ್ಥಸ್ಥಾನ ವ್ಯಾಖ್ಯಾನ ರಾಮನವಮಿ ಮಹಾಭಿಶೇಕ ನಖಾಭಿಶೇಕ – ಮೊದಲಾದ ಮಹೋತ್ಸವ ಮಾಡಿ ಉಭಯತರು ಸಾಹಾ ಕೂಡಲೇ ಸ್ನಾನ ದೇವತಾರ್ಚನ ವ್ಯಾಖ್ಯಾನ ಮಾಡಿಕೊಂಡು ವೈಕುಂಠ ಸುಖಾನುಭವಿಗಳಾಗಿ ಕ್ಷೇಮದಿಂದ ಗಯಾಸ್ನಾನಾದಿಗಳನ್ನಾಗಿ ಮಾಡಿಸಿದವರಾದ ಕಾರಣ ನಿಮ್ಮ ಸಂಸ್ಥಾನ ಉತರತ್ರ ನಡಿಸುವ ಸಾಭಿಮಾನವು ನಮ್ಮ ಸಂಸ್ಥಾನಕ್ಕೆ ಹೊರತು ಬೇರೆ ಇಲ್ಲಾ – ಕಿಂಚಿತು ಕುಂಭಕೋಣ ಮಠದ ಶ್ರೀಪಾದಂಗಳಿಗೂ ನಿಮಗೂ ಕ್ಷುದ್ರ ಜನರಿಂದ ಮನೋವೈಕಲ್ಯ ಹುಟ್ಟಿ ಅದೆ ಎಂಬ ವರ್ತಮಾನವು ನಮಗೆ ಪರಭಾರಶ್ರುತವಾದರಿಂದ ನೀವು ಅವರಿಗೆ ನಡಕೊಂಡ ರೀತಿಯಲ್ಲಿ ನಮ್ಮ ಸಂಸ್ಥಾನಕ್ಕೆ ಉತ್ತರತ್ರ ನೀವು ನಡಕೊಂಡು ಬಂದೆವೆಂದರೆ ಅವರಕ್ಕಿಂತಲೂ ಇತ್ಯೋಪಧಿಕವಾಗಿ ನಡೆಸಿಕೊಂಡು ಬಹೋ ವಿಶಯದಲ್ಲಿ ನಮ್ಮ ಶಾಸನ. ಇದಕ್ಕೆ ಶ್ರೀ ರಾಮಚಂದ್ರ ದೇವರೇ ಸಾಕ್ಷಿ. ನಮ್ಮ ಹೃದತವು ಬಹುಶಾ ನೀವು ಬಲ್ಲವರಷ್ಟೆ. ಸ್ವತ ಏವ ನೀವು ಅಭಿಜ್ಞರಾದ ಬಳಿಕ ಪತ್ರದಲ್ಲಿ ವಿಶೇಷವಾಗಿ ಬರೆವದೇನಿದೆ. ಮಿಗಿಲಾದ ವರ್ತಮಾನಾ ನಿಮ್ಮ ಸುಬ್ಬಾವಧಾನಿ ನಮ್ಮ ಯದುಪತ್ಯಾಚಾರ್ಯನು ನಿಮಗೆ ಯಾವತ್ತು ವಿಧೀತ ಮಾಡಲಾಗಿ ತಿಳಿಯಲಾದೀತು. ಕೆಲವ ಸ್ಮಾರ್ತರು ನಿಮ್ಮಲ್ಲಿ ಕುಚೋದ್ಯಗಳ ಮಾಡುತ್ತಾರೆಂಬ ಬಗ್ಗೆ ಅವರೀಗೆ ನಿಮ್ಮನ್ನಾ ಕೇಳಕಾರಣವೇನಿದ್ದಿತು. ಅವರೀಗೆ ನಾವು ಉಭಯ ಮಠಸ್ಥರು ಈ ಬಗ್ಗೆ ಉದಾಹರಣೆ ಹೇಳಿ ಪರಿಹರಿಸಿಕೊಟ್ಟೇವು. ಶ್ರುತವಿರಲಿ ಇವರ ಹತ್ರ ಶಾಲು ಜೋಡಿ ೧ ಪೀತಾಂಬರ ೧ ಶ್ರೀಮುಡಿಗಂಧ ಪ್ರಸಾದ ಮಂತ್ರಾಕ್ಷತಾ ಕಳುಹಿದ್ದೇವೆ. ತೆಗೆದುಕೊಂಬೋದು ಶ್ರೀ

ಈ ದಾಕ್ಲೆಯು EX XIII Presented by Narayana Bhamdary in Cr.

## 36. ಕುಂಭಕೋಣಮಠದ ಶ್ರೀಮತ್ಸುಬೋಧೇಂದ್ರ ತೀರ್ಥರ ರಾಯಸಪತ್ರ

ಶ್ರೀ ಕಾಶಿಮಠದ ಸುರೇಂದ್ರ ತೀರ್ಥರ ವಿಶಯವಾಗಿ ಕುಂಭಕೋಣ ಮಠ ಶ್ರೀಮತ್ಸುಬೋಧೇಂದ್ರ ತೀರ್ಥರು ಬರೆದದ್ದು –

ಶ್ರೀ ಸ್ವಸ್ತಿ ಶ್ರೀ (ಶಾ. ಶಕ. 1727 ಕ್ರಿ. 1805) ಕ್ರೋಧನ ಸಂ। ವೈಶಾ ಶು. 3ಲ್ಲು ಶ್ರೀಮತ್ಪರಹಂಸ ಪರಿವ್ರಾಜಕಾಚಾರ್ಯರಾದ ಪದವಾಕ್ಯ ಪ್ರಮಾಣ ಪಾರಾವಾ ಪಾರಂಗತರಾದ ಶ್ರೀಮದ್ರಾಮಚಂದ್ರ ದೇವರ ದಿವ್ಯ ಶ್ರೀಪಾದಪದ್ಮಾರಕರಾದ ಶ್ರೀ ಮದ್ವರದೇಂದ್ರ ತೀರ್ಥ ಶ್ರೀ ಪಾದಂಗಳವರ ಕರಕಮಲ ಸಂಜಾತರಾದ ಶ್ರೀಮದ್ಭುವನೇಂ ಶ್ರೀಪಾದಂಗಳ ವರಕುಮಾರಕರಾದ ಶ್ರೀಮತ್ಸುಬೋಧೇಂದ್ರ ತೀರ್ಥ ಶ್ರೀಪಾದಂಗಳವರ ನಮಗೆ ಪರಮಪ್ರಿಯರಾದ ಉಡುಪು – ಕೊಡಿಯಾಳ, ಕೋಟ, ಕೋಟೇಶ್ವರ, ಬಸರೂರು ಕುಂದಾಪುರ, ಶಂಕರನಾರಾಯಣ, ಕೊಲ್ಲೂರು, ಗೋಕರ್ಣ ಮುಂತಾದ ಸ್ಥಳಗಳಲ್ಲಿ ಅಶೇಷ ವಿದ್ವದ್ವೈದಿಕ ಕಥಾ ಅಶೇಷ ಗೃಹಸ್ಥರೀಗೆ ಮಾಡುವ ನಾರಾಯಣ ಸ್ಮರಣ – ನಾವು ಗುರುದೇವತಾ ಅನುಗ್ರಹದಿಂದ ಸ್ನಾನಜಪ ದೇವ ಪೂಜಾದಿಗಳನ್ನು ಮಾಡಿಕೊಂಡು ನಿಮಗೆ ಶ್ರೇಯೋಭ್ಯರ್ಥವಾಗಿ ಶ್ರೀಮದ್ರಘುಪತಿ ವೇದವ್ಯಾಸ ದೇವ ಪ್ರಾರ್ಥನೆ ಮಾಡಿಕೊಳ್ಳುತಾ ಪರಿಣಾಮಕ್ಕೆ ಬರಶಿ ಕಳವಹುದು. ನಾವು ಘಟ್ಟದ ಕೆಳಗೆ ಪ್ರಯಾಣ ಮಾಡಿ ಬರುವ ಸಮಯದಲ್ಲಿ ನಮ್ಮ ಕಡೆ ಬ್ರಾಹ್ಮಣರ ಸಂಗಡಾ ಕೊಂಕಣ ಸಂನ್ಯಾಶಿಗೆ ಬರುವ ಹಾಗೆ, ರಾಯಸ ಬರಶಿ ಕಳುಹಿಸಿ ಇದ್ದೆವು. ಆ ರಾಯಸ ನೋಡಿಕೊಂಡು ಉತ್ರಾ ಕಂಡಾಕ್ಷಣವೇ ನಮ್ಮ ದರ್ಶನಕ್ಕೆ ಬರುತ್ತೇನೆ ಎಂತ ನಮ್ಮ ಬ್ರಾಹ್ಮಣರ ಸಂಗಡ ಹೊರಟು ಗಂಗೊಳ್ಳಿಗೆ ಬಂದು ಆಮೇಲೆ ದರ್ಶನ ವಿಶಯಕ್ಕೆ ನಾನಾವಿಧ ದುಷ್ಟ ಚತುಷ್ಟಯ ಯಾರ್‍ಯಾರ ದುರ್ಮಂತ್ರ ಕೇಳಿ ತನ್ನ ಸ್ವರೂಪ ಯೋಗ್ಯತೆ ಮೀರಿ ಮಾನಮರ್ಯಾದೆಗಳು ಆಗಬೇಕು ಎಂತ – ತಿಂಗಳು ಎರಡು ತಿಂಗಳು ಪರಿಯಂತ ನಮ್ಮಲ್ಲಿ ಬಸ್ರೂರ ಸ್ಥಳದಲ್ಲಿ ನಮ್ಮ ದರ್ಶನ ಮಾಡುತ್ತೇನೆ. ದಿನಸ್ವವಧಾನ ಮಾಡಿಸಿ ಪ್ರಾಕು ನಮ್ಮ ಸಂಸ್ಥಾನ ಪಾರಂಪರ್ಯವಾಗಿ ನಡೆದುಬಂದು ಗುರುಶಿಷ್ಯ ಭವ ಅನುಸಂಧಾನವಿಲ್ಲದೇ ಪ್ರವರ್ತಿನಾದ ಕಾರಣ ನಾವು ಆತನ ಕಂಡು ಪೂರ್ವದ ಮರ್ಯಾದೆ – ರೀತಿಗೆ ಪ್ರವರ್ತಿಸು ಎಂತ ವಿಹಿತವಾಗಿ ಹೇಳಿ ಈ ಅವಸ್ಥೆ ಮಾಡಬೇಕು ಎಂತ ಮಾಡಿದಲ್ಲಿ ನಮ್ಮ ಭೇಟಿಗೂ ಬಾರದೇ ಇದ್ದ ಕಾರಣ ಪೂರ್ವದಲ್ಲಿ ರೌದ್ರಿ

ಸಂವತ್ಸರದಲ್ಲು ಬಸ್ರೂರು ಸ್ಥಳದಲ್ಲಿ ತನ್ನ ಮರ್ಯಾದೆ ವಿಶಯವಾಗಿ ಬಹು ಮಂದಿಗಳೂ ಕ್ರೋಧ ಮಾಡಿದಾಗ ತಿಂಗಳು ಎರಡು ಪರಿಯಂತ್ರ ನಿರುದ್ಯಾನಾವಾಗಿ ಆಗ ನಮ್ಮ ಮಠದ ಶಿಷ್ಯ ಎಂಬ ರೀತಿ ನಮ್ಮ ರಾಯಸ ತೋರಿಸಿ ಅದೇ ಕ್ರಮಕ್ಕೆ ಸರಕಾರದಲ್ಲಿ ಜಾದಾರಿ ಮಾಡಿಕೊಂಡು ಹೋಗಿದ್ದಾ – ಆ ಅವಲಂಬನೆಯನ್ನು ಮರೆತು ಈಗಲೂ ನಮಗೆ ಪ್ರತಿಕೂಲನಾದ ಪ್ರಯುಕ್ತ ಆತಗೆ ಬಹಿಷ್ಕಾರಮಾಡಿ ಇದ್ದೇವೆ – ನೀವು ಅಶೇಷರು ನಿಮ್ಮ ಗ್ರಾಮಗಳಲ್ಲಿ ಆತ ತನಗೆ ಇಲ್ಲದೇ ಇದ್ದ ಮರ್ಯಾದೆಗಳ ಸಂಗಡ ತೆಗೆದುಕೊಂಡು ಬರುವ ಕೆಲಸವಿಲ್ಲಾ ಎಂತಾ ನಾವು ಮಾಡಿದ್ದೇವೆ. ಮಾಡಿದ ವ್ಯವಸ್ಥೆ ಪ್ರಕಾರ ನೀವು ನಡೆಸತಕ್ಕದ್ದು. ತಮ್ಮ ವರ್ಗದ ಜನರುಗಳಲ್ಲಿ ಮಂತ್ರ ಮುದ್ರಾಂಕನ ಮಾಡದ ಹಾಗೆ ಪ್ರತ್ಯೇಕ ರಾಯಸ ಬರೆದು ಇದ್ದೇವೆ. ನೀವು ಅಶೇಷರು. ಅಭಿಮಾನವೈರಿ ಮರ್ಯಾದೆಗಳು ಆಗದ ಹಾಗೆ ಮಾಡುವ ವಿಶಯದಲ್ಲಿ ಸ್ವತಃ ವಿವೇಕಿಗಳೇ ಇದ್ದೀರಿ. ಪತ್ರದಲ್ಲಿ ವಿಶೇಷ ಬರೆಯತಕ್ಕದ್ದೇನು ಅದೆ. ಈಗ ಫಲಗಂಧ ಪ್ರಸಾದ ಮಂತ್ರಾಕ್ಷತೆ ಸಹಾ ಕಳುಹಿಸಿದ್ದೇವೆ. ತೆಗೆದು ಕೊಂಬೋದು. ಶಿಷ್ಟಸ್ಥಿತಿ ಬಂದ ಬ್ರಾಹ್ಮಣರು ಹೇಳಲಾಗಿ ತಿಳದೀತು. ಇತಿ ನಾರಾಯಣ ಸ್ಮರಣೆ.

ಶ್ರೀ ಕಾಶೀಮಠದಲ್ಲಿರುವ ಅಸ್ಸಲು ರಾಯಸವನ್ನು ಉಡ್ಪಿಯಲ್ಲಿ ಸ್ವತಹಾ ನೋಡಿ ನಕ್ಕಲು ತೆಗೆದ ತಾರೀಕು 21–3–1953. ಮೊಕ್ಕಾಂ ಉಡ್ಪಿ

## 37. ಶ್ರೀ ಪರ್ತಗಾಳಿಮಠದ ಶಿಲಾಲೇಖ

ಶ್ರೀ ಪರ್ತಗಾಳಿಯಲ್ಲಿ ಈಗ ಇರುವ ಮಠವನ್ನು ಶ್ರೀಮದ್ ರಮಾಕಾಂತ ತೀರ್ಥ ಕರಕಮಲ ಸಂಜಾತರಾದ ಶ್ರೀಮದ್ ಲಕ್ಷ್ಮೀನಾಥ ತೀರ್ಥರ ಕುಮಾರಕರಾದ ಶ್ರೀಮದ ಆನಂದತೀರ್ಥ ಸ್ವಾಮಿಗಳು ಶಾಲಿವಾಹನ ಶಕ 1732ನೇ ಪ್ರಮೋದ ಸಂ। ರದ ಜೇಷ್ಠಶು। 8ಲ್ಲು ಜೀರ್ಣೋದ್ಧಾರ ಮಾಡ್ಸಿ ಪ್ರತಿಷ್ಠೆ ಮಾಡಿದ್ದಾಗಿ ಸದ್ರಿಮಠದ ಗರ್ಭಗೃಹದ ಹೊರಗಿ ಎದ್ರುಗೋಡೆಯ ದ್ವಾರದ ಎಡಬದಿಯಲ್ಲಿ ಶಿಲಾಲೇಖ :

ಕಾನಡಾ ಜಿಲ್ಲಾ ಅದಾಲತ್ ಕೋರ್ಟ್ ನಂಬ್ರ 2286 ವಾದಿ ಲಕ್ಷ್ಮೀನಾಥ ತೀರ್ಥ ಸ್ವಾಮಿಗಳು, ರಾಮಚಂದ್ರ ತೀರ್ಥ ಸ್ವಾಮಿಗಳ ಶಿಷ್ಯರು ಗೋಕರ್ಣ ಮಠ ಪ್ರತಿವಾದಿಯು ಬಿಳಗಿ ತಾಲೂಕು ಸಿದ್ಧಾಪುರ ಪೇಟೆ ವಾಣಿ ಚನ್ನವೀರಪ್ಪ ವಗೈರರು ಪ್ರತಿವಾದಿರು ಬಿರುದಾವಳಿ ಸಮೇತವಾದಿರೀಗೆ ಸಿದ್ಧಾಪುರಕ್ಕೆ ಹೋಗದಂತೆ ತಡೆದುದರಿಂದ ವಾದೀರಿಗೆ ಆದ ನಷ್ಟ ರೂ. 614–8–00 ಕೊಡತಕ್ಕದೆಂತ ತೀರ್ಪಾದ ತಾ. 1810ಇಸ್ವಿ ಅಗೋಸ್ತು ತಾರೀಕು 10.

ಉತ್ತರಾದಿ ಮಠದ ಪರಂಪರೆಯಲ್ಲಿ ಶಾ. ಶ. 1517ನೇ ಮನ್ಮಥ ಸಂ। ದ ಬ 11ಲ್ಲು ಪರಂಧಾಮವನ್ನೈದಿದ ರಘುತ್ತಮ ತೀರ್ಥರಿಂದ ಆಶ್ರಯ ಹೊಂದಿದ ಗೌಡಸಾರಸ್ವತ ಬ್ರಾಹ್ಮಣ ವರ್ಗದ ಶ್ರೀ ನಾರಾಯಣ ತೀರ್ಥರು. ಅವರ ಶಿಷ್ಯ ಶ್ರೀ ಜೀವೋತ್ತಮ ತೀರ್ಥರಿಂದ ಶ್ರೀ ಗೋಕರ್ಣಮಠದ ಪಾರಂಪರ್ಯ ಪ್ರಾರಂಭವಾದ್ದು–ಶಾಲಿವಾಹನ ಶಕ 1724ನೇ ದುಂದುಭಿ ಸಂ। ರದ ಚೈತ್ರ ಶು 15ಲ್ಲು ವ್ಯಾಸರಾಯ ಮಠದ ಶ್ರೀಮಲ್ಲಕ್ಷ್ಮೀಧರ ತೀರ್ಥ ಶ್ರೀ ಪಾದಂಗಳವರ ವರಕುಮಾರಕ ಶ್ರೀ ಮಲ್ಲಕ್ಷ್ಮೀವಲ್ಲಭ ತೀರ್ಥ ಶ್ರೀ ಪಾದಂಗಳವರ ಕರಕಮಲಸಂಜಾತ ಶ್ರೀ ಮಲ್ಲಕ್ಷ್ಮೀನಾಥರ ಸ್ವಾಮಿಗಳು ಬರೆದ ರಾಯಸಪತ್ರದಲ್ಲಿ ಕಾಣುವಂತೆ ಕಳೆದ ದುರ್ಮತಿ ಸಂ। ರದ ಫಾಲ್ಗುಣ ವದ್ಯ 5ಲ್ಲು ಶ್ರೀ ಗೋಕರ್ಣಮಠದ ಶ್ರೀಮದ್ ಭೂವಿಜಯರಾಮಚಂದ್ರ ತೀರ್ಥರಿಗೂ ಅವರಿಗೂ ಹುಲಿಕಲ್ಲಿದಲ್ಲಿ ಕ್ಷೇಮಾಲಿಂಗನ ಮೂಲಕ ಭೇಟಿಯಾದ ವಿವರ ಕಾಣುತ್ತದೆ. ಈ ಭೇಟಿಯಲ್ಲಿ ಶ್ರೀ ವ್ಯಾಸರಾಯ ಮಠದ ಸ್ವಾಮಿಗಳಿಗೆ ಶ್ರೀ ಗೋಕರ್ಣಮಠದ ಸ್ವಾಮಿಗಳ ಕಡೆಯಿಂದ ಸಾಗರ ರಾಮಚಂದ್ರಾಚಾರ್ಯರು ಮಂಗಳಾರತಿ ಮಾಡಿದ್ದೆಂತ ಕಾಣುತ್ತದೆ.

ಶಾ।ಶ। 1867 ಪಾರ್ಥಿವ ಸಂ। ರದ ಫಾಲ್ಗುಣ ವದ್ಯ 4ಲ್ಲು ಮೇಲೆ ಹೇಳಿದ ಹುಲೆಕಲ್ಲು ಗ್ರಾಮದಲ್ಲಿರುವ ಗೌ. ಸಾ. ಬ್ರಾಹ್ಮಣರ ಕೃಷ್ಣ ದೇವಸ್ಥಾನದಲ್ಲಿ ಶ್ರೀ ಕುಂದಾಪುರ ವ್ಯಾಸರಾಯ ಮಠದ ಸ್ವಾಮಿಗಳು. ಭಂಡಾರಕೇರಿ ಮಠದ ವಿದ್ಯಾಮಾನ ತೀರ್ಥ ಸ್ವಾಮಿಗಳು ಮತ್ತು ಉಡುಪಿ ಪೇಜಾವರ ಮಠದ ಸ್ವಾಮಿಗಳು ಈ ಮೂವರೂ

ಯಮಾಡಿಸಿ ಶ್ರೀ ಗೋಕರ್ಣ ಮಠದ ಶ್ರೀ ದ್ವಾರಕನಾಥ ತೀರ್ಥರನ್ನು ಹಸ್ತಾಂದೋಲನ ಮೂಲಕ ಭೇಟಿಯಾದರು. ಮರುದಿನ ಅಂದ್ರೆ ಜ 5 ದಿನ ಅಲ್ಲಿರುವ ವ್ಯಾಸರಾಯ ಮಠದಲ್ಲಿ ಶ್ರೀ ದ್ವಾರಕನಾಥ ಸ್ವಾಮಿಗಳು ದಯಮಾಡ್ಡಿ ಅವರಿಗೆ ಮರುಭೇಟಿಯಿತ್ತರು. ಜ 6ಲ್ಲು ಶ್ರೀ ದ್ವಾರಕನಾಥ ತೀರ್ಥಸ್ವಾಮಿಗಳು ಸೋಂದೆ ವಾದಿರಾಜ ಮಠಕ್ಕೆ ಯಮಾಡಿ ಸೋಂದೆ ಮಠದ ಸ್ವಾಮಿಗಳು ಭೇಟಿ ಮಾಡಿದರು.

## 38. 'ಕೊಂಕಣಾಖ್ಯಾನ'ದಿಂದ ವಿವರ

ಗ್ರಂಥಕರ್ತನ ಹೆಸರು, ವಾಸ್ತವ್ಯ, ಗ್ರಂಥರಚನೆಯ ಕಾಲ :

ಗ್ರಂಥಕರ್ತನ ಹೆಸರು ಸ್ಪಷ್ಟವಾಗಿ ಗ್ರಂಥದಲ್ಲಿ ಹೇಳಲಿಲ್ಲವಾದರೂ ಉತ್ತರಾರ್ಧ 8ನೇ ಅಧ್ಯಾಯದ 118ನೇ ಓವಿಯಿಂದ ಕಾಣುವ ವಿವರ ಹೀಗೆ ಅದೆ –

ಪರಶುರಾಮಕ್ಷೇತ್ರದಲ್ಲಿ ಶಿವಪುರ ಎಂಬ ಗ್ರಾಮದಲ್ಲಿ ಯೀ ಗ್ರಂಥ ತಯಾರಿಸಿದ – ಗ್ರಂಥಕರ್ತನ ಗೋತ್ರ ಕೌಶಿಕ ಪೃಥ್ವಿಪರ್ಯಟನ ಮಾಡುತ್ತಿರುವಾಗ್ಯೆ ಶಿವಪುರದಲ್ಲಿ ಉಳಕೊಂಡು ಗ್ರಂಥರಚನೆ ಮಾಡಿದನು. ಶಕ 1643ನೇ ಪ್ಲವನಾಮ ಸಂವತ್ಸರದ ಉತ್ತರಾಯಣ ಚೈತ್ರಮಾಸ ಶುಕ್ಲ ಶ್ರೀರಾಮನವಮಿ ದಿನ ಭಾನುವಾರ ಪುಶ್ಯ ನಕ್ಷತ್ರದಲ್ಲಿ ಗ್ರಂಥಸಂಪೂರ್ಣವಾಯಿತೆಂತ 122–123ನೇ ಓವಿಗಳಿಂದ ಕಾಣುತ್ತದೆ. ಗ್ರಂಥಕರ್ತ ಹೆಸರು ಸ್ಪಷ್ಟವಾಗಿ ಹೇಳಿಲ್ಲವಾದರೂ ಶ್ರೀ ರಾಮಚಂದ್ರನ ಪ್ರೇರಣೆಯಿಂದ 'ಸ್ವಯಂ ಸ್ವತಃ ಸಿದ್ಧ ರಘುನಾಥ' ಎಂಬ 129ನೇ ಓವಿಯಿಂದ ಗ್ರಂಥಕರ್ತನ ಹೆಸರು ರಘುನಾಥನಾಗಿರಬಹುದೆಂಬ ಅನುಮಾನ ಉಂಟಾಗುತ್ತದೆ. ಈ ಗ್ರಂಥದ ಹಸ್ತ ಲಿಖಿತ ಪ್ರತಿಯಿದ್ದದ್ದನ್ನು ಶಕ 1831ರಲ್ಲು ಮಾಡಾಲ (ಗೋವಾ)ದಲ್ಲಿರುವ ಶ್ರೀಪಾದ ವೆಂಕಟೇಶ ವಾಗಳೇ ಎಂಬವರು ಪ್ರಕಾಶ ಪಡಿಸಿದರು.

### ಪೂರ್ವಾರ್ಧ ಅಧ್ಯಾಯ 1

ಪರಶುರಾಮ ದೇವರು 14 ಬಾಣ ಪ್ರಯೋಗ ಮಾಡಿ ಶತಯೋಜನ ಭೂಮಿಯನ್ನು ಸಮುದ್ರದಿಂದ ಸಂಪಾದಿಸಿದನು. ಅದರ ಮಧ್ಯಪ್ರದೇಶ 16 ಯೋಜನವಿಸ್ತೀರ್ಣ ಮಧ್ಯ ಕೊಂಕಣದಲ್ಲಿ ಯಜ್ಞ ಮಾಡಲುಪಕ್ರಮಿಸುವಾಗ್ಯೆ ಯೋಗ್ಯ ಯಾಜ್ಞಕರನ್ನು ಕಾಣದೆ ಉತ್ತರ ದೇಶಕ್ಕೆ ಹೋಗಿ ಕುಲದೇವತೆಗಳು ಸಮೇತ ಸ್ವಕೀಯ ಸಾರಸ್ವತ ಬ್ರಾಹ್ಮಣರನ್ನು ತಂದು ಮಧ್ಯಕೊಂಕಣದಲ್ಲಿ ಗೋಮಾಂತಕದಲ್ಲಿ ಅಗ್ರಹಾರಗಳನ್ನು ಮಾಡಿ ಸ್ಥಾಪಿಸಿ ಯಾಗವನ್ನು ಸಂಪೂರ್ಣಪಡಿಸಿ ಬ್ರಾಹ್ಮಣರಿಗೆ ಯೋಗ್ಯ ಉಪದೇಶಮಾಡಿ ತಾನು ತಪಸ್ಸಿಗೆ ಹೊರಟುಹೋದರು. ಈ ವಿವರ ಸಹ್ಯಾದ್ರಿ ಖಂಡದಲ್ಲಿ ಹೇಳಿ ಅದೆ. ಈ ಕ್ಷೇತ್ರದಲ್ಲಿ ಸೃಜಿಸಿದ ತೀರ್ಥ ಕ್ಷೇತ್ರ ಮಹಿಮೆ ಭೈರವಪುರಾಣದಲ್ಲಿ ಯಾ ಇತರ ಪುರಾಣಗಳಲ್ಲಿಯೂ ವಿವರಿಸಿದ್ದಾರೆ.

ದ್ವಿತೀಯ ಪ್ರಕರಣದಲ್ಲಿ ಸಾಸಷ್ಟಿದೇಶದ ಮಹಿಮೆ – ತೃತೀಯ ಪ್ರಕರಣದಲ್ಲಿ 23 ಕ್ಷೇತ್ರಗಳ ವರ್ಣನೆ ತಿಸವಾಡಿ ವೃತ್ತಾಂತ – ಚತುರ್ಥ ಪ್ರಕರಣದಲ್ಲಿ ಐಕ್ಯದರ್ಶನ ಅಂದರೆ ಸಾಮೂಹಿಕ ವರ್ಣನೆ – ಐದನೇ ಪ್ರಕರಣದಲ್ಲಿ ಬಾರದೇಶ, ಪೆಡಣೆ, ಕುಡವಾಳ ಈ ಮೂರು ದೇಶಗಳ ವರ್ಣನೆ – ಆರನೆ ಪ್ರಕರಣದಲ್ಲಿ ಪೃಥ್ವಿ ವಿಸ್ತಾರ, ನೂತನದೇಶ ವರ್ಣನೆ – ಸಪ್ತಮಪ್ರಕರಣದಲ್ಲಿ ಸಾರಸ್ವತ ಬ್ರಾಹ್ಮಣರ ಗೋತ್ರ ಪ್ರವರ

ವರಣೆ – ಅಷ್ಟಮ ಪ್ರಕರಣದಲ್ಲಿ ಕುಲದೇವತೆಗಳ ಸ್ಥಳಾಂತರ ವರ್ಣನೆ – ಮುಂಚಿನ ಯುಗದಲ್ಲಿ ನಡೆದದ್ದು ಪೂರ್ವಾರ್ಧದಲ್ಲಿಯೂ ಈ ಯುಗದಲ್ಲಿ ನಡೆದ ವಿವರ ಉತ್ತರಾರ್ಧದಲ್ಲಿಯೂ ಹೇಳಿ ಅದೆ.

ಈ ಅಧ್ಯಾಯದ 52ನೇ ಓವಿಯಲ್ಲಿ 'ಸ್ವಕೀಯ ಸಾರಸ್ವತ ಬ್ರಾಹ್ಮಣ'ರನ್ನು ನಿಜದಾಗಿಯೂ 58ನೇ ಓವಿಯಲ್ಲಿ 'ಸ್ವಜಾತೀಯ' ಜನರನ್ನು ಸ್ಥಾಪಿಸಿದನು. ಇದರಿಂದ ಪರಶುರಾಮನು ಸಾರಸ್ವತ ಬ್ರಾಹ್ಮಣನಾಗಿದ್ದನೆಂತ ತೋರುತ್ತದೆ. 2ನೇ ಅಧ್ಯಾಯದ 5ನೇ ಓವಿಯಲ್ಲಿಯೂ ಸ್ವಕೀಯ ಬ್ರಾಹ್ಮಣನೆಂತ ಹೇಳಿ ಅದೆ.

## ದ್ವಿತೀಯ ಅಧ್ಯಾಯ

ಶ್ರೀ ಪರಶುರಾಮನು ತಾನು ಸೃಷ್ಟಿಸಿದ ಶತಯೋಜನ ಕ್ಷೇತ್ರದಲ್ಲಿ ಅಷ್ಟೋತ್ತರ ಶತತೀರ್ಥಗಳನ್ನು, ದ್ವಾದಶ ಜ್ಯೋತಿರ್ಲಿಂಗಗಳನ್ನು, ಹದಿನೆಂಟು ಭಾರವನಸ್ಪತಿಗಳನ್ನು, ತೃಣ ವೃಕ್ಷ ಗುಲ್ಮ ಲತೆಗಳನ್ನು, ದಿವ್ಯವಲ್ಲಿಗಳು ಬಾಳೆ ತೆಂಗು ಸುಗಂಧ ಚಂದನ ಕಂಗು (ಅಡಿಕೆ ಮರಗಳು) ನಾನಾತರದ ಪುಷ್ಪಾವಳಿಗಳನ್ನು, ಸರ್ವ ವಿಧದ ಧಾನ್ಯ ಫಲವಸ್ತುಗಳನ್ನು ಉಂಟಾಗುವಂತೆಯೂ ಸದಾ ಸರ್ವಕಾಲದಲ್ಲಿ ಪರ್ಜನ್ಯದಿಂದ ಸುಭಿಕ್ಷ ಉಂಟಾಗುವಂತೆಯೂ ಶ್ರೀ ಶಂಕರನನ್ನು ಕುರಿತು ತಪಸ್ಸು ಮಾಡಿ ಪ್ರತ್ಯಕ್ಷ ಮಾಡಿಕೊಂಡು ಬೇಡಿಕೊಳ್ಳಲಾಗಿ ಶಂಕರನು ಪ್ರಸನ್ನನಾಗಿ ಹಾಗೆಯೇ ಆಗಲೆಂದು ವರಪ್ರದಾನ ಮಾಡಿದನು.

ಮಧ್ಯಕೊಂಕಣದಲ್ಲಿ ಸ್ವಕೀಯ ಸಾರಸ್ವತ ಬ್ರಾಹ್ಮಣರ ಬಗ್ಗೆ ಸ್ಥಾಪಿಸಿದ ಆರಾಧ್ಯದೇವತೆಗಳ ವಿವರ ಹೇಳುತ್ತಾನೆ – ಗೋಮಾಚಲದ ದಕ್ಷಿಣ ಭಾಗದಲ್ಲಿ ಪ್ರಥಮ ಸಾಸಷ್ಟಿ ದೇಶ. ಅದರಲ್ಲಿ ಜೊಹಾರಗ್ರಾಮ ಅಂದ್ರೆ ಮಠಗ್ರಾಮ (ಈಗಿನ ಮಾಡಗಾಂವ) ದೊಡ್ಡದು. ಅಲ್ಲಿ ಶ್ರೀ ದಾಮೋದರ ದೇವರನ್ನು ಸ್ಥಾಪಿಸಿದನು. ಕೌಶಿಕ, ಭಾರದ್ವಾಜ ಮುಂತಾದ 5 ಗೋತ್ರದವರು ಅಲ್ಲಿಯ ಭಜಕರಾದರು.

2ನೇ ಗ್ರಾಮ "ವೇರಣೆ"ಯಲ್ಲಿ ದೇವದಾನವರಿಗೆ ಸಮುದ್ರಮಥನದಿಂದ ಸಿಕ್ಕಿದ ಅಮೃತವನ್ನು ಹಂಚಿಕೊಟ್ಟ ಮ್ಹಾಳಸಾದೇವಿಯನ್ನು ಸ್ಥಾಪಿಸಿದರು. ಅಲ್ಲಿಯು ಕೌಶಿಕ-ಗಾರ್ಗ್ಯ-ಭಾರದ್ವಾಜ-ಅತ್ರಿ ಮುಂತಾದ 5 ಗೋತ್ರದವರು ಉಳಕೊಂಡರು. ಅವರು ಆದ್ಯದೇವತೆಯಾದ ಶಾಂತೇರಿದೇವಿಯನ್ನು ಕೂಡಾ ಭಜಿಸುವವರಾದರು.

3ನೇ ಗ್ರಾಮ ಕುಡತರಿಯಲ್ಲಿ ಮಗಾನಶಾಂತೇರಿ ದೇವಿಯನ್ನು ಸ್ಥಾಪಿಸಿ ಭಾರಧ್ವಾಜಾದಿ–4 ಗೋತ್ರದವರು ಭಜಿಸುವವರಾದರು.

4ನೇ ಗ್ರಾಮ ಬಾಣಾವಲಿಯಲ್ಲಿ ಮಹಾಮಾಯಿಯಾದ ಬಾಣೇಶ್ವರಿ ಕಾತ್ಯಾಯನೀದೇವಿಯರನ್ನು ಸ್ಥಾಪಿಸಿ ಕೌಶಿಕ–ಅತ್ರಿ–ಮುಂತಾದ ಗೋತ್ರದವರು ಭಜಿಸುವವರಾದರು.

5ನೇ ಗ್ರಾಮ ಶಂಖಾವಳಿ – ಸಾಗರ ನದಿ ಸಂಗಮದಲ್ಲಿದೆ ಇಲ್ಲಿ – ಶಾಂತಾದುಗ – ನರಸಿಂಹ – ವಿಜಯಾದುರ್ಗ ದೇವತೆಗಳನ್ನು ಸ್ಥಾಪಿಸಿದರು. ಇಲ್ಲಿ ಶಂಖಗಳ ನಿರ್ಮಾಣವಾಗುತ್ತದೆ. ಜಾಮದಗ್ನ್ಯ – ವತ್ಸ – ಭಾರದ್ವಾಜ – ಕೌಶಿಕ ಶಂ – ಪಿಂಗಕುತ್ಸ (ಮುಂತಾದ 7 ಗೋತ್ರದವರು ಭಜಿಸುವವರಾದರು.

6ನೇ ಗ್ರಾಮ ರಾಯಚೂರದಲ್ಲಿ ಶ್ರೀ ಕಾಮಾಕ್ಷಿ ದೇವರನ್ನು ಸ್ಥಾಪಿಸಿ ಕೌಶಿ ಅತ್ರಿ ಗೋತ್ರದವರು ಭಜಿಸುವವರಾದರು. ಲೋಟಲಿ ಗ್ರಾಮದ ಭಕ್ತನೊಬ್ಬನು ಪೃಥ್ವಿ ಪರ್ಯಟಣ ಮಾಡುತ್ತಾ ಕೌರಾಜ ದೇಶದಲ್ಲಿ ಅಂಬಾ ಪ್ರಸನ್ನಳಾದಳು. ಅವಳನ್ನು ತನ್ನ ಗ್ರಾಮದಲ್ಲಿ ಪ್ರತಿಷ್ಠಿಸಬೇಕೆಂದಿರುವಾಗ "ತಾಯಿ" ಗ್ರಾಮದಲ್ಲಿ ರಾತ್ರೆ ಉಳಕೊಂಡು ಬೆಳಿಗ್ಗೆ ದೇವತೆಯನ್ನು ತೆಗೆದುಕೊಂಬಾಗ್ಯೆ ದೇವತೆಯು ಅಚಲವಾದುದರಿಂದ ಅಲ್ಲಿಯೇ ಸ್ಥಾಪಿಸಿ ರಾಯಚೂರು ಮನೆಯವರು ಆ ದೇವತೆಯನ್ನು ಭಜಿಸುವವರಾದರು 1ನೇ ಗ್ರಾಮ ಲೋಟಲಿಯಲ್ಲಿ ಶ್ರೀ ರಾಮನಾಥ ಮತ್ತು ಶಾಂತೇರಿ ದೇವರನ್ನು ಸ್ಥಾಪಿಸಿದರು. ಈ ಎರಡು ಗೋತ್ರದವರು ಭಜಿಸುವವರಾದರು.

8ನೇ ಗ್ರಾಮ ವೇತಿ – ಇಲ್ಲಿ ಭಗವತಿ ಶ್ರೀ ಶಾಂತೇರಿಯನ್ನು ಸ್ಥಾಪಿಸಿ ಭಾರಧ್ವಾಜ ವತ್ಸಗೋತ್ರದವರು ಭಜಿಸುವವರಾದರು.

9ನೇ ಗ್ರಾಮ ಕುಶಸ್ಥಳಿ (ಕುಡಥಾಳೆ)ಯಲ್ಲಿ ಶ್ರೀ ಮಂಗೇಶ ಮಹಾರುದ್ರನನ್ನು ಸ್ಥಾಪಿಸಿ ಜಮದಗ್ನಿ–ವತ್ಸ–ಕೌಂಡಿಣ್ಯ ಗೋತ್ರದವರು ಪೂಜಿಸುವವರಾದರು. ಅಘಾಶಿಯೆಂಬ ಹೆಸರಿನಿಂದ ಗಂಗಾನದಿಯು ಗೋಮಾಚಲದ ದಕ್ಷಿಣ ಭಾಗ ಮಾರ್ಗವಾಗಿ ಸಮುದ್ರ ಪ್ರವೇಶ ಮಾಡುತ್ತಾಳೆ. ಮಹಾಮಹಿಮೆಯುಳ್ಳ ಕ್ಷೇತ್ರವಾಗಿದೆ.

10ನೇ ಗ್ರಾಮ ಕೆಳೋಶಿಯಲ್ಲಿ ಶಾಂತಾದುರ್ಗಾ ದೇವತೆಯಲ್ಲಿ ಆವಾಸವಾಗಿ ಕೌಶಿಕ ಗೋತ್ರದ ಬ್ರಾಹ್ಮಣರಿಂದ ಪೂಜಿಸಲ್ಪಡುವವಳಾಗಿದ್ದಳು. ಕೌಶಿಕಗೋತ್ರದವರು ಭಜಕರಾದರು. ಭಾರದ್ವಾಜ ಗೋತ್ರದ ಪುರೋಹಿತ ವಾಣದಿಕೆರೆಯ ಕೂಡಾ ಈ ದೇವತೆಯನ್ನು ಭಜಿಸಿದುದರಿಂದ ಅವನ ಸಂತತಿಯವರು ಕೂಡಾ ಭಕ್ತರಾಗಿ–

11ನೇ ಗ್ರಾಮ ಗಿರಡೋಲಿ. ದೇವತೆ ಮಹಾಮ್ಮಾಯಾ – ವಟಸ್ಥಾನದಲ್ಲಿ ಪ್ರಕಟಿತಳಾಗಿ ತ್ರಿಗುಣಾತ್ಮಿಕಶಕ್ತಿಯಾಗಿದ್ದಾಳೆ. ಕೌಶಿಕ – ಭಾರದ್ವಾಜ ವಾಶಿಷ್ಠ ಗೋತ್ರದವರು ಭಜಕರು

12ನೇ ಗ್ರಾಮ ಮಹಾಭಾಜನ – ದೇವರು ರವಳನಾಥ ಕೌಶಿಕ ಗೋತ್ರದ ಬ್ರಾಹ್ಮಣರು ಭಜಿಸುತ್ತಾರೆ.

13ನೇ ಗ್ರಾಮ ಪಾಪೆ(ಪಾಡೆಂ) ದೇವತೆ ಶಾಂತೇರಿ ವತ್ಸಗೋತ್ರದ ಬ್ರಾಹ್ಮಣರು–

14ನೇ ಗ್ರಾಮ ಆಪೆ. ಇಲ್ಲಿ ಅತ್ರಿಗೋತ್ರದ ಬ್ರಾಹ್ಮಣರು ವಾಸವಾಗಿದ್ದಾರೆ.

15ನೇ ಗ್ರಾಮ ಚಿಖಲಿ. ಇಲ್ಲಿ ಗಾರ್ಗ್ಯ. ಧನಂಜಯ. ಕಾಶ್ಯಪ ಈ 3 ಗೋತ್ರದವರು ಇದ್ದಾರೆ.

16ನೇ ಗ್ರಾಮ ನಾಗವೆ (ಲಕ್ಷ್ಮೀನಾರಾಯಣ ಭಗವತಿ ಶಾಂತೇರಿ)

## 3ನೇ ಅಧ್ಯಾಯ

ತಿಸವಾಡಿಯ ವೃತ್ತಾಂತ – ಗೋಮಾಂಚಲಪರ್ವತದ ಸುತ್ತಲು 25 ಊರುಗಳಿವೆ. ದ್ವೀಪವಾಗಿ ನೀರಿನ ಮಧ್ಯ ಇರುತ್ತಾರೆ. ಇದರ ಹೆಸರು ಗೋಮಾನಗರ. 2ನೇ ದ್ವೀಪದಲ್ಲಿ 5 ಊರುಗಳು ಸೇರಿವೆ. ಈ 3 ದ್ವೀಪಗಳು ಸೇರಿ ತಿಸವಾಡಿ ಎಂಬ ಹೆಸರು. **ಈ ಕೆಳಗೆ –**

1ನೇ ಗ್ರಾಮ "ಏಳೆ" ಇಲ್ಲಿ ಭಾರದ್ವಾಜ ವತ್ಸ ಗೋತ್ರದ ಬ್ರಾಹ್ಮಣರು – ಆರಾಧ್ಯ ದೇವರು

2ನೇ ಗ್ರಾಮ "ಗಾಂವಶಿ" ವಸಿಷ್ಠ ಅತ್ರಿ ಭಾರದ್ವಾಜಾದಿ 4 ಗೋತ್ರದ ಬ್ರಾಹ್ಮಣರು ದೇವತೆ – ಶೋಲಗ್ರಾಮ

3ನೇ ಗ್ರಾಮ – "ಚಿಂಬಲ" ಕೌಶಿಕ – ವತ್ಸಗೋತ್ರದ ಬ್ರಾಹ್ಮಣರು ದೇವತೆ – ಭಗವತಿ

4ನೇ ಗ್ರಾಮ "ಅಜೋಶಿ" ಭಾರದ್ವಾಜ – ಕೌಶಿಕ ಗೋತ್ರದ ಬ್ರಾಹ್ಮಣರು. ದೇವತೆ ಶ್ರೀ ಲಕ್ಷ್ಮೀದೇವಿ ಕೊರವಾಳಿ (ಜಾರದೇಸ)

5ನೇ ಗ್ರಾಮ "ನೆವರೆ" ಕೌಶಿಕ ಗೋತ್ರದ ಬ್ರಾಹ್ಮಣರು. ದೇವತಾ ಮಾಧವ. ಶಿವ. ಗೋವಿಂದ. ದುರ್ಗಾದೇವಿಯರು.

6ನೇ ಗ್ರಾಮ "ತಳಾವಳಿ" ಮತ್ತು ಸಮೀಪದ ಇನ್ನೆರಡು ಗ್ರಾಮಗಳು ಕೂಡಿ – ಬ್ರಾಹ್ಮಣ ವತ್ಸ ಗೋತ್ರ ದ್ವೀಪವಾಡದಲ್ಲಿ. ಒಟ್ಟಿಗೆ ಎಂಟು ಗ್ರಾಮಗಳು.

ನಾರವೆ – ದ್ವೀಪ ಗ್ರಾಮ ಸಪ್ತಕೋಟೀಶ್ವರ ದೇವರು. ಸಪ್ತ ಋಷಿಗಳಿಂದ ಸ್ಥಾಪಿಸಲ್ಪಟ್ಟದ್ದು ಪಂಚಗ – ಪಾತಾಳದಿಂದ ಜಲ ಬರುವಂಥಾ ಬಾವಿ. ಸಮೀಪ ಭಗವತಿ ಶಾಂತಾದೇವಿಯ ವತ್ಸ – ಅತ್ರಿ – ಶಾಂಡಿಲ್ಯಾಯನ – ವಸಿಷ್ಠ ಭಾರದ್ವಾಜ ಗೌತಮ.

ಮ್ಹಾಲಾರಗಾಂವ – ನಾರಾಯಣ ದೇವರು. ಕ್ಷೇತ್ರ ಕಾಳಭೈರವ.

ನ್ಹಾವೇಲಿ – ದೇವರು ಗಣಪತಿ

ಗೊಲತೆ – ದೇವತೆ ಶಾಂತಾದುರ್ಗಾ ಚತುರ್ಥ ಸವಿತಾ ಒಟ್ಟಿಗೆ ಗ್ರಾಮಗಳು ನಾಲ್ಕು. ಮ್ಹಾಲರಗಾಂವ ಕೂಡಿ ಮೂರು ಗ್ರಾಮಗಳಲ್ಲಿ ಕಾಶ್ಯಪ, ಭಾರದ್ವಾಜ, ಜಮದಗ್ನಿ, ವತ್ಸ, ಕೌಶಿಕ, ಗೌತಮ ಗೋತ್ರದವರು.

ಈ ನಾಲ್ಕೂ ಗ್ರಾಮದವರೂ ಸಪ್ತಕೋಟೀಶ್ವರ ದೇವರನ್ನು ಭಜಿಸುತ್ತಾರೆ. ಈ ಪ್ರಕಾರ ದ್ವೀಪವಾಡಿಯ ಪಂಚಾಯತನ ಈ ವಿವರ ಹಾಟಕೇಶ್ವರ ಮಹಾತ್ಮೆಯಲ್ಲಿ ಹೇಳಿ ಅದೆ.

ಅಂತ್ರೂಜದಲ್ಲಿ ಮೂರು ಗ್ರಾಮಗಳ ವಿವರ – ಸಾಷ್ಟಿ ಗ್ರಾಮಗಳ ಹೊಳೆಯಿಂದ ಆಚೆ ಕಡೆಗೆ ಇರುವವು –

ಕುಂಡೈ – ದುರ್ಗಾ ಭಗವತಿ – ಗಾರ್ಗ್ಯ ಅತ್ರಿ ಗೋತ್ರದವರು.

ಮಡಕೈ – ದುರ್ಗಾಭಗವತಿ ದೇವಿ – ಭಾರದ್ವಾಜ ಅತ್ರಿ ಮತ್ತು ಭಕ್ತಗ್ರಾಮದ ಕೌಂಡಿಣ್ಯ ಗೋತ್ರದ ಪ್ರಭುಗೆ ಹೆಣ್ಣು ಕೊಟ್ಟದ್ರಿಂದ ಆಕಡೆ ರವಳನಾಥನನ್ನು ತಂದು ಸ್ಥಾಪಿಸಿದ್ದಾರೆ.

ಬಾಂದೊಡೆ – ನಾಗೇಶ ದೇವರು – ವತ್ಸ – ಕೌಶಿಕ ಗೋತ್ರ

ದಟ್ಟಿ ಗ್ರಾಮದ 3 ಗ್ರಾಮಗಳ ವಿವರ

1. ಚೂಡಾಮಣಿ ಗ್ರಾಮ – ದೇವಕಿಕೃಷ್ಣ – ಮಹಾಮಾಯಾಭಗವತಿ – ಗಾವಣವಾಡಾ ರವಳನಾಥ ಮತ್ತು ವಾಣದಿ ರವಳನಾಥ – ಹೀಗೆ 4 ಮುಖ್ಯ ದೇವಸ್ಥಾನಗಳು ಈ ಏನಹಾ ಯಿನ್ನು ಅನೇಕ ದೇವಸ್ಥಾನಗಳಿಗೆ – ಜಮದಗ್ನಿ – ಅತ್ರಿ – ಭಾರದ್ವಾಜ – ಕಾಶ್ಯಪ – ಕೌಂಡಿಣ್ಯ

2. ಅಂಬೋಣಿ – ದೇವರು ಅಮೃತೇಶ್ವರ – ದುರ್ಗಾಶಾಂತೇರಿ – ವೇತಾಳ – ರವಳನಾಥ – ಕಾಶ್ಯಪ – ವತ್ಸ – ಭಾರದ್ವಾಜ – ಗಾರ್ಗ್ಯ

3. ಹಾತುಲಪುರಿ – (ಚೊಡಣೆಯಲ್ಲಿ ಅಂತರ್ಗತವಾಗಿದೆ) ಬ್ರಾಹ್ಮಣರು ಅತ್ರಿ – ದೇವರು ಕ್ಷೇತ್ರಪಾಲಿ

4. ಪಂಚವಾಡಿ – ಅಂತ್ರೂಜೆಯ ಸಮೀಪವಿರುವ ಪಂಚವಾಡಿಯ ವಿವರ – ಇಲ್ಲಿಯ ಬ್ರಾಹ್ಮಣವಂಶ ಅಸತ್ಯದೋಷದಿಂದ ವಂಶವೃದ್ಧಿಯಾಗದೆ ನಾಶವಾದರು. ಇದರ ಕಾರಣವೇನೆಂದ್ರೆ 'ಮಹಾಭಾಜನ' ಮತ್ತು ಗಿರ್ಡೊಲಿ ಗ್ರಾಮಗಳವರೊಳಗೆ ಭೂಮಿಯ ಕುರಿತು ವಿವಾದವಿತ್ತು. ಅದರ ಇತ್ಯರ್ಥಕ್ಕೆ ಕುಡತರಿ ಗ್ರಾಮದ ಮಹಾಜನರೀಗೆ ಕೊಟ್ಟರು. ಈ ಪಂಚಾವಾಡಿಯವರು ಲಂಚ ತೆಗೆದುಕೊಂಡು ಭೂಮಿಯಲ್ಲಿ ಅಡಗಿಕೂತು

ಶರೀರ ವಾಣಿಯೆಂಬಂತೆ ಸುಳ್ಳು ಸಾಕ್ಷಿ ನುಡಿದರು. ಅದರಿಂದ ಅವರಿಗೆ ಮೃತ್ಯುಂಜಾ ಕ್ರಿಮಿಗಳಾಗಿ ನಾಶವಾದರು. ಯಾವ ಸ್ಥಳದ ಅಡಿಯಲ್ಲಿ ಕೂತಿದ್ದರೆ ಆ ಸ್ಥಳದಲ್ಲಿ ಈಗಲೂ ತೃಣಾಂಕುರವಾಗುವುದಿಲ್ಲ. ಇದು ಈಗಲೂ ಪ್ರತ್ಯಕ್ಷ ಕಾಣಬಹುದು. ಏವಾದ ಭೂಮಿಯನ್ನು ಕುಡತರಿಯುವರು ಅಪಹರಿಸಿದರು.

ಅಷ್ಟಾಗ್ರಹಾರದಲ್ಲಿ

5. ಋಷಿವನ (ರೇವಣ) ವಿಮಲೇಶ್ವರ ದೇವರು

6. ಕುರಂಡಿ – ಸೋಮೇಶ್ವರ

7. ವಿಳಣೆ ಗ್ರಾಮ – ಶಿವೇಶ್ವರಿ – ಮೂಳವಿರದೇವ – ಈ ಪೈಕಿ ಒಂದು ದೇವರನ್ನು ಸಾಸಷ್ಟಿಯಿಂದ ಇನ್ನೊಂದು ಪೆಡಣೆಯಿಂದ ತಂದು ಸ್ಥಾಪಿಸಿದರು. ತ್ರಿಗೋತ್ರದ ಬ್ರಾಹ್ಮಣರು

ಪೋಲಿಗ್ರಾಮ – ಶ್ರೀನಾರಾಯಣ – ವತ್ಸಗೋತ್ರ

ಕೊರವಾಳಿ (ಬಾರದೇಶದಲ್ಲಿ) ಕಾಳಭೈರವ ಕ್ಷೇತ್ರ– ಗೌತಮಗೋತ್ರದ ಬ್ರಾಹ್ಮಣರು

ಮಾಂದೆರೆ (ಪೆಡಣೆ ದೇಶದಲ್ಲಿ) – ಸಪ್ತೇಶ್ವರ – ಮಹಾಲಕ್ಷ್ಮೀ ದೇವರು – ಜಮದಗ್ನಿ – ಅತ್ರಿ ವತ್ಸಗೋತ್ರದ ಬ್ರಾಹ್ಮಣರು – ಇಲ್ಲಿಯ ಮಹಾಲಕ್ಷ್ಮಿಯ ಧ್ಯಾನ ಮಾಡಿ ನೀರು ಹಾಕಿದರೆ ವಿಷ ಉತಾರವಾಗುತ್ತದೆ. ಮಾಂದರೆ ಗ್ರಾಮದವರು ಎಲ್ಲಿ ಇದ್ದಾಗ್ಯೂ ಅವರು ನೀರು ಕೊಟ್ಟರೆ ವಿಷ ಇಳಿಯುತ್ತದೆ. ಈಗಲೂ ಪ್ರತ್ಯಕ್ಷವಾಗಿದೆ.

ಕೊರಗಾಂವ (ಪೆಡಣೆದೇಶ) ದೇವರು ಕಮಲೇಶ್ವರ – ಕೌಶಿಕ – ಅತ್ರಿ – ಭಾರದ್ವಾಜ – ಕಾಶ್ಯಪ.

ಇಲ್ಲಿವರೆಗೆ 42 ಗ್ರಾಮಗಳ ವಿವರಣೆ ಮುಗಿಯಿತು.

ಕುಡವಾಳ ದೇಶದಲ್ಲಿ ನಾಲ್ಕು ಗ್ರಾಮಗಳು

ನೇರೂರ – ಅಂಜೋಣೆಯಿಂದ ಬಂದವನೊಬ್ಬನನ್ನು ನೇರೂರ ಗ್ರಾಮದವರು ಬರಹಾನ ಕೆಲಸಕ್ಕೆ ಇಟ್ಟುಕೊಂಡರು.

“ಅಷ್ಟಪುತ್ರೆ”ಯೆಂಬ ಉಪನಾಮ. ಕಾಶ್ಯಪ – ನೈಧ್ರುವಗೋತ್ರ.

ಸರಂಬಳ – ನದಿತೀರದಲ್ಲಿ – ವಾಣದಿಯಿಂದ ಬಂದ ಪುರೋಹಿತ ಪುತ್ರ ಕುಳಕರ್ಣಿ ಕೇಳೋಶಿಯ ವೃತ್ತಾಂತದಲ್ಲಿ ಹೇಳಿದವನೆ

ಫರುಳೆ ಗ್ರಾಮ – ಸಮುದ್ರತೀರ – ವಾಸಿಷ್ಠಗೋತ್ರದವರು 42 ಗ್ರಾಮಗಳಿಂದಲೇ

ಬಂದವರು ಕುಲದೇವರ ಭೇಟಿಗೆ ಹೋಗಲು ಅನ್ಕುಲವಾಗದೆ ವೇತಾಳನನ್ನೇ ಭಜಿಸುತ್ತಾರೆ.

ಮಸೂರೆ - ಶಾಂತೇರಿ ದೇವಿ

ಮೇಲೆ ಹೇಳಿದ 42 ಗ್ರಾಮದವರ ಪೈಕಿ ಕೆಲವರು ಉದರ ನಿರ್ವಾಹಕ್ಕಾಗಿ ಈ ನಾಲ್ಕು ಗ್ರಾಮಗಳಲ್ಲಿ ವಾಸಿಸುವವರಾದರು.

ಓವಿ 39 "ಹಾಸಾಂಪ್ರದಾಯ ಬೇಚಾಳಿಸಗ್ರಾಮಾಚಾ ।

ದುಜಾ ಬಾರದೇಶ ತಿಜಾ ಪೆಡಣ್ಯಾಚಾ ।

ಚತುರ್ಥಕುಡವಾಳದೇಶಿಚಾ । ಸಾರಸ್ವತ ಸಮೂಹ ಏಕಚಿ ॥ (39)

ಓವಿ 40 "ಹೆಸಮಸ್ತ ಏಕಚಿ ಜ್ಞಾತಿ ।

ಮೂಳ ಸಮಜತಾ ಏಕಚಿ ಅಸತೀ ।

ಅಭಿಮಾನೆ ವೃಥಾ ಜಲ್ಪತಿ । ಭಿನ್ನ ಭಿನ್ನ ಮ್ಹಣೋನಿ ॥ (40)

## ಅಧ್ಯಾಯ 5 ದೇಶತ್ರಯ ವರ್ಣನ

ಬಾರದೇಶದಲ್ಲಿ ಹನ್ನೆರಡು ಗ್ರಾಮಗಳು

1. ಶಿರೋಡೆ ಗ್ರಾಮ = ವೇತಾಳ ದೇವರು ಜಾಮದಗ್ನ್ಯ -ವತ್ಸ-ಭಾರದ್ವಾಜ - ಅತ್ರಿ - ವಸಿಷ್ಠ - ಕಾಶ್ಯಪ
2. ಹಳದೋಣೆ - ಜಾಮದಗ್ನ್ಯ ವತ್ಸ - ವಶಿಷ್ಟ - ಮತ್ತು ಇತರಗೋತ್ರದವರು
3. ಪೊಂಬರೆಪ ಗ್ರಾಮ ವಶಿಷ್ಟ
4. ಸಾಳಗಾಂವ - ಕಾಶ್ಯಪ - ವತ್ಸ - ದೇವ ವೇತಾಳ
5. ಆಸಗಾಂವ - ಅತ್ರಿಗೋತ್ರ - ದೇವ ರವಳನಾಥ
6. ಮೊಹಿಡಂ
7. ಹಣಜೂಣ
8. ನಾಚನೊಳೆ
9. ಕಾಂದೊಳಿ
10. ಉಕಸ್ಯೆ
11. ಪುನಾಳೆ
12. ಎಕೆ - ಮೆಳೆ

ಪೆಡಣೆಕರ ಬ್ರಾಹ್ಮಣರೀಗೆ ಪಂಚಗ್ರಾಮದಲ್ಲಿ ವಸತಿ. ಆ ಪೈಕಿ 3 ಪೆಡಣೆ ದೇಶದಲ್ಲಿ 1 (ಸಾಂವರ್ದೆ) ಕುಡವಾಳ ದೇಶದಲ್ಲಿ ಇನ್ನೊಂದು (ಕಾಮುರ್ಪಿ) ಬಾರದೇಶದಲ್ಲಿ ಇರುತ್ತದೆ. ಒಜರೆ – ಪೊರಸ್ಕಡೆ ಎಂಬ ಇನ್ನೆರಡು ಗ್ರಾಮಗಳು ಇದ್ದಾಗ್ಯೂ ಅವುಗಳು ಪಂಚಗ್ರಾಮಗಳಲ್ಲಿ ಅಂತರ್ಭೂತವಾಗುವ್ರದರಿಂದ ಪಂಚಗ್ರಾಮ ಎಂತಲೇ ಹೇಳುತ್ತಾರೆ. ಅವುಗಳ ವಿವರ – ಹ್ಯಾಗಂದರೆ–

ಪೆಡಣೆ 5 ಗ್ರಾಮಗಳು

1. ತ್ರಿಜಾ ಪೆಡಣೆ ಮಾಲವೆ ಗ್ರಾಮ – ದೇವಿ ಭಗವತಿ ದೇವ ಗೌತಮೇಶ್ವರ – ದೇವರು ಮೂಳವೀರ – ಅತ್ರಿ ಭಾರದ್ವಾಜ ಇತ್ಯಾದಿ

ಪೆಡಣೆ 5 ಗ್ರಾಮಗಳು

2. ಪಾರಶೇಂಗ್ರಾಮ – ದೇವಿ ಭಗವತಿ – ಬ್ರಾಹ್ಮಣರು ಕಂಪಿಂಗ – ಕುತ್ಸ – ಅತ್ರಿ – ಮತ್ತೊಂದು

3. ಧಾರಗಳಿ ಗ್ರಾಮ – ಧಾರೇಶ್ವರ ಮಾಣಿಕ ದೇವಸ್ಥಾನ – ಕೌಶಿಕ ಗೋತ್ರ

4. ಸಾತರ್ಡೆ (ಕುಡಾಳ ದೇಶ) ದೇವ ರವಳನಾಥ – ಭಾರದ್ವಾಜ – ಅತ್ರಿ

5. ಕಾಮುರ್ಪಿ (ಬಾರದೇಶ) ವೇತಾಳ ದೇವ – ಒಟ್ಟಿಗೆ 5 ಗ್ರಾಮ – 7 ಗೋತ್ರಗಳೂ.

ಕುಡಾಲ ದೇಶದ ಅಷ್ಟಗ್ರಾಮಗಳು – ಕೆಳಗೆ ಕಾಣಿಸಿದ ಎಲ್ಲಾ ಗ್ರಾಮಗಳು ಶೇರಿ ಮುಂಚಿನ 8 ಗ್ರಾಮಗಳು

1. ವಾಲಾವಲಿ – ದೇವಶ್ರೀ ನಾರಾಯಣ – ಜಮದಗ್ನಿ ವತ್ಸಗೋತ್ರಿ ಬ್ರಾಹ್ಮಣ

2. ನೇರೂರ – ದೇವರು ಶ್ರೀಕಲೇಶ್ವರ ಭಾರದ್ವಾಜ – ಕೌಶಿಕ ಗೋತ್ರಿ – ಶಿರಸೋಸಕರ ಸ್ವದೇಶದವರು ಚಾಂದೋಸಕರ ಪ್ರಭು ಸಾಳಶೀಯವರು

3. ಧರ್ಮಾಪುರ – ಶ್ರೀ ಭಗವತೀ ದೇವಿ – ಜಾಮದಗ್ನ್ಯ – ವತ್ಸ ಗೋತ್ರಿ ಬ್ರಾಹ್ಮಣರು ಮತ್ತು ಕೌಶಿಕಗೋತ್ರ

4. ಪರುಳೆ ಗ್ರಾಮ – ದೇವವೇತಾಳ ರವಳನಾಥ – ಆದಿನಾಥ (ಕನಕಾದಿತ್ಯ ಎಂತಲೂ ಹೇಳುತ್ತಾರೆ – ಧನಂಜಯ – ಸಾಂಖ್ಯಾಯನ – ಭಾರದ್ವಾಜ–

5. ವಾಟ ಗ್ರಾಮ – ದೇವತೆ – ಚಂಡಿಕಾ ಗೋತ್ರ ಮೇಲೆ ಹೇಳಿದ 3 – ಸ್ವದೇಶದವರು ಪ್ರಭುನಾಯಕ ಆಶ್ವೆಯಿಂದ ಬಂದವರು. 'ಪಾಟೀಲ' ಇವರು

ಸಾಂಖ್ಯಾಯನ ಗೋತ್ರಿಗಳು – ಚಾಮುಂಡಾ ಕುಲದೇವರನ್ನು ಸ್ಥಾಪಿಸಿದರು.

6. ಡೋಲಿ – ದೇವತಾ ಭದ್ರಕಾಳಿ– ಸಾಂಖ್ಯಾಯನ ದನಂಜಯ ಗೋತ್ರದವರು

7. ತೆಂಡೋಲಿ ಕೆಳಶಿ ಬೆತಾರೆ – ಮಧ್ಯ ಕೆಳಶಿಯಲ್ಲಿ ಸಾಂತೇರಿ – ಕೌಶಿಕ ಮತ್ತು ಕೌಂಡಿಣ್ಯ

8. ಖಾನೋಲಿಗ್ರಾಮ – ಸಮುದ್ರ ತೀರ – ಸಿದ್ದೇಶ್ವರ – 1. ಆಂಗೀರಸ – 2. ಬಾರ್ಹಸ್ಪತ್ಯ ಭಾರದ್ವಾಜ ಅಘಮರ್ಶಣ – ಕೌಶಿಕ – 3. ಜಾಮದಗ್ನಿ ವತ್ಸ – 4. ಗಾರ್ಗ್ಯ – ಭಾರದ್ವಾಜ ಗೋತ್ರಿ ವಸಿಷ್ಟ ಮೈತ್ರಾವರುಣ– ಕೌಂಡಿಣ್ಯ

ಆಜಂಗಾವ – ದೇವವೇತಾಳ ; ತಿವರೆ ಗ್ರಾಮ – ದೇವತಾ ಮಾಉಲಿ – ಅತ್ರಿ ಗೋತ್ರದ ಬ್ರಾಹ್ಮಣರು

ಮ್ಹಾಪಣ – ಠಾಕೂರ – ವತ್ಸಗೋತ್ರಿ

ದಾಬೋಲಿ – ಭಾರದ್ವಾಜ ಗೋತ್ರಿ

ಗೊಳವಣ – ಕೌಂಡಿಣ್ಯ ಗೋತ್ರಿ

ಮಾಳಂಗಾವ – ಠಾಕೂರ ಅತ್ರಿಗೋತ್ರಿ – ನಾಯಕ ಕಾಶ್ಯಪಗೋತ್ರಿ

ಕೊಚರೆಂ – ಭಾರದ್ವಾಜ ಗೋತ್ರಿ

ಚೆಂದವಣ – ಕಾಶ್ಯಪ ಗೋತ್ರಿ

ಮಸದೆ – ಭಾರದ್ವಾಜ ಗೋತ್ರಿ

## ಅಧ್ಯಾಯ 6

ಸಾಷ್ಟಿ ಸಮುದಾಯದಲ್ಲಿ ಗ್ರಾಮಗಳು 42 ಬಾರದೇಶದ ಗ್ರಾಮ 12 ಪೆಡಣೆ ಗ್ರಾಮ 5 ಕುಡಾಲ ದೇಶದ ಗ್ರಾಮ 8 ಕೂಡಾ ಗ್ರಾಮ 67ಕ್ಕೆ ಸಾಸಷ್ಟಿ = ಸಾಷ್ಟಿ

ಮ್ಹಾಡಗಾಂವಕರ ಪ್ರಭು ಮಗ ಕೊಟ್ಟರಿಗೆ ಮನೆಯಲ್ಲಿ ಕೋಪಿಸಿ ಹೊರಟು ಮ್ಹಾಸಣ ಗ್ರಾಮದಲ್ಲಿ ವಸಂತಿ ಮಾಡಿದನು. ಅಲ್ಲಿ 'ಭಾಜನ'ರು ಹೆಚ್ಚಿಗೆ ಇದ್ದರು. ಅವರಲ್ಲಿ 'ಕಾಮತ' ಯಾರು ಇರಲಿಲ್ಲ. ಈತನಿಗೆ ಅವರ 'ಕಾಮತ'ನಾಗಿ ಮಾಡಿ ಭೂಮಿ ವೃತ್ತಿಕೊಟ್ಟರು. ಅವನು ಪ್ರಭು, ಕೌಶಿಕ ಗೋತ್ರದವನು. ಕಾಮತನಾಗಿ ಸ್ವತಂತ್ರ ಗ್ರಾಮವನ್ನು ನಿರ್ಮಿಸಿ ಅಲ್ಲಿ ರವಳನಾಥನನ್ನು ಸ್ಥಾಪಿಸಿದರು. ಇದೇ ಪ್ರಕಾರ ಅನೇಕರು ಹೊಸ ವೃತ್ತಿಗಳನ್ನು ಗ್ರಾಮಗಳನ್ನು ಸಂಪಾದಿಸಿದರು. ಮುಂಚೆ ಕೆಳೂಶಿಯ ಕಿಂಕರನಾಗಿದ್ದನು. ಬಾಂದೊಡೆ ಕ್ಷೇತ್ರದ ಸರ ದೇಸಾಯ ಮಾಮಲೆ ಬಾಂದೊಡೆಕರದು ಪೆರಣೆಯಲ್ಲಿ 'ಮಾಲ್ಡಾ' ಎಂಬ ಹೆಸರೂ ಹೊಂದಿದರು. ಗಾಂವಶಿಕರನು ಮಡಕೈಯನ್ನು ಸಂಪಾದಿಸಿ ಅಲ್ಲಿ ದುರ್ಗಾದೇವಿಯನ್ನು ಸ್ಥಾಪಿಸಿದನು.

## 39. ಕಾಶಿಯಲ್ಲಿ ಗೋಕರ್ಣಮಠದ ಸ್ಥಳದ ಕ್ರಯಪತ್ರದ ಮರಾಠಿ ಭಾಷಾಂತರ

ನಖಿಲ ಬಮೊಜುಬ ಅಸಲ ತಜಾಲಿ ಬಕ್ಷಿಸನಾಮ್ಯಾಂಚಾ ಬಮೊಹರಶೆರಿಯರ್ ಫನಾ ಕಂಜಯತ್‌ವಕಮಾಲಯತ್ ದಸ್ತಗಾಹ

ಕಾಜಿಸಯುದ ಇನಾಯತುಲಾವ ಅದಾಲತ್ ಪನಾ ಶೇಖ ವಲಿಅಲಾ ವಸಿಯಾವತ್ ಪನಾ ಮೀರ ಹುಸೇನ ವಫ ಜಲತ್ ಪನ ಹಫೀ ಜದೋಸ್ತಮಹಮ್ಮದ ಮುಫ್ತಿ ವಫಜಲತ್ ಮಾಳು ಶೇತಹಜೀ ಸುಲ್ತಾವಶೆಕಮಹಮ್ಮದ್ ಕಾಸಮ್ ಕಾನಹೋಯಾಜರಾಸಿ ಕರಾರತೇಲಾಕಾರೀತ ೩ ತಿಸರಿ ಮಾಹೆ ಜಮಾದಿಲಾವಲ ಸ ೧೦೮೧ ಹಿಜರಿ ತಿ ಮೀ ಘರ ಏಕಣಾತಾ ರಘುಚಂದ್ರ ತೀರ್ಥ ಬಿಂನ್ ಅನಂತನಾಯ್ಕ ವಲದ್ ನರಸಿಂಹ ಶಿಷ್ಯ ರಾಮಚಂದ್ರ ತೀರ್ಥ ಶಿಷ್ಯ ರಾಮಚಂದ್ರ ತೀರ್ಥ ಶಿಷ್ಯ ಜೀವೋತ್ತುಮ ತೀರ್ಥ ಬಿಂನ್ ಅನಂತನಾಯ್ಕ ವಲದ್ ನರಸಿಂಹ ಶಿಷ್ಯ ರಾಮಚಂದ್ರ ತೀರ್ಥ ಶಿಷ್ಯ ಜೀವೋತ್ತುಮ ತೀರ್ಥ ಯಾನಿ ಕಾಶಿಂತ ಕಾಜಜಾಫರಿ ಏವುನ ಏದಿತ ತೇಲೆತೀಂಪಕ ಹವೇಲಿ ಮಿಳಾಲೇಲಿ ಏಕ ಫರಾಸ ಉತ್ತರ ಮುಖಿ ನೀಮ ಪಟಪೊಷ ವಪಕ ದುಗಹಿ ಪಶ್ಚಿಮ ಮುಖಿ ಸಿಮಪಟಪೊಷ ವ ಏಕ ದುಗಹಿ ಉತ್ತರ ಮುಖಿ ದುಸರಿ ನಿಮ ಪಟಪೊಷ ವ ಚೂಂಯಿಬಿಲಾಂಚಿ ಪೂರ್ವ ಪಶ್ಚಿಮ ಜಿ ೨೬ ಸವಿಸಗಜ ಇಲಾಹಿವ ಚವಡರಿ ದಕ್ಷಿಣವ ಉತರೆ ಜಿ ೧೨ ಬಾರಾಗಜ. ಇಲಾಹಿ ಕಾಶಿ ಮಧ್ಯೆ ಬಿಂದು ಮಾದವ ಯಾಚೆ ಮಹಲ್ಯಾಮತ ಆಹೆ ಯಾಚಿಹದ್ ಚಾರಿ ಕಡೀಲ ಯೇಣೆ ಪ್ರಮಾಣೆ ತ್ಯಾಚಾತೆಪಶಿಲ

* * *

ಸುಂದರ ಪ್ರರಿ ಪಾಸೂನ ಮುದಲಿ ರುಪಯೆ ೧೦೨೫ ಏಕ ಹಜಾರ ಪಂಚವಿಸಿಕಾ ಅಲೆ ಪೂರ್ತ ಪಂಜಿನ ದೇವುನ ಖರೀದ ಕೆಲೆ ಆಹೆ. ಆಣೆ ಮಸದೆ ಕೋಣಾಚಾಯಾಂತ ಅಂಶ ಗಡೇವತಾಂ ಯಾ ವೇಳ ಪಾಶೇತೊ ಅಮಲದಖಿಲ. ಆ ಮಜಾ ಆಹೆ ವಕಬಾಲಾ ಘರ ಖರದೀಜಾ ಬಮೋಹರ ಮ್ಯುತ್ತು ಪಾವತೆ ಖಾಜಿ ಚೆನಾಂವ ಅದಾಲತ್ ಪನಾಶೇಕವಲಿವಲಾವ ಮಖಿದೂಮ ಜಾಹನ್ ವಶೇಖ ಆಮಿಯಾ ಮುಫ್ತಿ ವ ಬಾಯಬಾರ ಕರೋಡೆ ವಖಾ ಜೆ ಮಹಮ್ಮದ ಕಸಮುಖಾನ ಗೋಯಾಂಚಾ ಬಿನ್ ವಮೋಹರ ಸುಧಾಂ ಮಹಾಜರಮ್ಹುಣಜೆ. ಫರಚೆ ಖರೀದ ಪತ್ರ ಮಜಿಪಾಶಿ ಆಹೆ. ವಯಾಚೆಗಖಿಲ ತಪಶಿಲವಾರ ಜ್ಯೆಲ ಮದೆ ಅಹಿಲ ಆಹೆ. ಯಾನಂತರ ರಘುಚಂದ್ರ ತೀರ್ಥ ಬೋಲಕಾತಕೀಂ ಹೆಘರಚೆ ಬದಲಿ ಕಾಂಹಿ ಜಾಗಾ ಖಾವಾ

ನಗದ ನ ಘೆತಾ ಬಾಬಾ ಭಟಂ/ಬಿನ್ ಶಾಂತ ಭಟವಕದ ಶುಮಾರು ೧೬೭೦ ಸಪಟಂಬರ ೩೦ ನಾರಾಯಣ ಭಟಯಾಂಸ ಭಕ್ಷಿಸದಿಲೆ ಆಣಿಕ್ಯಾ ಜಾಲಮಲ ಯಥಾಸ್ಥಿತ ಕರೂನದಿಲೆ ಆಣಿ ಬಾಬಾಫಟ ಮಜಿಕೂರ ಯಾನೆ ಸರ್ವಮಜಿಲಿಸಿಚೆ ಸಮಕ್ಷ ಬೋಲಲಾ ತೀ ತ್ಯಾಫರಾಂತ ಮಾಜಾಲಮಲ ದಾಖಲ ಝಾಲಾ

ತಾರೀಕ ೩ (ತೀನ) ಮಾಹೆ ಮಜಕೂರ ಸನ್ ರಲೆಮ–

ಚಾಹರಾ ರಘುಚಂದ್ರ ತೀರ್ಥ ಯಾಂಚಾ ಗಂವಾಸಾರಖಾರಂಗ ಚೌಡೆಕಪಾಳ ಆಣಿವಿಸ್ತೀರ್ಣ ಬೊಂವಯಾ. ವಮೆಂಡ್ಯಾಚಾ ಡೊಳ್ಯಾ ಆಣಿನಾಂತಮೊಡೆವದಾಡಿಚೆ ವಮಿಶಾಚೆ ತೇಸ ಪಾಂಡರೆವಕದ. ಮದ್ಯಮ ವಯ ೫೨ ಬಾವನ್ ವರ್ಶ ಚೆ

– * * * *

ತಾರೀಕ ೧೨ ಮಾಹೆ ರಮಜಾನ ೧೦೬೯ ಹಿಜರಿ ಸುಂದರ ಪುರಿ ಸನ್ಯಾಶಿ ಶಿಷ್ಯ ಮಧುಸೂದನ ಸನ್ಯಾಶಿ ಯಾಚಾ ಆಣಿಯಾಚಾಗುರು ವಿಷ್ಣುಪುರಿ ಸಂನ್ಯಾಶಿ ಯಾನೆ ಶಹರ ವಾರಣಾಶಿ ಚಾಖಾಜಿ ಯಾಜಿ ವಾಶಿ ಏವುನ ಏಕಕರಾರ ತೇಲಾಕೀ ಏಕಫರ ಉತ್ತರ ಮುಖಾಚೆ ನಿಮ್ ಪಟಿಪೋಷ ವ ಏಕ ದುಗಹಿ ಪಶ್ಚಿಮ ಮುಖಾಚೆ ನಿಮ್ ಪಟಿಪೋಷ ವದುಗಹಿದುಸರಿ ಪೂರ್ವ ಮುಖಾಚಿ ನಿಮ್ ಪಟಿಪೋಷ ವ ಸಹನ್ ಮ್ಹಣಜೆ ಅಂಗಣತೇಂಹಿ ಮೇಧಾಕಿಕ್ಯಾಚೆ. ಯಾಜಿತಪಶಿಲ ವೇಗಳಿ ವೇಗಳಿ

* * *

ಉಭಯಕಾಂಚೆಸಂತೋಷಾನೆರು ೧೦೨೫ ****

* * *

ಕಾನಡಾ ಜಿಲ್ಲಾ ಮೇಜಿಸ್ಟ್ರೇಟ ಸ್ಥಾನದಿಂದ – ಈ ರಹದಾರಿ ತಂದ ಅಂಕೋಲಾ ತಾಲೂಕ ಗೋಕರ್ಣಮಠದ ಆನಂದ ತೀರ್ಥ ಸ್ವಾಮೀರು ಒಂದು, ಇವರಕಡೆ ಬ್ರಾಹ್ಮಣ ಜನ ೫೦ ಸೂದ್ರ ಜನ ೫೦, ಅಂತೂಜನ ೧೦೧ ಪಾಲಕಿ ೧ ಕುದುರೆ ೧೦ ಆನೆ ೧ ಧೋಲಿಳೀ ಎತ್ತು ೪ ತುಪಾಕು ೨ ತರವಾರು ೨ ಬಿರುದವಗ್ಯೆರೆ ಸಹ ಕಾಶಿಯಾತ್ರೆಗೆ ಹೋಗಿ ಬರುವಲ್ಲಿ ಇವರೀಗೆ ಆಟಕಾಯಿಸದೇ ಬಿಡುಅದು ಬ ತಾ. ೧೫ನೇ ಮಾಹೆ ಜುಲಾಯಿ 1812ಯೇ ಇಸ್ವಿ ೧೨೨೨ನೇ ಫಸಲಿ ಆಂಗಿರಸ ಸಂ ಆಶಾಡ ಶು ೭

ಮೊಹರು – ಕಾನಡಾ ಜಿಲ್ಲಾ ಅದಾಲತ್ ಅಧಿಕಾರ ಸ್ಥಾನ

* * *

ರಕ್ತಾಕ್ಷಿ ಸಂ। ರದ ಪುಶ್ಯ ಶು 13ರಲ್ಲು ಶಾ. ವಾ. ಶ. 1606 ಆಗುತ್ತದೆ. ಅಂದರೆ 1684ನೇ ಇಸ್ವಿ ಶ್ರೀಮತ್ ಕೆಳದಿ ಚೆನ್ನಮ್ಮಾಜಿಯವರು ಮುತ್ತರ ವೆಂಕಂಣಗೆ ಬರಸಿ ಕಳುಹಿದ ಕಾರ್ಯ. ಗೋಕರ್ಣದ ಕೊಂಕಣೆಗ ರಘುಚಂದ್ರ ವಡೆಯರ ಶಿಷ್ಯ ಲಕ್ಷ್ಮೀ ನಾರಾಯಣ ಸಂನ್ಯಾಶಿಗಳ ಮಠಕ್ಕೆ ಪ್ರಾಕು ಉತ್ತಾರವಾಗಿರದ ಸ್ವಾಸ್ತಿ ಒಳಗೆ ಗ 60 ಅರವತ್ತು ವರಹಾ ಅರಮನೆಯ ಹವಾಲೆ ಆಗಿದೆ ಪಾಲಿಸಿ ಕೊಳಬೇಕೆಂದು ವೆಂಕಟೇಶ ಮಲ್ಯೆನು ಹೇಳಿಕೊಂಡ ಸಂಬಂಧ ಈತನ ಕೈಯಾ ಅರಮನೆಗೆ ಕಾಣಿಕೆ ಗ 120 ನೂರ ಇಪ್ಪತ್ತು ವರಹಾನ್ನ ತೆಗೆದುಕೊಂಡು ಮಿಡಿಜೆ ಸೀಮೆ ಬಾಪಿತೊಡಲ ಗ್ರಾಮದಿಂದ ३೬ ವರಹದ ಸ್ವಾಸ್ತಿಯನ್ನು ಶಿವಾರ್ಪಿತವಾಗಿ ಬಿಟ್ಟದ್ದೇವೆ. ರೇಖೆಯ ಪ್ರಮಾಣ ಭೂಮಿಯ ವಿಂಗಡಿಸಿಕೊಟ್ಟು ಈ ಕಾಗದದ ಶೆನಭವರ ಕಡಿತಕ್ಕೆ ಬರಿಶಿ ತಿರಿಗಿ ಈ ಸನ್ಯಾಶಿಗಳ ವಶಕ್ಕೆ ಕೊಡುವುದಾಗಿ ಚಿಕ್ಕ ಮೊಹರೆ ಅದೆ–

ಶ್ರೀ ಮೊಹರೆ ಅದೆ–

* * *

## 40. ಪರ್ತಗಾಳಿ ಮಠದಲ್ಲಿದ್ದ ರೆಕಾರ್ಡಿನಿಂದ ಬರಕೊಂಡದ್ದು

ತಾ. 22-3-1947ಲ್ಲಿ ಪರ್ತಗಾಳಿ ಮಠದಲ್ಲಿದ್ದ ರೆಕಾರ್ಡಿನಿಂದ ಬರಕೊಂಡದ್ದು

ನಮಸ್ತುಂಗ ಶಿರಶ್ಚುಂಬಿ ಚಂದ್ರ ಚಾಮರ ಚಾರವೇ
ತ್ರೈಲೋಕ್ಯ ನಗರಾರಂಭ ಮೂಲಸ್ಥಂಭಾಯ ಶಂಭವೇ

ಸ್ವಸ್ತಿ ಶ್ರೀ ಜಯಾಭ್ಯುದಯ ನೃಪ ಶಾಲಿವಾಹನ ಶಕ 1472 ಸೌಮ್ಯ ಸಂವತ್ಸರದ ಆಶಾಡ ಬ ೫ ಇಂದುವಾರ ಶ್ರೀ ಮನ್ಮಹಾಮಂಡಲೇಶ್ವರ ಸಾಳುವ ಕೃಷ್ಣದೇವರ್ಸ ಒಡೆಯರು ನಗಿರೆ ರಾಜ್ಯ ಹೈವ - ತುಳು - ಕೊಂಕಣೆ ಮುಂತಾದ ರಾಜ್ಯವನ್ನು ಪರಿಪಾಲಿಸುತಂದಿನ ಗೋವೆರಾಜ್ಯದ ಸಾಸಷ್ಟಿ ದೇಶಕ್ಕೆ ಮುಖ್ಯರಾದ ಅಷ್ಟಗ್ರಾಮದೊಳಗಣ ಲೋಟವಳಿಯ ಗ್ರಾಮದ ಭಾರ್ಗವ, ಚವನ, ಆಪ್ನವಾನ್, ಅವರವ ಜಾಮದಗ್ನಿ, ಪ್ರವರದ ವತ್ಸಗೋತ್ರದ ಸಾಂತು ಕಿಣಿಯ ಮಗ ನರಸ ಕಿಣಿ ಯುಗೆ ಪಾಲಿಸಿದ ಧರ್ಮ ಮೂಲಸಾಧನದ ಪಟ್ಟಿಯ ಭಾಷಾಕ್ರಮವೆಂತೆಂದರೆ - ಸೈಗನ ಹಳ್ಳಿಯ ಮಾಗಣೆಯವಳಗೆ ಹರವರಿಯು ಹೆಗರೆಯ ಗ್ರಾಮದನ್ನೂ ಪ್ರಾಕು ಅಟ್ಟವಣೆ ಲಕಪ್ಪ ಸೇನಬೊವ ಸುಖರೂಪ ಸೆನಭವನ ಮಕ್ಕಳು, ಮೊಮ್ಮಕ್ಕಳು ಸಹಾ ಉಂಬಳಿ ಮರ್ಯಾದೆಯಲ್ಲಿ ಆಳಿ ಬರುತ್ತಿದ್ದಲ್ಲಿ ಆ ಗ್ರಾಮಗಳ ವಳಗಣ ಸ್ಥಳ ಕುಳಗಳನ್ನು ವತ್ತೆ ಮೂಲಗೇಣಿ ಮುಂತಾದ ವ್ಯವಹಾರಗಳನ್ನು ಅವರು ಮಾಡಲಾಗಿ ಉಂಬಳಿಯ ಕೊಟ್ಟ ಸ್ಥಳಗಳನ್ನು ನೀವು ಮಾಡುವದು ಯಾರಿಗೆ ವತ್ತೆ ಮೂಲಗೇಣಿಯ ಮಾಡಿಕೊಂಬವರು ಯಾರಿಗೆ ಎಂದು ಆ ವತ್ತೆದಾರರು ಸಹಾ ............ಪಾಲಿಸಿದ ಪಟ್ಟೆ ಸಾಧ ರಾಯಸ ಉಂಟಾದರೆ ತೋರಿ, ಅಲ್ಲವೇ ಆ ಸ್ಥಳವನ್ನು ಅರಮನೆಯ.......... ಎಂದು ನಾವು ಅವರುಗಳಿಗೆ ನಿರೂಪವನ್ನು ಕೊಟ್ಟಲ್ಲಿ ನಮ್ಮ ಇಕ್ಕರ್ತರಲ್ಲಿಯೂ ಅರಮನೆ ಸಾಧನ ರಾಯಸ ಮುಂತಾಗಿ ಅವದೂ ಇಲ್ಲಾದ ಸಂಬಂಧ ಆ ಹೆಗರೆ ಊರ ಮೇಲೆ ಪ್ರಾಕ್‌ವತ್ತೆಗಾರರು ಮಾಡಿಕೊಂಡ ವತ್ತೆಯ ಸಾಧನ. ಮೂಲಗೇಣಿಯ ಸಾಧನ ಮುಂತಾದ ಏನು ಉಳಸಾಧನ ವೊಲೆ ತಾಳೆಗಳನ್ನು ನಮ್ಮ ಅರಮನೆಗೆ ಕೊಟ್ಟು ಆ ಸುಖರೂಪ ಸೆನಭವ, ಲಕ್ಕಪ್ಪ ಶೆನಭವನವರುಗಳ ಮಕ್ಕಳು ಮೊಮ್ಮಕ್ಕಳು ವತ್ತೆಗಾರರು ಸಾಹಾವಾಗಿ ಆ ಹೆಗರೆಯ ಗ್ರಾಮದ ಮೇಲೆ ತಮಗೆ ಅರ್ಥಾಅರ್ಥ ಸಂಬಂಧವಿಲ್ಲಾ ಎಂದು ನಮ್ಮ ಅರಮನೆಯ ಭಂಡಾರಕ್ಕೆ ನಟ್ಟ ನಡಗೆ, ಮಡಗೆ, ನಮ್ಮ ಅರಮನೆಗೆ ಹರವರಿಯ ಮಾಡಿಕೊಂಡು ಇದ್ದಲ್ಲಿ ಆ ಹೆಗರೆಯ ಗ್ರಾಮವನ್ನು ನೀನು ಗೋಕರ್ಣ

ಃ ಮಹಾಬಲದೇವರ ಸನ್ನಿಧಿಯಲ್ಲಿ ನಿನ್ನ ಹೆಸರನ್ನು ನಡೆವ ಸತ್ರಧರ್ಮಕ್ಕೆ ಘಟಕಳದಲ್ಲಿ
ನು ನಿರುನಿವಾರಣದಲ್ಲಿ ಕಟ್ಟಿಸಿದ ಲಕ್ಷ್ಮಿ ನರಸಿಂಹ ಮೂರ್ತಿಯ ಸನ್ನಿಧಿಯಲ್ಲಿ
ಂಗರಂಗ ವೈಭವ ಮುಂತಾದ ಧರ್ಮಗಳಿಗೆ ಸಾಹಾ ಬಿಡುವರೇ ಆ ಸ್ಥಳಮೂಲ
ಳಮೂಲ.

ಹಡವ ಅರ್ಥವನ್ನು ನಿನ್ನ ಕೈಯಲ್ಲಿ ಕಾಣಿಕೆಯನ್ನು ಮಾಡಿಸಿಕೊಂಡು ಆ ಗ್ರಾಮವನು ಧರ್ಮಕ್ಕೆ ಬಿಡುವರೇ ನಿನಗೆ ಧರ್ಮಮೂಲವಾಗಿ ಪಾಲಿಸಬೇಕೆಂದು ನು ನಮಗೆ ಬಿನ್ನಹ ಮಾಡಿ ಆ ಗ್ರಾಮದ ಸ್ಥಳಮೂಲ ಕುಳಮೂಲ ಹಡವ ರ್ಥವನ್ನು ನಮ್ಮ ಭಂಡಾರಕ್ಕೆ ಕಾಣಿಕೆಯನ್ನು ಮಾಡಿ ನಮ್ಮ ಚಿತ್ತವನ್ನು ಹೊಂದಿಸಿಕೊಂಡ ಂಬಂಥ ಹೆಗರೆಯ ಗ್ರಾಮವನ್ನು ನಿನಗೆ ಧರ್ಮಕ್ಕೆ ಬಿಡುವರೇ ಪಾಲಿಸುತಲ್ಲಿ ಪ್ರಾಕು ಮ್ಮ ಹಜಾಜಿ ಓರಿಯ ದೇವರ್‍ಲ ವಡೆಯರ ಹೆಸರಲ್ಲಿ ನಡೆದು ಬಹಾ ಸತ್ರ ಧರ್ಮ ಟ್ಟಲು ನೀನು ತಿದಿಕೊಂಡ ಮೇಲೆ ಮೂರರ ಸತ್ರ ಧರ್ಮವನ್ನು ನಡಿಸಿ ಬಹ ತಿ ಕಟ್ಟು ಮಾಡಿ ಆ ಸ್ಥಳಗಳನ್ನು ನಾವು ನಿನಗೆ ಸ್ಥಳ ಮೂಲ ಕುಳಮೂಲವಾಗಿ ಾಲಿಸಿದೆ. ಆ ಪಾಲಿಸಿದ ಹೆಗರೆಯ ಗ್ರಾಮಕ್ಕೆ ಗಡಿ–

ಈ ಭೂಮಿಯನ್ನು ಪಡೆದ ನರಸ ಕಿಣಿಯರು ಗೋಕರ್ಣಕೋಟಿತೀರ್ಥದ ಗ್ರಹಾರದಲ್ಲಿ ಮಠ ಕಟ್ಟಿಸಿ ಆ ಮಠ ಮತ್ತು ಈ ಗ್ರಾಮವನ್ನು ಶ್ರೀ ಜೀವೋತ್ತಮ ೀರ್ಥ ವಡೇರಿಗೆ ಧರ್ಮವಾಗಿ ಕೊಟ್ಟರು.

ಮೊಹರು

ಮಾರಮಾಜಿ ಅಕ್ರಮಸರ ನಾಯಕ ಮೀರ

* * * * * * *

ನಮಸ್ತುಂಗ ಶಿರಸ್ಚುಂಬಿ ಚಂದ್ರ ಚಾಮರ ಚಾರವೇ
ತ್ರೈಲೋಕ್ಯ ನಗರಾರಂಭ ಮೂಲಸ್ಥಂಭಾಯ ಶಂಭವೇ –

ಸ್ವಸ್ತಿ ಶ್ರೀ ಜಯಾಭ್ಯುದಯ ಶಾಲಿವಾಹನ ಶಕವರುಷ 1579ಯ ದುರ್ಮತಿ ಸಂವತ್ಸರದ ಅಶ್ವೀಜ ಶು 7ಯಲ್ಲು ಶ್ರೀ ಮತ್ಪರಮಹಂಸ ಪರಿವ್ರಾಜಕಾಚಾರ್ಯವರ್ಯ ಪದವಾಕ್ಯ ಪ್ರಮಾಣರಾದ ಶ್ರೀಮತು ಜೀವೋತ್ತಮತೀರ್ಥ ಶ್ರೀಪಾದಂಗಳ ಕರಮಲಸಂಜಾತರಾದ ಶ್ರೀಮದ್ ರಾಮಚಂದ್ರ ತೀರ್ಥ ಶ್ರೀಪಾದಂಗಳ ವರಕುಮಾರಕರಾದ ಶ್ರೀಮದಿಗ್ವಿಜಯತೀರ್ಥ ಶ್ರೀಪಾದಂಗಳಿಗೆ ಗೋಕರ್ಣ ಕ್ಷೇತ್ರದ ಗಾಂವಕಾರರು ಗುರುಸಮಸ್ತರು ಬರ್‍ಸಿಕೊಟ್ಟ ಧರ್ಮಸಾಧನದ ಪಟ್ಟಿಯ ಭಾಷಾಕ್ರಮವೆಂತೆಂದರೆ, ಗೋಕರ್ಣಕ್ಷೇತ್ರದೊಳಗೆ

ಪ್ರಾಕು ಮಠ ಸ್ವಾಸ್ತಿಗೆ ದಿವಾಣದವರು ದೇಶದವರು ಇದ್ದು ಚೆಲುಕಾನುಮಾ: ಧರ್ಮಸ್ವಾಸ್ತಿಯ ವೃತ್ತಿ ಪಾಲಿಸಿ ಕಸಬೆಯೊಳಗೆ ಎರಡು ಕುಂಭ ಭತ್ತದ ಸ್ಥಳವನು ಧಾರಾಪೂರ್ವಕವಾಗಿ ಬರೆದು ಕೊಟ್ಟ ಈ ಪ್ರಮಾಣ ಸಮಸ್ತರ ಹೆಸರಲ್ಲು ಸಾಧ: ಪಟ್ಟಿ ಸ್ಥಳ ವಿಂಗಡವಾಗಿ ಬರ್ಸಿಕೊಡುವ ಹಾಂಗೆ ಹಜರತ ಸಾಹೀಬರು ಬರೆದುಕೋ: ಮಿಸಲ್ ಪ್ರಮಾಣ.

ಕಸಬೆ ಗೋಕರ್ಣದಲ್ಲಿ ನಿಮಗೆ ಸ್ಥಳ ವಿಂಗಡವಾಗಿ ಬರೆದುಕೊಟ್ಟ ವಿವ: ಕುನ್ನನ ಬುಲ್ಗುಗದ್ದೆಯ ಸ್ಥಳಕ್ಕೆ ಭತ್ತ ಕುಂಬು ೧। ವ ಕಳಕೆರೆಸ್ಥಳಕ್ಕೆ ಭತ್ತ ಕುಂಬ: ।।।೨ ॥ ಉಭಯಂ ಭತ್ತ ಕುಂ ।೨ ಖಂ ೨॥ ಎರಡು ಕುಂಭದ ಎರಡುವ: ಖಂಡಗ ಭತ್ತಕ್ಕೆ ದಿವಾಣಕ್ಕೆ ತೆರುವ ಭತ್ತದ ಕುಂಬು ೦.೨॥ ಎರಡುವರೆ ಖಂಡ: ನುಳಿದು, ಮಠದ ಸ್ವಾಸ್ತಿಗೆ ಬಿಟ್ಟ ಧರ್ಮ ಭತ್ತ ಕುಂಭ ೨ ಎರಡು ಕುಂಭ ಭತ್ತವನ್ನು ಕಾಲಕಾಲಂ ಪ್ರತಿಯಲ್ಲೂ ಶಿಷ್ಯ ಪಾರಂಪರೆಯಾಗಿ ಆಳಿ ಅನುಭವಿಸಿಕೊಂಡು ದಿವಾಣಕ್ಕು ದೇಶಕ್ಕು ಶ್ರೇಯೋಭಿವೃದ್ಧಿಗಳನ್ನು ಸ್ವಾಮಿ ಸನ್ನಿಧಿಯಲ್ಲಿ ಪ್ರಾರ್ಥಿಸಿಕೊಂಡು ಹಾಂಗ ಮಾಡಬೇಕು ಎಂದು ಶ್ರೀಮದ್ದಿಗ್ವಿಜಯ ರಾಮಚಂದ್ರ ತೀರ್ಥ ಶ್ರೀಪಾದಂಗಳಿಗೆ ಗೋಕರ್ಣ ಕ್ಷೇತ್ರದ ಗಾಂವಕಾರರು ಗ್ರಾಮಸಮಸ್ಥರು, ಬರೆದು ಕೊಟ್ಟ ಧರ್ಮಸಾಧನದ ಪಟ್ಟಿ – ಇದಕ್ಕೆ ಲೋಕಸಾಕ್ಷಿಗಳು.

ಆದಿತ್ಯ ಚಂದ್ರಾವನಿಲೊನಲಶ್ಚ ದೌರ್ಭೂಮಿರಾಪೋ ಹೃದಯಂ ಯಮಶ್ಚ
ಅಹಶ್ಚ ರಾತ್ರಿಶ್ಚ ಉಭೇಚ ಸಂಧ್ಯೆ ಧರ್ಮಸ್ಯ ಜಾನಾತಿ ನರಸ್ಯ ವೃತ್ತಂ ।

ಈ ಧರ್ಮವು ಪರಿಪಾಲಿಸಿದವರಿಗೆ ಫಲ–

ದಾನಪಾಲನಯೋರ್ಮಧ್ಯೇ ದಾನಾಧ್ಯಯನ ಪಾಲನಂ
ದಾನಸ್ವರ್ಗಮವಾಪ್ನೋತಿ ಪಾಲನಾದಚ್ಯುತಂಪದಂ
ಸ್ವದತ್ತಂ ದ್ವಿಗುಣಂ ಪುಣ್ಯಂ ಪರದತ್ತಾನು ಪಾಲನಂ
ಪರದತ್ತಾಪಹಾರೇಣ ಸ್ವದತ್ತಂ ನಿಷ್ಫಲಂ ಭವೇತ್
ಸ್ವದತ್ತಂಪರದತ್ತಂ ವಾ ಯಾಹರೇತಿ ವಸುಂಧರಾ
ಸಷ್ಟಿ ವರುಷ ಸಹಸ್ರಾಣಿ ವಿಷ್ಟಾಯಾಂ ಜಾಯತೇ ಕ್ರಿಮಿ – ಇಂತಪ್ಪುದಕ್ಕೆ ಸಾಕ್ಷಿಗಳು

ತಮ್ಮಯ ಭಟ್ಟರ ಮಗ ಸಣ್ಣ ಭಟ್ಟರು – ಸಣ್ಣ ಮಹಾಬಲ ಅಡಿಗಳ ಮಗ ನಾಗಪ್ಪ ಅಡಿಗಳು, ಗಾಂವಕಾರ ಒಪ್ಪಿತ ಅಶೋಕೆ ಗಾಂವಕಾರ್ರು ಅಪ್ಪಯ್ಯ ಹೆಗಡೆ

ಣಮಕ್ಕಿಯ ಮಾದೇಭಟ್ಟ ತಲಗೆರೆ ಶಂಭಟಾ ವೈತರಣಿಯ ಪುರುಷುತ್ತಮ ಹೆಗಡೆ. ಸಬೆಯ ಮಾಳಪ್ಪೈಯ ತಿಮ್ಮಪ್ಪಯ ಸಾಕ್ಷಿಗಳ ಒಪ್ಪಿತ ಸಣ್ಣ ಭಟ್ಟ ನಾಗಪ್ಪ ಅಡಿಗಳು ಂತ ನಾಯಕ ದೇಸಾಯಿ. ಬಾಂಬಿ ಪಾಟೀಲ ಜೋಶವೆಹಾರ. ಬಿ ಹುಜೂರ ದೇಶಕಾನಿ ಸಾರ ಮಿಣಜಾ ರಾಮ ಶೆಣ್ವಿ ಘೋರ ಬೆಳಗೆ ವಾರಣಾಸಿ ಮಿತ್ರ ಹೆಬ್ಬಾರ ಜೋತ ಬಂಡವಾಳ ಹಿರಿಗುತ್ತಿ ಸಣ್ಣ ಹೋಬನಾಯಕಾ ಹನೆಹಳಿ ಸಾಂತಯನ್ಯಾಕಾ ಲಿಕಪ್ಪ ಶೀನಘೊವರ ಮಗ ಲಕ್ಷ್ಮಣ ಶೇನವಾ ನಾಡಕರ್ಣಿ ತರ್ಫಹಡಿಯಾ ಕುಳಕರ್ಣಿ ಅನಂತ ಶೀನಘೊವರ ಇಂತಿವರ ಉಭಯಾನುಮತದಿಂದ ಬರೆದಾತ ಅಮರಸೆನಭವರ ಮಗ ಅನಂತ ಶೇನಭವನ ಬರಹಾದ ಸಾಧನಾ. (ಈ ಸಾಧನಕ್ಕೆ ಸಿಪೆಳಿ ಗಾಂವಕಾರರ ಶರ್ತ ಸಹಾ ಇದ್ದಸಾದನ ತಾರೀಕು ಮಾಹೆ ಜಿಲ್ಲಿ ಹೆಜ ಸುಹೋರ ಸಾಹಿತ ಬಿಮಸ್ಸೆನ ಅಲಘನಾ)

## 41. 'ಸರಸ್ವತಿ ಮಂಡಲ'ದಿಂದ

ಕಾರ್ಕಳದಲ್ಲಿ ವೆಂಕಟರಮಣ ದೇವರನ್ನು ಪ್ರತಿಷ್ಠೆ ಮಾಡಿದ್ದು ಶಾಲಿವಾಹನ ಶಕ 1459ನೇ ಹೇವಿಳಂಬಿ ಸಂ। ದ ವೈಶಾಖ ಶು 15 ಯಲ್ಲು ಎಂಬದಾಗಿ ಪೂರ್ವದ ವಂದು ಬರದಯಿಂದ ಕಂಡುಬರುತ್ತದೆ. ಶಾಲಿವಾಹನ ಶಕ 1374ನೇ ಪ್ರಜಾಪತಿ ಸಂ। ರದ ಫಾಲ್ಗುಣ 5ಯು ಕುಜವಾರದಲ್ಲಿ (13.2.1453) ಶ್ರೀಮನ್ಮಹಾ ಮಂಡಲೇಶ್ವರ ಸನ್ನಿಹಿತ ಪುರವರಾಧೀಶ್ವರ ಚಿತ್ತಿಸಪುತಲಿ ಸಿಂಹಾಸನಕ್ಕೆ ಒಪ್ಪುವ ಕ್ಷತ್ರಿಯವಂಶಕ್ಕೆ ಉತ್ಪನ್ನರಾದ ವಿದ್ಯಾನಗರದ ರಾಮರಾಜರಾಯರವರ ಕುಮಾರಕರಾದ ಕೃಷ್ಣ ರಾಯರವರ ಕುಮಾರಕರಾದ ಭುಜಬಲರಾಯರು ವಿಟ್ಟಲಪ್ರಭು ಮಗ ದಾಮಪ್ರಭು ಆ ಮಗಂದಿರೀಗೆ ಕೊಟ್ಟ ಭಾಷಾ ಪಟ್ಟಿ ಕ್ರಮವೆಂತೆಂದರೆ – (ಇದು ಭಟ್ಕಳದಲ್ಲಿ ಬಂದಾಗ್ಯೆ ಕೊಟ್ಟದ್ದು) ಇದ್ರ ನಕ್ಲು ಸರಸ್ವತಿಮಂಡಲದಲ್ಲಿ ಪ್ರಕಟವಾಗಿದೆ.

ಸರಸ್ವತಿಮಂಡಲದ 188ನೇ ಪೇಜುಗಳ ನಂತ್ರ ಪರಿಶಿಷ್ಟ 1 ಪ್ರಾರಂಭವಾಗುತ್ತದೆ. ಆ ಪರಿಶಿಷ್ಟದ 3ನೇ ಪೇಜಿನಲ್ಲಿ ಈ ತಾಮ್ರಪಟ್ಟಿಯ ನಕ್ಲು ಉಂಟು.

लिखितं ज्वानिंद्रतीर्थ आमची हवेली जागा राजमंदिरच्या कबज्यांत होती त्यास नवाब मनुसूर आल्लिखानाचा परवाना बळवंत शिंगराजाच्या नावे आलि यावर बळवंत शिंगराजाच्या मारफात हवेली जागा भरून पावलो हा राजीनामा लिहिलासहि

ಅದೇ ಸರಸ್ವತಿಮಂಡಲದಲ್ಲಿ ಪ್ರಕಟವಾದ ಇನ್ನೊಂದು ಶಾಸನ–

ಶಾ. ಶ. 1638ನೇ ದುರ್ಮುಖಿ ಸಂ। ರದ ಆಶ್ವಜ ಶು 10 ಸ್ಥಿರವಾರದಲ್ಲು (1716 ಸಪ್ಟಂಬರ್ 15) ಬಿಳಗಿ ಸೋಮಶೇಖರ ನಾಯಕರು ಋಕ್‌ಶಾಖೆಯ ಅಶ್ವಲಾಯನ ಸೂತ್ರದ ಕೌಂಡಿಣ್ಯಗೋತ್ರದ ಮಾಳಪಈ ಮತ್ತು ದಾಮರಸ ಕಮ್ತಿ ವತ್ಸಗೋತ್ರದ ಜೋಗಣ ಕಮ್ತಿ ಮತ್ತು ಆಂಬಣಬಾಳಿಗ ಮತ್ತು ಕೌಶಿಕ ಗೋತ್ರದ ಸಾಂತಪ್ಪ ಶೇನಭಾವ ಇವರಿಗೆ ಕೊಟ್ಟ ಭೂದಾನದ ತಾಮ್ರಪಟ್ಟಿಯ ನಕ್ಲು ಉಂಟು.

# 42. ಕೆಲವು ಪುಸ್ತಕಗಳು ಹಾಗೂ ಆಯ್ದ ವಿವರಗಳು

ಬೊಂಬೈ = ಖೇತವಾಡಿ 7ನೇ ಗಲಿ ಖಂಬಾಟಾ Lane ಬೃಹಜ್ಯೋತಿಷಾರ್ಣವ ಗ್ರಂಥಕರ್ತಾ ವೆಂಕಟರಾಮಾತ್ಮಜ ಹರಿಕೃಷ್ಣ ಶರ್ಮಾ-

ನಿಜ - ವೆಂಕಟೇಶ್ವರ ಸ್ಟೀಮ್ ಮುದ್ರಣ ಯಂತ್ರಾಲಯದಲ್ಲಿ ಮುದ್ರಿತವಾಗಿ ಖೇಮರಾಜ ಶ್ರೀ ಕೃಷ್ಣದಾಸರು ಪ್ರಕಾಶಪಡಿಸಿದ ಶಕ 1836

**ಬ್ರಾಹ್ಮಣೋತ್ಪತ್ತಿ ಮಾರ್ತಾಂಡ**ವೆಂಬ (ಸ್ಕಂದಪುರಾಣದ ಸಹ್ಯಾದ್ರಿ ಖಂಡದ ಆಧಾರದಿಂದ) ಪುಸ್ತಕದಲ್ಲಿ 349ನೇ ಪುಟದಲ್ಲಿ "ಶೆಣವಿ ಸಾರಸ್ವತ ಬ್ರಾಹ್ಮಣೋತ್ಪತ್ತಿ ಪ್ರಕರಣ 23" ಅಂತ್ಯವಾಗಿದೆ. ಇದರಲ್ಲಿ ಮತ್ಸ್ಯಾಹಾರದಿಂದ ದೋಷವಿಲ್ಲಾ. ಎಲ್ಲಾ ಬ್ರಾಹ್ಮಣರಲ್ಲಿಯೂ ಇರುವ ದೋಷಗಳನ್ನು ಹೇಳಿ ತಕ್ಕ ದೋಷವನ್ನು ಎಣಿಸಕೂಡದೆಂತ ಶಿವನು ಮಗನಾದ ಸ್ಕಂದನಿಗೆ ಹೇಳಿದ್ದಾನೆ. ಶ್ಲೋಕಗಳು 52.

**ಉತ್ತರ ಸಹ್ಯಾದ್ರಿ ಖಂಡ** ಹೊಸಬಾಳೆ ಗ್ರಾಮ ನಿವಾಸಿ ಅನಂತಶರ್ಮರಿಂದ ಪ್ರಕಟಿಸಲ್ಪಟ್ಟಿದ್ದು ಶಕ 1834. ಇದ್ರಲ್ಲಿ ಸಾರಸ್ವತ (ಗೌಡ)ರ ವಿಷಯದಲ್ಲಿ ಹೊಸ ಅಧ್ಯಾಯವನ್ನು ತಯಾರಿಸಿ ಸೇರಿಸಿದ್ದಾರೆ.

ಶ್ರೀ ಗುರುರಾಜ ಭಟ್ ಎಂ.ಎ. ಬಿ. ಟಿ. ಎಂಜಿಎಂ ಕಾಲೇಜು ಉಡುಪಿ ಇವರು ಬರೆದು ಉಡುಪಿ ನವವಾಣಿ ಪಡುಪೇಟೆ ಉಡುಪಿ ಇದರ ಸಂಪಾದಕ ಕೆ. ಲಕ್ಷ್ಮೀನಾರಾಯಣ ಭಟ್ಟರು ಪ್ರಕಾಶ ಪಡಿಸಿದ (1963) **ತುಳುನಾಡು** ಎಂಬ ಪುಸ್ತಕದಲ್ಲಿ 159ನೇ ಪರೇಗಿನ ಪುಟಗಳಲ್ಲಿ ಗೌಡಸಾರಸ್ವತ ಬ್ರಾಹ್ಮಣರ ವಿಷಯ ಬರೆದಿದ್ದಾರೆ. ಇದೇ ಪ್ರಕಾರ ಪುಸ್ತಕದ 238-239 ಪುಟಗಳಲ್ಲಿ ಗೌಡಸಾರಸ್ವತದಲ್ಲಿರುವ ಕೌಟುಂಬಿಕ ಹೆಸರುಗಳ ತಮಗೆ ಕಂಡ ಅರ್ಥವನ್ನು ಕೊಟ್ಟಿದ್ದಾರೆ. ಇದರಲ್ಲಿ ಬಹಳಂಶ ತಪ್ಪಾಗಿದೆ.

**ಗೊಯಂಕಾರಾಂಚಿ ಗೊಯಾಂ ಭಾಯ್ಲಿ ವಸಣುಕ** ಪು 92-93ರಲ್ಲಿ ಕಾಣುವ ವಿವರ -

ಮಾಧವಾಚಾರ್ಯರು ವಿದ್ಯಾರಣ್ಯರಾಗಿ ಸನ್ಯಾಸಸ್ವೀಕಾರ ಮಾಡಿದ್ದು ಕ್ರಿ. ಶ. 1331ರಲ್ಲಿ ಎಂಬುದು ಹಂಪೆಯ ದೇವಸ್ಥಾನದಲ್ಲಿ ಇರುವ ಶಿಲಾಶಾಸನದಿಂದ ಕಂಡು ಬರುತ್ತದೆ. ಮಾತ್ರವಲ್ಲ The never to be forgotten Empire PP 227-232ರಲ್ಲಿಯೂ ಎಪೆಂಡಿಕ್ಸ್ 1ರಲ್ಲಿಯೂ ಕಾಣುತ್ತದೆ. ಇವರು ತ್ರೈಲಿಂಗ ದ್ರಾವಿಡ ಬ್ರಾಹ್ಮಣರು. ಭಾರದ್ವಜ ಗೋತ್ರ ಯಜುರ್ವೇದ - ಬೌಧ್ಯಾಯನ ಸೂತ್ರ ಯಾಜುಶಿ ಶಾಖಾ. ತಾಯಿಯ ಹೆಸರು ಶ್ರೀಮತಿ ತಂದೆಯ ಹೆಸರು ಮಾಯಣ ಎಂಬುದಾಗಿ ಇವರ ಸಹೋದರ

ಸಾಯಣಾಚಾರ್ಯರು ರಚಿಸಿದ ಪರಾಶರ ಸ್ಮೃತಿವ್ಯಾಖ್ಯಾನದಲ್ಲಿ ಉಂಟು –

ಅನಂತರ ವಿಜಯನಗರದಲ್ಲಿ ಮಂತ್ರಿಗಳಾಗಿದ್ದ ಮಾಧವಮಂತ್ರಿಯವರು ಕಾಶ್ಮೀರದ ಸಾರಸ್ವತ ಬ್ರಾಹ್ಮಣರು ತಂದೆಯ ಹೆಸರು ಚಾವುಂಡ ಗೋತ್ರ ಅಂಗೀರಸ ಎಂತ Epig Carn Vol. 7 Shikarpur Taluk inscription No. 281 at Horomuchhadi ಅಗ್ರಹಾರ on a stone lying in front of the ಕಲ್ಲೇಶ್ವರ Temple page 256 ಬೊಂಬೈ ವೆಂಕಟೇಶ್ವರ ಸ್ಟೀಮ ಪ್ರೆಸ್, ಬೊಂಬೈ ಖೇತವಾಡಿ – ಅಧ್ಯಕ್ಷ ಖೇಮರಾಜ – ಶ್ರೀಕೃಷ್ಣ ದಾಸ (1955)

**ಜಾತಿಭಾಸ್ಕರ**ವೆಂಬ ಪುಸ್ತಕದ ಪೇಜು 51ರಿಂದ 53ರ ವರೇಗೆ ಶೆಣವಿ ಸಾರಸ್ವತ ಬ್ರಾಹ್ಮಣರ ಉತ್ಪತ್ತಿ ಉಂಟು. ಇದು ಸಹ್ಯಾದ್ರಿ ಖಂಡಕ್ಕನುಸಾರವಾದದ್ದು. ಸಂಪಾದಕರು. ಪಂಡಿತ ಜ್ವಾಲಾಪ್ರಸಾದ ಮಿತ್ರ ಮೊರಾದಾಬಾದ. ಪುಟ 75ರ ಓಂಭಾಗ ಬಾಕಿಯಿರುತ್ತದೆ. ಪುಟ 76, ಕೂಡಾ ಬಾಕಿ. ಪುಟ 77, 78 ಇಲ್ಲ. ಪುಟ 79 ಬಾಕಿ ಇರುತ್ತದೆ.

(ಮಠಗಳ ಪಾರಂಪರ್ಯ) (78ನೇ ಶೀಟು ಹರಿದುಹೋಗಿದೆ.)

ತಾ. 25–4–1957ರಲ್ಲು ಶ್ರೀ V.N. Kudva ICS, Nutford 67, Harrington Road, Chetpet, Madras 31 ಇವರಿಗೆ ಟಪ್ಪಾಲ ರಿಜಿಸ್ಟ್ರಿಮೂಲಕ ರವಾನ್ನಿದ್ದು –

1. ಶಿಂದೆಶಾಹಿಯಲ್ಲಿ ಶ್ರೀ ಭಕ್ಷಿ ಬಹಾಬರ ಜೀವಬಾದಾದ ಕೇರಕರ – ವಗೈರೆರ ಚರಿತ್ರೆ, ಮರಾಠಿ, ದೊಡ್ಡ ಪುಸ್ತಕ

2. Bulletin De Vasco Da Gama No.

ಶ್ರೀ ಪಿಸುರ್ಲೆಕರರು ಬರದ ಸಾಸಷ್ಟಿ ಬಾರ್ದೇಶ – ತಿಸವಾಡಿಯಲ್ಲಿ ಪೋರ್ತುಗಿಸರು ನಾಶಪಡಿಸಿದ ದೇವಸ್ಥಾನಗಳ ವಿವರ ಮತ್ತು ಪ್ರತಿಯೊಂದು ಊರಿನಲ್ಲಿ ಮತಾಂತರಗೊಳಿಸಿದ ಬ್ರಾಹ್ಮಣರ ಹೆಸರುಗಳು ಸಹ ಇರುವ ಪೊರ್ತುಗೀಸ ಭಾಷೆಯ ಬೂಕು ವಾಪ್ಸು ಬಂತು.

ತಾ. 30–5–1957ಲ್ಲು ಸದ್ರಿಯವರೀಗೆ ರಿಜಿಸ್ತ್ರಿ ಪಾರ್ಸೆಲ ಮೂಲಕ ಕಳುಹಿಸಿದ ಬೂಕುಗಳ ವಿವರ

1. ಸಾರ್ಥ ಗುರುಪರಂಪರಾಮೃತ (ಗೋಕರ್ಣ ಮಠದ್ದು).

2. "ಪುಣ್ಯಾತ್ಮೊ ರಾಮಕಾಮತಿ" ಗೋಮಾಂತಕ ಛಾಪಖಾನೆ, ಗಿರ್ಗಾಂವ ಬೊಂಬಾಯಿ.

3. "ಆಮಚೆ ಗೋಮಾಂತಕ" ಗುಂಡು ಸೀತಾರಾಮ ಆಮೊಣಕರ, B.A.,

ಗೋಮಾಂತಕ ಛಾಪಖಾನೆ. ಗಿರ್ಗಾಂವ ಬೊಂಬಾಯಿ.

4. ಶ್ರೀ ಮಹಾಲಕ್ಷ್ಮೀ ಮಾಹಾತ್ಮ್ಯ ವರ್ಣನ. ಸಂಸ್ಥಾನ ಬಾಂದವಡೆ ಗೋವಾ By ರಾಮಕೃಷ್ಣ ಅನಂತ ಶೆಣ್ವೆ ರಾಕೊಡಕೆ ಕಾಕೊಡೆ. ಗೋವಾ.

5. ಗೋಮಾಂತಕ ಪರಿಚಯ – ಬಾಲಕೃಷ್ಣ ರಾಮಚಂದ್ರ ಸಾಂವರ್ದೇಕರ. ಪ್ರಕಾಶಕ : ತುಕಾರಾಮ ಮುರುಂಡ ಸಾಂವರ್ದೇಕರ. ಏಕಾವಲಿ ಬಿಲ್ಡಿಂ. ಪರೇಲಸ್ಟ್ರೀಟ್. ಬೊಂಬಾಯಿ.

6. ಆಜಚಾರಕಾಲಚೆ ಗೋಮಂತಕ By the Goa Hindu Association ರೌಪ್ಯ ಮಹೋತ್ಸವ ಸ್ಮಾರಕ ಗ್ರಂಥ. 1944.

7. ಸಹ್ಯಾದ್ರಿಖಂಡ ಪೂರ್ವಾರ್ಧ ಉತ್ತರಾರ್ಧ ಅರ್ಥಾತ್ **ಕೊಂಕಣಾಖ್ಯಾನ**

ಲೇಖಕ ಡಾ। ರಘುನಾಥ ಸೀತಾರಾಮ ದೇಸಾಯಿ ಬಿಟ್ಟಿಸ ಪೆಡಣೇಕರ. ಗೌಡ ಬ್ರಾಹ್ಮಣ ಸಭಾ. ಪೆಡಣೆ ಪ್ರಾಂತ. ಗೋವಾ. 24th Oct. 1951–ವಾಸ್ಕೊ ಬಂತು.

## 43. 'ಪ್ರಭಾತ'ದಿಂದ ಒಂದು ಲೇಖನ

ಗೋವೆಯಲ್ಲಿ ನೆಲೆಸಿದ ಗೌಡ ಸಾರಸ್ವತರು ಆದಿಯಲ್ಲಿ ಸ್ಮಾರ್ತರೋ ವೈಷ್ಣವರೋ ಎಂಬ ವಿಷಯದಲ್ಲಿ ಮಂಗ್ಳುರಲ್ಲಿ ಎಂ. ಬಾಬುರಾಯ ಪ್ರಭುರು ಪ್ರಕಾಶಕರಾಗಿಯೂ K. V. Shenoyಯವರು ಸಂಪಾದಕರಾಗಿಯೂ ಮಂಗ್ಳೂರ ಪ್ರೆಸ್ಸಿನಲ್ಲಿ ಮುದ್ರಿತವಾಗುತ್ತಿದ್ದ **'ಪ್ರಭಾತ'**ವೆಂಬ ವಾರಪತ್ರಿಕೆಯ ತಾ. 19–2–1939 ರವಿವಾರದ (ಸಂಪುಟ 5 ಸಂಚಿಕೆ 4) ಪತ್ರಿಕೆಯಲ್ಲಿ ಪ್ರಕಟವಾದ "ವೆಂಕಟೇಶ ವಿಷ್ಣು ವೈದ್ಯ" ಇವರು ಬರೆದ ಲೇಖನದ ಸಾರಾಂಶ – "ಸಾರಸ್ವತರ ಪ್ರಾಚೀನ ಸಂಪ್ರದಾಯ ಶಿರೋನಾಮೆ" – ಗೌಡಸಾರಸ್ವತರು ಗೋವೆಯಲ್ಲಿ ವಸತಿಮಾಡಿದಾಗ್ಯೆ ಅವರು ಲಿಂಗಾರಾಧಕರು ಅಂದರೆ ಶೈವರು ಅಥವಾ ಸ್ಮಾರ್ತರು ಆಗಿದ್ದರು. ಆ ಪೈಕಿ ಕೆಲವರು ಮಧ್ವಾಚಾರ್ಯರ ನಂತರ ವೈಷ್ಣವರಾದರು ಎಂಬ ಹಾಗೆ ಯಾರೋ ಒಂದು ಲೇಖನ ಬರೆದಿದ್ದರಂತೆ. (ಅದು ಯಾರು ಬರೆದದ್ದು, ಯಾವುದರಲ್ಲಿ ಬರೆದದ್ದು ಎಂತ ಹೇಳಲಿಲ್ಲ) ಆ ಲೇಖಕರು ಅವರ ಅಂಬೋಣಕ್ಕೆ ಆಧಾರವಾಗಿ ಗೋವೆಯ ಸಾರಸ್ವತರ ಕುಲದೇವತೆಗಳು ಶ್ರೀಮಂಗೇಶ, ಶ್ರೀರಾಮನಾಥ, ಶ್ರೀ ನಾಗೇಶ, ಶ್ರೀ ದಾಮೋದರ ಮುಂತಾದ ಲಿಂಗಿಗಳ ನಿದರ್ಶನ ಮಾಡುತ್ತಾರೆಂತಲೂ ಅದೇ ಆಧಾರದಿಂದ ಸ್ಮಾರ್ತರಾಗಿದ್ದಾರೆಂತ ತಿಳ ಕೊಳ್ಳಲಾಗುವುದಿಲ್ಲಾ. ಯಾಕಂದ್ರೆ ಶ್ರೀ ಮಹಾಲಸಾ, ಶಾಂತಾದುರ್ಗಾ, ಶ್ರೀ ನವದುರ್ಗಾ, ಶ್ರೀ ವಿಜಯದುರ್ಗಾ, ಶ್ರೀ ಕಾಮಾಕ್ಷಿ ಮುಂತಾದ ಶಕ್ತಿ ದೇವತೆಗಳು ಕುಲದೇವತೆಗಳಾಗಿದ್ದಾವೆ ಎಂಬದರಿಂದ ಶಾಕ್ತರೆಂತಾಗಲೀ ಶ್ರೀ ಲಕ್ಷ್ಮೀನಾರಾಯಣ, ಶ್ರೀ ನರಸಿಂಹ, ಶ್ರೀ ಬಿಂದುಮಾಧವ, ಶ್ರೀ ದೇವಕಿಕೃಷ್ಣ ಇತ್ಯಾದಿ ಕುಲದೇವತೆಗಳ ಆಧಾರದಿಂದ ವೈಷ್ಣವರೆಂತಾ ಆಗಲೀ ತಿಳಕೊಳ್ಳಲು ಅವಕಾಶವಿದೆ. ಹಾಗೂ ಬೇತಾಳ ರವಳನಾಥ ಇತ್ಯಾದಿ ದೇವತೆಗಳು ಕೆಲವರ ಕುಲದೇವರೆಂಬದರಿಂದ --ರೆಂತಲೂ ಹೇಳಬಹುದು. ಈ ವಿಚಾರಸರಣಿಯೇ ಭ್ರಾಮಕವಾಗಿದೆ.

"ನಿಜವಾಗಿ ಸಾರಸ್ವತ ಬ್ರಾಹ್ಮಣರು ಈ ಎಲ್ಲಾ ಕುಲದೇವತೆಗಳನ್ನು ಜನ್ಮಭೂಮಿಯಾದ ಗೌಡದೇಶದಿಂದಲೇ ಗೋಮಾಂತಕಪ್ರಾಂತ್ಯಕ್ಕೆ ತಂದಿದ್ದರೆಂಬದಕ್ಕೆ ಎಳ್ಳಷ್ಟು ರುಜುವಾತು ತೋರುವುದಿಲ್ಲ" ಶ್ರೀ ಮಾಂಗಿರೀಶ ಎಂಬ ಹೆಸರಿನ ಉತ್ಪತ್ತಿಯು ಬಿಹಾರ ಪ್ರಾಂತ್ಯದಲ್ಲಿದ್ದ ಮಾನಗಿರಿ ಅಥವಾ ಮುಂಗೇರ ಈ ನಗರವನ್ನು ಹೋಲಿಸಲ್ಪಡುತ್ತದೆ. ಆದರೆ ಪ್ರಾಚೀನಕಾಲದಲ್ಲಿ ಸಾರಸ್ವತರು ಗೋಮಾಂತಕಕ್ಕೆ ಬಂಗಾಲಪ್ರಾಂತದ ಗೌಡದೇಶದಿಂದ ಬಂದಿದ್ದರೋ – ಪಂಜಾಬದ ಗುಡ್ಡ ಪ್ರಾಂತ್ಯದಿಂದ ಬಂದವರೋ ಅಥವಾ ಬಿಹಾರಪ್ರಾಂತ್ಯದ ಮೊಂಗೇರ ಈ ನಗರ ವಿದ್ಯಾಮೈಥಿಲದಿಂದ

ಬಂದವರೋ ಎಂಬ ವಿಷಯದಲ್ಲಿ ಮತಭೇದವಿದೆ. ಶ್ರೀ ಮಹಾಲಸಾ ನರಸಿಂಹ ಕುಲದೇವತೆಗಳು ಸಾರಸ್ವತರು ಗೋಮಾಂತಕಕ್ಕೆ ಬಂದ ಕೆಲವು ಶತಮಾನಗಳ ನಂತರ ಸ್ಥಾಪಿಸಲ್ಪಟ್ಟವುಗಳೆಂತ ದಂತಕಥೆಗಳಿವೆ.

"ಆರ್ಯಕಾಲದ ಗೋಮಾಂತಕ ಮಾಸಿಕ 1935" ಇದರಲ್ಲಿ ಹಿಂದಿನ ಕಾಲದ ಎಲ್ಲಾ ಬ್ರಾಹ್ಮಣರಿಗೂ ಸ್ಮಾರ್ತ ಸಾಂಪ್ರದಾಯವೇ ಇತ್ತು ಮತ್ತು ಇತ್ತಲಾಗಿನ 4-5 ಶತಮಾನಗಳಲ್ಲಿ ವೈಷ್ಣವ ಸಾಂಪ್ರದಾಯದ ಬೇರೊಂದು ಪದ್ಧತಿ ಆಯಿತು. ಎಂತ ಬರೆದಿದ್ದಾರೆ. ಆದರೆ ವೈದಿಕಕಾಲದಲ್ಲಿ ರುದ್ರನೆಂಬ ದೇವತೆಯೇ ರೂಢಿಯಲ್ಲಿ ಇಲ್ಲದಾಗಿತ್ತು. ಅಂದಮೇಲೆ ಉಪಾಸಕರ ಸ್ಮಾರ್ತಸಾಂಪ್ರದಾಯವೆಲ್ಲಿರಬೇಕು ? ಹಿಂದು ಧರ್ಮದ ಪುನರುಜ್ಜೀವನ ಕಾಲದಲ್ಲಿ ಸ್ಮಾರ್ತಸಂಪ್ರದಾಯ ನಿರ್ಮಿತವಾದದ್ದು. ಅದರಂತೆ ವೈಷ್ಣವ. ಶಾಕ್ತ, ಗಾಣಪತ್ಯ, ಸೌರ ಇತ್ಯಾದಿ ಸಾಂಪ್ರದಾಯಗಳು ನಿರ್ಮಿತವಾದವು. ಎಲ್ಲಾ ಸಾಂಪ್ರದಾಯಗಳಿಕಿಂತ ಮುಂಚೆ ಸ್ಮಾರ್ತ ಸಾಂಪ್ರದಾಯವಿತ್ತು ಎಂಬದಕ್ಕೆ ಎಳ್ಳಿನಷ್ಟು ಆಧಾರವಿಲ್ಲ. ಪ್ರೊ. ರಾಧಾಕೃಷ್ಣನ್ ಪ್ರೊ. ಮೆಕ್ಸ್ ಮುಲ್ಲರ್ ಮುಂತಾದ ತತ್ತ್ವಜ್ಞಾನಿಗಳು ಬರೆದ ಇತಿಹಾಸಗಳಲ್ಲಿ ಇದರ ವಿರೋಧವಾದ ಉದಾಹರಣೆಗಳು ದೊರೆಯುತ್ತದೆ.

ವೈಷ್ಣವಸಂಪ್ರದಾಯದ ಬೇರೊಂದು ಪಂಥವು ಇತ್ತಕಡೆ ನಾಲ್ಕೈದು ಶತಮಾನಗಳಲ್ಲಿಯೇ ಉತ್ಪನ್ನವಾಗಿತ್ತು. ಈ ಅಭಿಪ್ರಾಯವು ಹಾಸ್ಯಾಸ್ಪದವೇ ಸರಿ. ಮಹಾಭಾರತ ಕಾಲದಲ್ಲಿ ವಿಷ್ಣುಪೂಜಕ ವೈಷ್ಣವ ಸಂಪ್ರದಾಯವಿತ್ತು. ಇಸವಿ ಸನ್ನದ ಮುಂಚೆ ಭಾರತ ಸಂಚರಿಸಿದ ಗ್ರೀಸ ದೇಶದ ಪ್ರವಾಸಿ ಮೆಗಸ್ಥನೀಸನು ಬರೆದ ವೃತ್ತಾಂತದಲ್ಲಿ ವಿಷ್ಣು ದೇವಸ್ಥಾನಗಳ ಉಲ್ಲೇಖ ಮಾಡಿದ್ದಾನೆಂತ ತಿಳಿಯುತ್ತದೆ. ಚಚನಾಮೆಯಲ್ಲಿ ವಿಷ್ಣುದೇವಸ್ಥಾನ ನಾಶಮಾಡಿದ ವೃತ್ತಾಂತ ಉಂಟು. ಬುದ್ಧನ ಜನಕಥೆಯಲ್ಲಿ ವೈಷ್ಣವರು ಬೌದ್ಧ ಧರ್ಮ ಸ್ವೀಕಾರಮಾಡಿದ ವೃತ್ತಾಂತವಿದೆ. ಮಗಧ ದೇಶದ ಅರಸು ಅಜಾತಶತ್ರು ಇವನ ರಾಜಧಾನಿಯಲ್ಲಿ ವಿಷ್ಣು ದೇವಸ್ಥಾನವಿತ್ತು. ಕೌಸಾಂಬಿ ದೇಶದ ಅರಸ ಉದಯನ್ ಎಂಬವನು ವಾಸವದತ್ತೆಯ ಭೇಟಿಗಾಗಿ ವಿಷ್ಣುದೇವಸ್ಥಾನದಲ್ಲಿ ಹೋಗಿ ಇವರ ಮಾರ್ಗಪ್ರತೀಕ್ಷೆ ಮಾಡುತ್ತಿದ್ದಂತೆ ಪುರಾವೆಯಿದೆ. ವೈಷ್ಣವ ಪರಂಪರೆಯ ನಾರದ ಸನಕ ಸನಂದನಾದಿ ಋಷಿಗಳಿಂದ ನಡೆದು ಬಂದಂತೆ ರಾಣಗಳಲ್ಲಿ ಉಲ್ಲೇಖವಿದೆ. ಶ್ರೀಮದ್ಭಾಗವತದಲ್ಲಂತೂ ವೈಷ್ಣವ ಸಾಂಪ್ರದಾಯದ ಮಹಿಮೆಯೇ ವರ್ಣಿಸಲ್ಪಟ್ಟಿದೆ. ಹೀಗಿರುವುದರಿಂದ ವೈಷ್ಣವ ಸಾಂಪ್ರದಾಯವು 4-5 ಶತಮಾನಗಳಿಂದೀಚೆಗೆ ಬೇರೊಂದು ಪಂಥವಾಗಿ ನಿರ್ಮಾಣವಾಯಿತೆಂಬುದು ತಪ್ಪು. ಪರಶುರಾಮನು ತ್ರಿಹೋತ್ರಪುರದಿಂದ ಗೋಮಂತಕಕ್ಕೆ ತಂದ ದಶಗೋತ್ರ ಬ್ರಾಹ್ಮಣರಲ್ಲಿ ವಂದಾದರೂ ವೈಷ್ಣವರಿರಲಿಕ್ಕಿಲ್ಲವೇ.

ಪರಶುರಾಮನು ವಿಷ್ಣುವಿನ ಅಂಶ ಅಂದ ಮೇಲೆ ಅವನೀಗೆ ತನ್ನ ಭಕ್ತ ಅನುಯಾಯಿಗಳ ವಿಸ್ಮರಣೆ ಹೇಗಾದೀತು. ವಿಜಯಧ್ವಜ ಮತ್ತು ಶ್ರೀಧರ ಈ ಭಾಗವತ ಟೀಕಾಕಾರರು ಟೀಕೆಯಲ್ಲಿ ಸಾರಸ್ವತರ ಉಲ್ಲೇಖ ಮಾಡಿದ್ದಾರೆ. ಏನೆಂದರೆ ಸರಸ್ವತಿ ನದೀತೀರದಲ್ಲಿ ಭಾಗವತ ಕಾಲದಲ್ಲಿ ವಿಷ್ಣುಪೂಜಿಕ ಬ್ರಾಹ್ಮಣರಿದ್ದರು ಎಂತ ಹೇಳಿದ್ದಾರೆ.

ಬಹುತೇಕ ಜನರು ವೈಷ್ಣವ ಸಾಂಪ್ರದಾಯವು ಮಧ್ವಾಚಾರ್ಯರಿಂದಲೇ ಸ್ಥಾಪಿತವಾದದೆಂಬ ತಪ್ಪು ತಿಳುವಳಿಕೆ ಮಾಡಿಕೊಂಡಂತೆ ಕಾಣುತ್ತದೆ. ಶಂಕರಾಚಾರ್ಯರ ಜನ್ಮ 9ನೆ ಶತಮಾನದಲ್ಲಿ. 1ನೇಯವರು ಸ್ಮಾರ್ತ ಸಾಂಪ್ರದಾಯವನ್ನು ಪ್ರಚಾರ ಮಾಡಿದರು. 2ನೇಯವರು ವೈಷ್ಣವ ಧರ್ಮಪ್ರಸರಿಸಿದರು. ವಿನಹಾ ಅವರೇ ಸಾಂಪ್ರದಾಯ ಕರ್ತರಲ್ಲಾ. ವೈಷ್ಣವ ಕೇವಲ ವೈಷ್ಣವ. ಶ್ರೀ ವೈಷ್ಣವ ಭಾಗವತ ಸ್ಮಾರ್ತ – ಶೈವ – ವೀರಶೈವ – ಮುಂತಾದ ಸಾಂಪ್ರದಾಯಗಳು ಮತ್ತು ಶುದ್ಧಾದ್ವೈತ – ದ್ವೈತಾದ್ವೈತ – ಅದ್ವೈತ – ವಿಶಿಷ್ಟಾದ್ವೈತ ಇತ್ಯಾದಿ ಮತಗಳು ಪೂರ್ವದಿಂದಲೇ ಇರುತ್ತಿದ್ದವು. ಅವುಗಳನ್ನು ಆಚಾರ್ಯರುಗಳು ಪ್ರಚಾರಮಾಡಿದ್ದಾಗಿರುತ್ತದೆ. ಶಂಕರಾಚಾರ್ಯರ ಚರಿತ್ರೆಯಲ್ಲಿ ಅವರು ವೈಷ್ಣವರನ್ನು ವಾದದಲ್ಲಿ ಪರಾಭವಮಾಡಿದ ಉಲ್ಲೇಖವಿರುವುದರಿಂದ ಅದರ ಹಿಂದೆ ವೈಷ್ಣವ ಸಾಂಪ್ರದಾಯವಿತ್ತೆಂತ ಕಾಣುತ್ತದೆ. ಹಾಗಾದರೆ ಅಂಥಾ ವೈಷ್ಣವರು ಗೌಡಸಾರಸ್ವತರಲ್ಲಿ ಇರಲಿಲ್ಲವೆಂಬುದಕ್ಕೆ ಆಧಾರವೇನು ?

ಗೋಮಾಂತಕದ ಕುಶಸ್ಥಳಿ ವ ಮಾಡಗಾಂವಿನಲ್ಲಿ ಸಾರಸ್ವತರ ಸ್ಮಾರ್ತ ಸಾಂಪ್ರದಾಯದ ಒಂದು ಧರ್ಮಪೀಠವಿತ್ತು. ಅದನ್ನು ಪೋರ್ಚುಗೀಸರು ನಾಶಮಾಡಿದರೆಂತ ದಂತಕತೆ ಉಂಟು. ಕೆಲವು ಲೇಖಕರು ಅದನ್ನು ಕೈವಲ್ಯಪುರದ ಗೌಡಪಾದಾಚಾರ್ಯ ಮಠಕ್ಕೆ ಅದನ್ನು ಹೊಂದಿಸಿರುವರು. ಕೈವಲ್ಯಪುರ ಮಠದ ಇತಿಹಾಸಕರ್ತರಿಗೆ ಆ ಮಠ ಕುಶಸ್ಥಳಿಯಲ್ಲಿತ್ತೋ ಮಡಂಗಾವಿನಲ್ಲಿತ್ತೋ ಇದನ್ನು ಹೇಳಲಾಗಲಿಲ್ಲ. ಮಠಗ್ರಾಮವೆಂಬ ಹೆಸರಿನ ಮೇಲೆ ಮಡಗಾಂವದಲ್ಲಿ ಮಠವಿತ್ತೆಂತ ಹೇಳುವದಾದರೂ ಅಲ್ಲಿ ವೈಷ್ಣವ ಕಾಲದಿಂದ ವಾಸಿಸುವರಾದ್ರಿಂದ ಅಲ್ಲಿ ವೈಷ್ಣವ ಸಾಂಪ್ರದಾಯದ ಮಠವಿರುವದೇ ಸಂಭವನೀಯ. ಪೋರ್ಚುಗೀಸರ ಇತಿಹಾಸದಲ್ಲಿ ಸಣ್ಣ ಸಣ್ಣ ದೇವಸ್ಥಾನಗಳನ್ನು ನಾಶಮಾಡಿದ್ದು ಕಾಣುತ್ತದೆ ಹೊರತು ದೊಡ್ಡ ಮಠ ನಾಶಮಾಡಿದ ಉಲ್ಲೇಖವಿಲ್ಲಾ. ಮಠ ನಾಶಮಾಡಿದ್ರೆ ಆದ್ರ ಉಲ್ಲೇಖವಿರುತ್ತಿತ್ತು.

ಕೈವಲ್ಯಪುರದ ಗೌಡಪಾದಾಚಾರ್ಯರ ಮಠದ ಸ್ಥಾಪನೆಯು ಇತ್ತ ಕಡೆಯಲ್ಲಿಯೇ ಆಗಿರಬೇಕು.

ಗೋಮಾಂತಕದಲ್ಲಿದ್ದ ಸ್ಮಾರ್ತಸಾಂಪ್ರದಾಯದ ಸಾರಸ್ವತರು ಯಾವಾಗ್ಗೆ ಯಾಕಂದ್ರೆ ವೈಷ್ಣವ ಸಾಂಪ್ರದಾಯವನ್ನು ಸ್ವೀಕರಿಸ ತೊಡಗಿದರೋ ಆಗ್ಗೆ ಶ್ರೀಮಂಗೇಶ ದೇವಸ್ಥಾನದಲ್ಲಿ ಸ್ಮಾರ್ತ ಸಾಂಪ್ರದಾಯಕರ ಒಂದು ದೊಡ್ಡ ಸಭೆ ಕೂಡಿತು. ಮತ್ತು ಸಾಂಪ್ರದಾಯದ ಇಳಿತವನ್ನು ತಡೆಯುವಗೋಸ್ಕರ ಒಂದು ಹೊಸ ಧರ್ಮಪೀಠವನ್ನು ಸ್ಥಾಪಿಸುವದೆಂತ ನಿರ್ಣಯವಾಯಿತು. ಮತ್ತು ಕಾಶೀ ಕ್ಷೇತ್ರದಲ್ಲಿ ಒಬ್ಬ ತಮ್ಮ ಸಾಂಪ್ರದಾಯದ ಬ್ರಹ್ಮಚಾರಿಗೆ ಸನ್ಯಾಸದೀಕ್ಷೆಯನ್ನು ಕೊಡಿಸಿ ಕೈವಲ್ಯಪುರದಲ್ಲಿ ಮಠಸ್ಥಾಪನೆ ಮಾಡಿದರು. ಇವರೇ 1ನೇ ಗೌಡಪಾದಾಚಾರ್ಯರ ಶ್ರೀ ಭಾವಾನಂದಸರಸ್ವತಿ ಎಂಬವರಾಗಿದ್ದಾರೆ. ಪೋರ್ಚುಗೀಸರ ಧರ್ಮಚಲನವನ್ನು ತಾಳಲಾರದೆ ಗೌಡಪಾದಾಚಾರ್ಯರು ಕಾಶಿಯಲ್ಲಿ ಹೋಗಿ ನಿಂತರು ಮತ್ತು ಕೆಲವು ಪರಂಪರೆಗಳಾದ ನಂತರ ಗೋಮಾಂತಕದಲ್ಲಿದ್ದ ತಮ್ಮ ಪೀಠದ ವಿಸ್ಮರಣೆಯಾಯಿತೆಂಬುದು ಕಲ್ಪಿತವಿದೆ.

ಈ ಕುರಿತು ರುಜುವಾತು ಕೈವಲ್ಯಮಠದ ಇತಿಹಾಸದಲ್ಲಿಯೇ ಇದೆ. ಮತ್ಸ್ಯಾಹಾರಿ ಬ್ರಾಹ್ಮಣರಿಗೆ ಸನ್ಯಾಸಗ್ರಹಣದ ಅಧಿಕಾರ ಇರುವದಾಗಿ ಶ್ರೀ ಕಾಶಿಕ್ಷೇತ್ರದಲ್ಲಿದ್ದ ವಿದ್ವಾಂಸರೇ ನಿರ್ಣಯಕೊಟ್ಟಿದ್ದಾರೆ. ಮತ್ತು ಈ ನಿರ್ಣಯವನ್ನು ಅನುಸರಿಸಿಯೇ ಶ್ರೀ ಭಾವಾನಂದ ಸರಸ್ವತಿಯವರು ಸನ್ಯಾಸದೀಕ್ಷೆಯನ್ನು ಪಡೆದರು ಎಂಬ ಉಲ್ಲೇಖವು ಆ ಇತಿಹಾಸದಲ್ಲಿಯೇ ಇರುತ್ತದೆ. ಪೂರ್ವದಲ್ಲಿ ಗೋಮಾಂತಕದಲ್ಲಿ ಸ್ಮಾರ್ತಸಾಂಪ್ರದಾಯದ ಧರ್ಮಪೀಠ ಮತ್ತು ಸನ್ಯಾಸಿಗಳು ಇದ್ದದ್ದಾದರೆ ಕಾಶಿಯ ವಿದ್ವಾಂಸರಿಂದ ಇನ್ನೊಂದು ಸಾರಿ ಅನುಮತಿ ಪಡೆಯುವ ಅಗತ್ಯ ಏನಿತ್ತು ? ಸ್ಮಾರ್ತ ಸಾಂಪ್ರದಾಯಕ್ಕೆ ಆ ಕಾಲದಲ್ಲಿ ಒಂದು ಹೊಸ ಧರ್ಮಪೀಠವನ್ನು ಈ ಮತ್ತು ಆ ಪೀಠದ ಪರಂಪರೆಯನ್ನು ಸ್ಥಾಪಿಸುವುದು ಅವಶ್ಯವಾಗಿತ್ತೆಂಬದು ಸಿದ್ಧವಾಗುತ್ತದೆ.

ಶ್ರೀ ಮಂಗೇಶ ದೇವಸ್ಥಾನದಲ್ಲಿ ಸ್ಮಾರ್ತ ಸಾಂಪ್ರದಾಯದವರು ಕೂಡಿ ಮಾಡಿದ ನಿರ್ಣಯದ ಅಭಿಪ್ರಾಯ ಹೀಗಿದೆ. ಸದ್ಯ ಸ್ಮಾರ್ತ ಸಾಂಪ್ರದಾಯದಲ್ಲಿದ್ದ ಕೆಲವು ಗೃಹಸ್ಥಜನರು ಸ್ವಸಾಂಪ್ರದಾಯದ ಜನರಿಗೂ ಕುಲದೇವತೆಗಳಿಗೂ ದ್ರೋಹಮಾಡಿ ವೈಷ್ಣವ ಸಾಂಪ್ರದಾಯ ಸ್ವೀಕಾರ ಮಾಡುತ್ತಾರೆ. ಈ ಪ್ರಕಾರ ಈ ಮುಂದೆ ಸತತ ಪ್ರಚಲಿತವಾದರೆ ಭವಿಷ್ಯಕಾಲದಲ್ಲಿ ಸಮಾಜವೇ ನಷ್ಟವಾದೀತು. ಆದುದರಿಂದ ಸಮಾಜ ಸಂರಕ್ಷಣೆಯ ಬಗ್ಗೆ ಧರ್ಮಪೀಠವಿರುವದು ಅಗತ್ಯವಿದೆ. ಈ ಠರಾವಿನಲ್ಲಿ ಸೂರ್ಯರಾವ ಸರ್ ದೇಸಾಯಿ ಪ್ರಕಾಶರಾವ ಸರದೇಸಾಯಿ, ಸಬನೀಸ ವಗೈರೆ ಸದಸ್ಯರ ಸಹಿಗಳಿರುತ್ತದೆ.

ಈ ಠರಾವಿನ ಮೂಲಪ್ರತಿಯು ಕೈವಲ್ಯಪುರ ಮಠದ ದಪ್ತರದಲ್ಲಿಯೇ ಇರಬಹುದು. ಇದು ಇಲ್ಲವಾಗಿ ಅಲ್ಲಿಯ ಅಧಿಕಾರಿಗಳು ಅಭಿಪ್ರಾಯವಿದ್ದಲ್ಲಿ ಆ ಕಾಲದ ತತ್ಕಾಲದ ನಕಲು ನಾವು ಯೋಗ್ಯ ಸಮಯದಲ್ಲಿ ಜನತೆಯ ನ್ಯಾಯ ಕೋರ್ಟನಲ್ಲಿ ಹಾಜ್ರ ಮಾಡುವೆವು. ಕೇವಲವಾಗಿ ಸತ್ಯಶೋಧನದಿಂದ ಒಂದು ತಪ್ಪು ತಿಳುವಳಿಕೆಯ ನಿರಾಕರಣೆ ಆಗಬೇಕೆಂಬ ಅಭಿಪ್ರಾಯದಿಂದ ನಾವು ಮೇಲಿನ ಮಜ್ಕುರಿನ ಲೇಖನವನ್ನು ಉಲ್ಲೇಖಿಸಿದ್ದೇವೆ. ಯಾವದೊಂದು ಸಾಂಪ್ರದಾಯದ ಸ್ತುತಿನಿಂದೆಗಳು ನಮ್ಮ ಮನಸ್ಸಿನಲ್ಲಿಯೂ ಇಲ್ಲ. ಇರಲು ಕಾರಣವೂ ಇಲ್ಲ. ಇರಲಿ. ನಮ್ಮ ಲೇಖನದಲ್ಲಿದ್ದ ವಿಧಾನಗಳನ್ನು ಯಾರಾದರೂ ಪುರಾವೆಕೊಟ್ಟು ನಿರಾಕರಿಸುವಲ್ಲಿ ಆ ಕುರಿತು ನಮಗೆ ಆನಂದವೇ ಇರುತ್ತದೆ.

## 44. 'ಭಾರತಮಿತ್ರ'ದಿಂದ ಒಂದು ಮರಾಠಿ ಲೇಖನ

**'ಭಾರತಮಿತ್ರ'** ಸಂಪಾದಕ ನಾರಾಯಣಭಾಸ್ಕರ ನಾಯಕ. ವರ್ಷ 8 ಅಂಕ 1-12 ಜೂನ್ ಜುಲೈ 1934 – ಪತಾ ಭಾರತಮಿತ್ರ ಕಾರ್ಯಾಲಯ ಪೊ. ಬಿವಣ ಪ್ರಾಂತ. ಗೋವಾ – ಈ ಮಾಸಿಕ ಪತ್ರದ 213ನೇ ಪುಟದಲ್ಲಿರುವ ಲೇಖ – ಬಾಳಬೋಧ ಲಿಪಾ ಮರಾಠಿ ಭಾಷೆ – ಲೇಖ – ವೇ. ಶಾ. ಸಂ। ತರೂರಕರ ಶಾಸ್ತ್ರಿ- ದಾಮೋದರ ಶರ್ಮಾ

ಶ್ರುತಿ ಸ್ಮೃತಿ ಪುರಾಣ ಇತಿಹಾಸ ವಗೈರೆ ಗ್ರಂಥಾಚೆ ಸೂಕ್ಷ್ಮರೀತಿನ ಅವಲೋಕನ ಕೆಲ್ಯಾಸ ತ್ಯಾಂತ ವೈಷ್ಣವ ಶ್ರೀ ವೈಷ್ಣವ ಭಾಗವತ. ಕೇವಳ ಸ್ಮಾರ್ತ. ಸ್ಮಾರ್ತವೀರಶೈವ. ಶಾಕ್ತ. ಗಾಣಪತ್ಯ ಇತ್ಯಾದಿ ಸಾಂಪ್ರದಾಯ. ಆಣಿ ಶುದ್ಧದ್ವೈತ. ದ್ವೈತ – ದ್ವೈತಾದ್ವೈತ - ಶುದ್ಧಾದ್ವೈತ – ಅದ್ವೈತ – ವಿಶಿಷ್ಟಾದ್ವೈತ. ಅಶೀಂ ಮತೇಂ ಅನಾದಿ ಕಾಲಾಪಾಸೂನ ಚೋಲತಿಂ ಹೇಂ ಸಿದ್ಧಹೋತ ಆಹೇ. ಶ್ರೀ ಮದ್ಭಾಗವತಾಸಾರಖ್ಯಾ ಮಹತ್ವಪೂರ್ಣ ವ ಜಗಪ್ರಸಿದ್ಧ ಗ್ರಂಥಾಂತಕರ ವಿಷ್ಣು ಸರ್ವೋತ್ತಮತ್ವ ಮಾನಣಾರಾ ವೈಷ್ಣವ ಸಾಂಪ್ರದಾಯ ಪ್ರಾಚೀನ ಕಾಲಪಾಸೂನ ಅಸಲ್ಯಾಂಚೆ ಅಗದಿಸ್ಪಷ್ಟರೀತಿನೆ ದಶಮಸ್ಕಂದಾಚಾ ಉತ್ತರಾರ್ಧಾಂತ ದಾಖವಿಲೆಲೆ ಆಹೆ.

ವಸ್ತುಸ್ಥಿತಿ ಅಶಿ ಅಸತಾಂ ಪ್ರಭಾತ ಮಾಸಿಕಾಚಾ ಮೇ ಮಾಹೆ ಚಾ ಅಂಕಾಂತ ಪ್ರಸಿದ್ಧ ಝಾಲೆಲ್ಯಾ 'ಆರ್ಯಕಾಲೀನ ಗೋಮಂತಕ' ಯಾ ಲೇಖಾಂತ "ಪ್ರಾಚೀನ ಕಾಲಿಂ ಸರ್ವಾಂಚಾ ಏಕಚ್ ಸ್ಮಾರ್ತ ಸಾಂಪ್ರದಾಯ ಹೋತಾ. ಪಣ ಅಲಿಕಡೆ ಚಾರಪಾಂಚಶೇ ವರ್ಷಾಂತ ವೈಷ್ಣವ ಸಾಂಪ್ರದಾಯಾಚಾ ಸಿರಾಳಾತಂಸ ಝಾಲಾ" ಅಸೆಂ ಏಕವಿಪರ್ಯಸ್ತ ವಿಧಾನ ಶ್ರೀ ಜೀ. ಯಾ ಲೇಖಕಾನಿಂ ಕೆಲೆಲೆ ಆಹೆ.

"ಶ್ರೀ ಜೀ" ಯಾಂಚಾ ಸದರೀಲ ಲೇಖ ಐತಿಹಾಸಿಕ ಸ್ವರೂಪಾಚಾ ಅಸಲ್ಯಾನೆ ತ್ಯಾಂತೀಲ ಏಕಂದರ ಮಾಹಿತಿ ಸತ್ಯಾಸಧರೂನ ಅಸಣೆ ಯೋಗ್ಯಹೋತೆ ಪರಂತು ವೈಷ್ಣವ ಸಾಂಪ್ರದಾಯಾಚಾ ಮಾಹಿತಿಚಾ ಬಾಬತೀಂತ ಸದರೀಲ ಪ್ರಕಾರಾಚಿ ಢೋಬಳ ಚೂಕ ತ್ಯಾ ಕಂಡೂನ ಕಶೀ ಝಾಲೀ ಕಳತನಾಹೀ. ಯಾ ಚೂಕಿಚಾ ದುರಸ್ತಿ 'ಶ್ರೀ ಜೀ' ಕಿಂವಾ ಶ್ರೀ ಪ್ರಭಾತ ಕಾರಕರತೀಲ ಅಶೀ ಆಶಾ ಆಹೆ.

## 45. 'ಗುರುಪರಂಪಾರಾಮೃತ'ದಿಂದ

1. ಶ್ರೀ ಮಧ್ವಾಚಾರ್ಯರು ಶಾಲಿವಾಹನ ಶಕ ೧೧೬೦ (ಕ್ರಿ.ಶ. 1238) ವಿಲಂಬಿ ಸಂ। ಆಶ್ವೀಜ ಶು ೧೦ ಬುಧವಾರ ಜನ್ಮ ಶಕ ೧೨೩೯ನೇ ಪಿಂಗಳ ಸಂ। ಮಾಘ ಶು ೯ ಲ್ಲಿ ಮುಕ್ತರಾದರು.

| ಹೆಸರು | ಮುಕ್ತಿಕಾಲಗಳು |
|---|---|
| 2. ಪದ್ಮನಾಭತೀರ್ಥರು | ಕಾರ್ತಿಕ ವದ್ಯ ೧೪ |
| 3. ನರಹರಿ ತೀರ್ಥರು | ಶಕ 1255 ಶ್ರೀಮುಖ ಪುಶ್ಯ ಬ೭ |
| 4. ಮಾಧವ ತೀರ್ಥರು | ಬಾಧ್ರಪದ ಬ೭ |
| 5. ಅಕ್ಷೋಭ್ಯ ತೀರ್ಥರು | ಮಾರ್ಗಶಿರ ಕೃಷ್ಣ ೫ |

6. ಜಯತೀರ್ಥರು ೧೩೨೦ ವಿಭವ ಆಶಾಢ ಬ ೫

7. ವಿದ್ಯಾಧಿರಾಜರು ೧೩೧೪ ಅಂಗೀರಸ ವೈಸಾಖ ಶು೩

ರಾಜೇಂದ್ರ ತೀರ್ಥರು (ವ್ಯಾಸರಾಯಮಠ)

8. ಕವೀಂದ್ರ ತೀರ್ಥರು ೧೩೨೧ ಪ್ರಮಾಥಿ ಚೈತ್ರ ಶು ೯

9. ವಾಗೀಶ ತೀರ್ಥರು ೧೩೨೯ ಸರ್ವಜಿತು ಚೈತ್ರ ಬ ೨

10. ರಾಮಚಂದ್ರ ತೀರ್ಥರು ೧೩೫೮ ನಳ ವೈಶಾಖ ಶು

ಕುಂಭಕೋಣಮಠದ ವಿಭುದೇಂದ್ರ ತೀರ್ಥರು

11. ವಿದ್ಯಾನಿಧಿ ತೀರ್ಥರು ೧೩೬೬ ರಕ್ತಾಕ್ಷಿ ಕಾರ್ತಿಕ ಬ ೪

12. ರಘುನಾಥತೀರ್ಥರು ೧೪೨೪ ದುಂದುಭಿ ಮಾರ್ಗಶಿರ ಬ ೧

13. ರಘುವರ್ಯ ತೀರ್ಥರು ೧೪೭೯ ಪಿಂಗಳ ಜೇಷ್ಠ ಬ ೩

14. ರಘುತ್ತಮ ತೀರ್ಥರು ೧೫೧೭ ಮನ್ಮಥ ಪುಶ್ಯ ಶು ೧೧

(ಸಂಖ್ಯೆ 10ರಿಂದ 14ರ ತನಕ ಉತ್ತರಾದಿ ಮಠ)

ಶಕ ೧೪೭೯ರ ನಂತ್ರ ಸ್ವಲ್ಪ ಕಾಲದೊಳಗೆ ರಘುತ್ತಮತೀರ್ಥರು ಕೊಂಕಣ ವರ್ಗದ ನಾರಾಯಣ ತೀರ್ಥರಿಗೆ ಆಶ್ರಮಕೊಟ್ಟದ್ದು ಅಂದಾಜು ೧೪೮೫ ಎಣಿಸಬಹುದು. ನಾರಾಯಣ ತೀರ್ಥರು ಅದರ ಸ್ವಲ್ಪ ಕಾಲದ ಒಳಗೇನೆ ಬಸ್ರೂರ ಮಠದ ಆಚಾರ್ಯರ ಕುಟುಂಬದಲ್ಲಿ ಜೀವೋತ್ತಮತೀರ್ಥರಿಗೆ ಆಶ್ರಮಕೊಟ್ಟರೆಂತ ಕಾಣುತ್ತದೆ. ಜೀವೋತ್ತುಮತೀರ್ಥರಿಗೆ 1592ರ ಅಂದಾಜಿನಲ್ಲಿ ಆಶ್ರಮ ವಾಗಿರಬಹುದೆಂತ ಎಣಿಸಬೇಕಾಗುತ್ತದೆ. ಇವರು ಮುಕ್ತರಾದದ್ದು 1522ರ ಮುಂಚೆಯೆಂತ ಎಣಿಸಬೇಕಾಗುತ್ತದೆ. ಯಾಕಂದ್ರೆ ಇವರು ಮುಕ್ತರಾಗಿ ವಿಮಾನದಲ್ಲಿ ಹೋಗುವಾಗ್ಯೆ ಸೋದಾ ಮಠದ

ವಾದಿರಾಜತೀರ್ಥರು ಮಂಗಳಾರತಿ ಮಾಡಿದರೆಂತ ಗುರುಪರಂಪರಾಮೃತದಲ್ಲಿ ಹೇಳಿದ್ದಾರೆ.

ಇದು ನಿಜವಾದರೆ ವಾದಿರಾಜರು ಮುಕ್ತರಾದ ಶಕ ೧೫೨೨ರ ಕೆಲವುಕಾಲದ ಮುಂಚೆ ಇವರು ಮುಕ್ತರಾಗಿರಬೇಕು. ಇವರ ಪುಣ್ಯತಿಥಿ ಪರಂಪರಾಮೃತದಲ್ಲಿ ಭಾದ್ರಪದ ಶು ೫ ಎಂತ ಹೇಳಿದ್ದು ಸರಿ ಎಂತಲೂ ಇವರ ಗುರುಗಳ ಪುಣ್ಯತಿಥಿ ಪರಂಪರಾಮೃತದಲ್ಲಿ ಚೈತ್ರ ಬ ೩೦ ಎಂತ ಹೇಳಿದಾಗ್ಯೂ ಶ್ರೀ ಗೋಕರ್ಣಮಠದಲ್ಲಿ ಸಿಕ್ಕಿದ ಹಳೆರೆಕಾರ್ಡಿನಲ್ಲಿದ್ದ ಶ್ಲೋಕದಲ್ಲಿ ವೈಶಾಖ ಶು ೩ ಎಂತ ಕಾಣುತ್ತದೆ. ಅದೇ ಪ್ರಕಾರ ರಾಮಚಂದ್ರ ತೀರ್ಥರ ಮತ್ತು ದಿಗ್ವಿಜಯ ರಾಮಚಂದ್ರ ತೀರ್ಥರ ಪುಣ್ಯತಿಥಿಗಳಲ್ಲಿ ಸಹಾ ತಫಾವತು ಇರುವುದನ್ನು ಹಳೆ ಶ್ಲೋಕದಂತೆ ಸರಿ ಪಡ್ಡಿ ಇದ್ರಲ್ಲಿ ಹಾಕಿದೆ. – **ಗುರುಪರಂಪಾರಾಮೃತದಲ್ಲಿ** ನಾರಾಯಣತೀರ್ಥರ ಶಿಷ್ಯರು ವಾಸುದೇವ ತೀರ್ಥರೆಂತಲೂ ಅವರ ಶಿಷ್ಯರು ಜೀವೋತ್ತಮ ತೀರ್ಥರೆಂತಲೂ ಅವರ ಶಿಷ್ಯರು ಪುರುಷೋತ್ತಮ ತೀರ್ಥರೆಂತಲೂ ಅವರ ಶಿಷ್ಯರು ಅಣುಜೀವೋತ್ತಮ ತೀರ್ಥರೆಂತಲೂ ಹಾಕಿದ್ದಾರೆ. ಆದರೆ ನಾರಾಯಣ ತೀರ್ಥರಿಗೆ ವಾಸುದೇವ ತೀರ್ಥರೆಂಬ ಶಿಷ್ಯರಾರಿಲ್ಲ. ಅವರ ಶಿಷ್ಯರೇ ಜೀವೋತ್ತಮ ತೀರ್ಥರೆಂತಲೂ ಸದ್ರಿ ಮಠವಲ್ಲಿದ್ದ ಹಳೆಶ್ಲೋಕದಿಂದ ಕಾಣುವಾಗ್ಯೆ ವಾಸುದೇವ ತೀರ್ಥರು ಮತ್ತು ಪುರುಷೋತ್ತಮತೀರ್ಥರು ಇವರಿಬ್ಬರ ಹೆಸರು ಪರಂಪರಾಮೃತದಲ್ಲಿ ಹೊಸತಾಗಿ ಸೇರಿಸಿದ್ದೆಂತ ಕಾಣುತ್ತದೆ.

ಹಾಗೆ ಸೇರಿಸಲಿಕ್ಕೆ ಕಾರಣವೇನೆಂದರೆ ಉತ್ತರಾದಿಮಠದ ರಘೂತ್ತಮ ತೀರ್ಥರಿಂದ ನಾರಾಯಣತೀರ್ಥರಿಗೆ ಆಶ್ರಮವಾದ್ದೆಂಬ ನಿಜಸಂಗತಿಯನ್ನು ಬಿಟ್ಟು ಫಲಿಮಾರ ಮಠದ ರಾಮಚಂದ್ರ ತೀರ್ಥರು ಬದರಿಕಾಶ್ರಮಕ್ಕೆ ಹೋದಾಗ್ಯೆ ಶಾ. ಶ. ೧೩೯೮ರಲ್ಲಿ ಮಾಧವನೆಂಬ ಬ್ರಹ್ಮಚಾರಿಗೆ ಆಶ್ರಮಕೊಟ್ಟದೆಂಬಂತೆ ಬರೆದ್ದಿಂದ ಈ ಕಾಲವು ಜೀವೋತ್ತಮತೀರ್ಥರ ದಾಕ್ಷೆಯಲ್ಲಿದ್ದ ಕಾಲಕ್ಕೆ ಬಹಳ ಹಿಂದೆ ಬೀಳುವುದರಿಂದ ಆ ಕಾಲ ಭರ್ತಿಮಾಡಿಕೊಳ್ಳುವ ಬಗ್ಗೆ ಅಲ್ಲಿ ವಾಸುದೇವ ತೀರ್ಥರೆಂಬ ಹೆಸರು ಮತ್ತು ಜೀವೋತ್ತಮ ತೀರ್ಥರ ನಂತ್ರ ಪುರುಷೋತ್ತಮ ತೀರ್ಥರೆಂಬ ಹೆಸರು ಕೂಡಾ 3 ಹೆಸರುಗಳನ್ನು ಹೆಚ್ಚಿಗೆ ಸೇರಿಸಿಕೊಂಡಿದ್ದಾರೆ. ಉತ್ತರಾದಿಮಠದ ಯತಿಗಳಿಗೆ ವಡೇರ ಎಂತ ನಡೆದು ಬರುವ ಹೆಸರು ಅವರ ಪಾರಂಪರ್ಯದಿಂದ ಆಶ್ರಮವಾದ ಗೋಕರ್ಣಮಠದ ಯತಿಗಳಿಗೆ ಸಹಜವಾಗಿ ನಡೆದುಬರುತ್ತದೆ.

ಹೀಗಿದ್ದಾಗ್ಯೂ ಪರಂಪರಾಮೃತದಲ್ಲಿ ನಾರಾಯಣತೀರ್ಥರಿಗೆ ಫಲಮಾರ ಮಠದಿಂದ ಆಶ್ರಮವಾದ್ದೆಂತ ಬರೆದ್ದ್ರಿಂದ ಇವರಿಗೆ ವಡೇರ ಎಂಬ ಹೆಸರು ಎಲ್ಲಿಂದ ಬಂತೆಂಬ ಪ್ರಶ್ನೆ ಸಹಜವಾಗಿ ಹುಟ್ಟುತ್ತದೆ. ಅದಕ್ಕಾಗಿ ಕೆಳದಿ ಸಂಸ್ಥಾನದ ಶಿದ್ದಣ್ಣ ನಾಯ್ಕರೆಂಬ ಅರಸರು ತಮಗಿದ್ದ ಬಿರುದು ನಾರಾಯಣತೀರ್ಥರಿಗೆ ಕೊಟ್ಟರೆಂತ ಬರೆದರು. ಆದ್ರೆ ನಾರಾಯಣ ತೀರ್ಥರಿಗೆ ಆಶ್ರಮವಾದ್ದೆಂಬ 1398ರ ಸಮೀಪದಲ್ಲಿ ಕೆಳದಿ ಸಂಸ್ಥಾನದ ಅರಸುತನ ಹುಟ್ಟಲಿಲ್ಲ. ಆ ಸಂಸ್ಥಾನದಲ್ಲಿ ಶಿದ್ದಣ್ಣ ನಾಯ್ಕರೆಂಬ ಅರಸರಾಗಲೂ ಇಲ್ಲ. ಆ ಮನೆತನದ ಅರಸರು ಬರೇ ನಾಯ್ಕರೆಂಬ ಹೆಸರು ಹಾಕುತ್ತಿದ್ದರಲ್ಲದೇ ವಡೇರೆಂತ ಹಾಕಿಕೊಂಡದಿಲ್ಲಾ. ಆದುದರಿಂದ ನಾರಾಯಣ ತೀರ್ಥರಿಗೆ ವಡೇರೆಂಬ ಬಿರುದು ಅರಸರು ಕೊಟ್ಟದ್ದಲ್ಲಾ. ಉತ್ತರಾದಿ ಮಠದಿಂದಲೇ ಬಂದದ್ದೆಂತ ಸ್ಪಷ್ಟವಾಗುತ್ತದೆ.

**ಗುರುಪರಂಪಾರಾಮೃತ**ದಲ್ಲಿ ದಿಗ್ವಜಯೀಂದ್ರ (ರಾಮಚಂದ್ರ ತೀರ್ಥರ ಶಿಷ್ಯ) ರಘುಚಂದ್ರ ತೀರ್ಥರು) ಇವರು ಶಕ ೧೫೯೭ ರಾಕ್ಷಸ ಸಂ ಪುಶ್ಯ ೧೫ಲ್ಲಿ ಹೊನ್ನಾವರದಲ್ಲಿ ಸಮಾಧಿಸ್ಥರಾಗಿದ್ದಾರೆ. ಒಟ್ಟಿಗೆ 15 ವರ್ಷಗಳ ಕಾಲ ಇದ್ದಾರೆಂತ ದಾಖಲೆ ಸಿಕ್ಕುತ್ತದೆ. ಈ ಕಾಲದೊಳಗೆ ಹಿಜರಿ ೧೦೮೧ 1670ನೇ ಸಪ್ಟಂಬರ್‌ದಲ್ಲಿ ಕಾಶಿಯಲ್ಲಿ ಗೋಕರ್ಣಮಠ ಕಟ್ಟಲಿಕ್ಕೆ ಸ್ಥಳ ಕ್ರಯಮಾಡಿದ್ದಾರೆ ಯಂತ ಕಾಣುತ್ತದೆ. ಇವರು ಅಷ್ಟಮಠ ಮಾಡುವ ಬಗ್ಗೆಯೆ ಸುಮಾರು 5 ಜನರಿಗೆ ಆಶ್ರಮಕೊಟ್ಟರೆಂತಲೂ ಆ ಪೈಕಿ 3 ಜನರು ಸತ್ತು ಸಂಯಮೀಂದ್ರ ಮತ್ತು ಲಕ್ಷ್ಮೀನಾರಾಯಣ ತೀರ್ಥರು ಉಳಿದರೆಂತಲೂ ಆ ಪೈಕಿ ಸಂಯಮೀಂದ್ರತೀರ್ಥರು ಕಾಶಿಗೆ ಹೋಗಿ ಮಠ ಮಾಡಿ ಕಾಶೀಮಠದ ಆದ್ಯಗುರುಗಳಾದರೆಂತಲೂ ಬರೆದಿದ್ದಾರೆ.

ಉಳಿದ ಲಕ್ಷ್ಮೀನಾರಾಯಣ ತೀರ್ಥರು ಗೋಕರ್ಣ ಮಠದಲ್ಲಿ ಸಿಕ್ಕಿದ ಪಾರಂಪರ್ಯ ಬರೆದಿಟ್ಟವರು. ಅವರು ಹೀಗೆ ಬರೆಯಲಿಲ್ಲಾ. ಮಾತ್ರವಲ್ಲಾ ಶ್ರೀ ಕಾಶಿಮಠದ ಯಾದವೇಂದ್ರ ತೀರ್ಥ 4ನೇ ಗುರು ಮತ್ತು ರಾಘವೇಂದ್ರ ತೀರ್ಥರ 5ನೇ ಗುರುಗಳು ಕಾಶಿಮಠದವರು ಇದ್ದರೆಂತ ಕಾಶೀಮಠದಲ್ಲಿ ಅನೇಕ ದಾಖಲೆಗಳುಂಟು. ಈ ಕಾರಣದಿಂದ **ಗುರುಪರಂಪರಾಮೃತ**ದಲ್ಲಿ ಈ ಕುರಿತು ಬರೆದ ಸಂಗ್ತಿಗಳು ತೀರಾ ಕಲ್ಪನೆಯವುಗಳೆಂತ ಸ್ಪಷ್ಟವಾಗ್ತದೆ.

ಫಲಮಾರಮಠದ ರಾಮಚಂದ್ರತೀರ್ಥರು ಶಕ ೧೫೬೮ರಲ್ಲಿ ಬದರಿಕಾಶ್ರಮಕ್ಕೆ ಹೋದ್ದಾಗಲೀ ಅಲ್ಲಿ ಮೋಕ್ಷವಾದ್ದಾಗಲೀ ಇಲ್ಲ. ಅವರು ಶಕ ೧೪೨೪ರಲ್ಲಿ ಶಿಷ್ಯರ ಸಮೇತ ಪಂಡರಪುರಕ್ಕೆ ಹೋದಾಗ ಅಲ್ಲಿ ದೇಹ ವಿಸರ್ಜನೆ ಮಾಡಿದರೆಂತ ಅವರ ಮಠದವರು ಪ್ರಕಟಿಸಿ ಪರಂಪರೆಯಲ್ಲಿ ಕಾಣುತ್ತದೆ. ಈ ಪರಂಪರೆಯ ಸಣ್ಣ ಪುಸ್ತಕವನ್ನು

ಶ್ರೀ ದ್ವಾರಕಾನಾಥ ತೀರ್ಥರಿಗೆ ಗಂಗೊಳ್ಳಿಯಲ್ಲಿ ಸ್ವತಹಾ ಕೊಟ್ಟಿರುತ್ತೇನೆ.

ಶ್ರೀ ಗೋಕರ್ಣಮಠದಲ್ಲಿ ಸಿಕ್ಕಿದ ಶ್ರೀ ಲಕ್ಷ್ಮೀನಾರಾಯಣ ತೀರ್ಥರು ಬರೆದಿಟ್ಟ ಶ್ಲೋಕಗಳಲ್ಲಿ ಕಾಣುವಂತೆ ಉತ್ತರಾದಿ ಮಠದ ರಘುತ್ತಮತೀರ್ಥರು (ಬ್ರಹ್ಮಚರ್ಯಸಂನ್ಯಾಸ) ಗೋಕರ್ಣಮಠದ ನಾರಾಯಣತೀರ್ಥರಿಗೆ ಆಶ್ರಮ ಕೊಟ್ಟರೆಂಬುದು ಸತ್ಯವೆಂತ ಕಾಣುತ್ತದೆ.

ಗೋಕರ್ಣಮಠದ ಶ್ರೀ ಲಕ್ಷ್ಮೀನಾರಾಯಣ ತೀರ್ಥರು ಮಾಡಿ ಇಟ್ಟ ಶ್ಲೋಕಗಳಲ್ಲಿ ಕೊಚ್ಚಿಯಲ್ಲಿ ಕಲಿವರ್ಷ ೪೬೯೧ ಅಂದ್ರೆ ಶ. ವರ್ಶ ೧೫೧೨ ವಿಕ್ರಮ ಸಂ। ರದಲ್ಲಿ ಯುವೀಯ (ಕಿರಿಯ) ಜೀವೋತ್ತಮ ಪ್ರತಿನಿಧಿಗಳಾಗಿ ಭಟ್ಕಳ ಗೃಹಸ್ಥರು ಕೊಚ್ಚಿಗೆ ಹೋಗಿದ್ದರೆಂತ ಬರೆದಿಟ್ಟದ್ರಿಂದ ಶಕ 1512ರ ಮುಂಚೆ ದೊಡ್ಡ ಜೀವೋತ್ತಮತೀರ್ಥರು ಮುಕ್ತರಾಗಿದ್ದರೆಂತ ತೋರುತ್ತದೆ.

1. ನಾರಾಯಣತೀರ್ಥರು ವೈಶಾಖ ಶು 3

2. ಜೀವೋತ್ತಮ ತೀರ್ಥರು ಭಾದ್ರಪದ ಶು 5

3. ಅಣುಜೀವೋತ್ತಮ ತೀರ್ಥರು ಕಾರ್ತಿಕ ಬ ೭ (1560-1540ರಲ್ಲಿ ಇದ್ದ ದಾಕ್ಲೆ ಇದೆ)

4. ರಾಮಚಂದ್ರ ತೀರ್ಥರು ಭಾದ್ರಪದ ಶು 5 (1567-66 : ಇವರಿಗೆ ದಿಗ್ವಿಜಯ ರಾಮಚಂದ್ರ ರಘುಚಂದ್ರರು ಕೂಡ ಎರಡು ಜನ ಶಿಷ್ಯರು)

5. ದಿಗ್ವಿಜಯ ರಾಮಚಂದ್ರ ತೀರ್ಥರು 1593 ಮಘ ಶು 7

6. ರಘುಚಂದ್ರತೀರ್ಥರು 1593 ರಾಕ್ಷಸ ಪ್ರತ್ಯ ಶು 15 ಹೊನ್ನಾವರ

7. ಲಕ್ಷ್ಮೀನಾರಾಯಣ ತೀರ್ಥರು 1511-12 - 1613-1614

8. ಲಕ್ಷ್ಮೀಕಾಂತ ತೀರ್ಥರು 1619, 1621

9. ರಮಾಕಾಂತ ತೀರ್ಥರು ಶಕ 1671

10. ಕಮಲಾಕಾಂತ ತೀರ್ಥರು ಶಕ 1675 – 1710 ವರೆಗಿನ ರಾಯಸಗಳು: ಆಶ್ರಮ 1675 ಶ್ರೀಮುಖ ಸಂ। ಚೈತ್ರ ಬಹುಳ ೫ ರವಿವಾರ

11. ಶ್ರೀಕಾಂತ ತೀರ್ಥರು 1692

12. ಭೂವಿಜಯರಾಮಚಂದ್ರತೀರ್ಥರು 1713, 1725 ಚೈತ್ರದ ರಾಯಸ 1725 ರುಧಿರೋದ್ಗಾರಿ ಮಾರ್ಗಶಿರ ಶು ೯ ಅಂಕೋಲಾ

13. ರಮಾನಾಥ ತೀರ್ಥರು 1726, ರಕ್ತಾಕ್ಷಿ ಅ. ಚೈತ್ರ ಶು ೯ ವೆಂಕಟಾಪುರ

14. ಲಕ್ಷ್ಮೀನಾಥ ತೀರ್ಥರು 1744 ಚಿತ್ರಭಾನು ಮಾರ್ಗಶಿರ ಶು ೯

15. ಆನಂದ ತೀರ್ಥರು ೧೭೫೦ ಸರ್ವಧಾರಿ ಶ್ರಾವಣ ಸು ೯ ಪರ್ತಗಾಳಿ

16. ಪೂರ್ಣಪ್ರಜ್ಞ ತೀರ್ಥರು ೧೮೦೧ ಪ್ರಮಾಧಿ ಜೇಷ್ಠ ಶು ೨ ಪರ್ತಗಾಳಿ

17. ಪದ್ಮನಾಭ ತೀರ್ಥರು ಸಮಾಧಿ ೧೮೧೪ ನಂದನ ಆಷಾಢ ಶು ೭ ಪರ್ತಗಾಳಿ

18. ಇಂದಿರಾಕಾಂತ ತೀರ್ಥರು ೧೮೬೪, ಚಿತ್ರಭಾನು, ಚೈತ್ರ ಬ ೭ ಕುಜವಾರ

19. ಕಮಲಾನಾಥತೀರ್ಥರು ೧೮೬೫, ಸುಭಾನು, ಚೈ ಶು ೧೧ ಶುಕ್ರವಾರ

20. ದ್ವಾರಕನಾಥ ತೀರ್ಥರು ಆಶ್ರಮ ಚಿತ್ರಭಾನು ವೈ ಬ ೭

# 46. ಕೆಲವು ಕಾಲನಿರ್ಣಯಗಳು

ಕವಳೆ ಮಠದ ಶ್ರೀ ಆತ್ಮಾನಂದ ಸರಸ್ವತಿ ಸ್ವಾಮಿಗಳ ಸಮಾಧಿ ಶಾ ಶ. 1820ನೇ ವಿಳಂಬಿ ಸಂ।ರ ಮಾರ್ಗಶಿರ ಬ 12 ರಾತ್ರಿ

**ಕೊಂಕಣಾಭ್ಯುದಯ** ತಯಾರಾದ ಕಾಲ ಗತಕಲಿ 4801 ವಿಕ್ರಮ ಸಂ।ರ ಕಾರ್ತಿಕ ಶು 15ರಲ್ಲು ನಗರದಲ್ಲಿ ಶಕ 1622

---ಕುಂಭಕೋಣ ರಾಘವೇಂದ್ರರು ಕಾಶೀಮಠದ ರಾಘವೇಂದ್ರ ಉತ್ತರಾದಿ ಮಠದ ತೀರ್ಥರು ವ್ಯಾಸರಾಯ ಮಠದ ಲಕ್ಷ್ಮೀನಾಥ ತೀರ್ಥರು ವ ಗೋಕರ್ಣ ಮಠದ ಲಕ್ಷ್ಮೀನಾರಾಯಣ ತೀರ್ಥರು ಕಾಲ ಶಕ 1593 ರಘುಚಂದ್ರ ತೀರ್ಥರು 1594 ವ 1597 ರಾಕ್ಷಸ

ಲಕ್ಷ್ಮೀನಾರಾಯಣ ತೀರ್ಥ 1606 ರಕ್ತಾಕ್ಷಿ

ದಿಗ್ವಿಜಯ ರಾಮಚಂದ್ರ ತೀರ್ಥ ಶಕ 1571 ವಿರೋಧಿ – 1590 ಕೀಲಕ ಸಂ ಮಾರ್ಗಶಿರ ಶು 15ಲ್ಲು ಇದ್ದಾರೆ. ಶ್ರೀ ಜೀವೋತ್ತುಮ ತೀರ್ಥರು 1591

1722 ಶಾಲಿವಾಹನ ಕ್ರಿ.ಶ. 1800 ರೌದ್ರಿ ನಾಮ ಸಂ।ರ ಫಾಲ್ಗುಣ ವ 10 ಲ್ಲು ಕುಂಭಕೋಣ ಮಠದ ಭುವನೇಂದ್ರರ ಶಿಷ್ಯ ಸುಬೋಧೇಂದ್ರ ತೀರ್ಥರು ಶ್ರೀ ಗೋಕರ್ಣ ಮಠದ ರಾಮಚಂದ್ರತೀರ್ಥರು (ಇವರು ಭೂವಿಜಯ ರಾಮಚಂದ್ರ ತೀರ್ಥ) ಧರಿಸಿ ಸಂಚಾರ ಮಾಡುವಾಗ್ಯೆ ಅವರಿಗೆ ಆತಂಕವಾಗದಂತೆ ನೋಡಿಕೊಳ್ಳಬೇಕಾಗಿ ತಮ್ಮ ಶಿಷ್ಯ ವರ್ಗದವರಿಗೆ ರಾಯಸ ಕಳುಹಿಸಿದ್ದಾರೆ.

ಕವಳೆ ಮಠದ ಶ್ರೀ ಆತ್ಮಾನಂದ ಸರಸ್ವತಿ ಸ್ವಾಮಿಗಳು ಸಮಾಧಿ ಶಾ. ಶ. 1820ನೇ ವಿಳಂಬಿ ಸಂ।ರ ಮಾರ್ಗಶಿರ ಬ 12 ಶನಿವಾರ ರಾತ್ರಿ

ಶ್ರೀ ಗೋಕರ್ಣ ಮಠದ ಶ್ರೀ ಇಂದಿರಾಕಾಂತ ತೀರ್ಥ ಸ್ವಾಮಿಗಳ ಸಮಾಧಿ ಚಿತ್ರಭಾನು ಚೈತ್ರ ಬ 7 ಕುಜವಾರ

ಶ್ರೀ ಕಮಲಾನಾಥ ತೀರ್ಥರ ಸಮಾಧಿ ಸುಭಾನು ಚೈತ್ರ ಶು 11 ಶುಕ್ರವಾರ (16–4–43)

ಶ್ರೀ ದ್ವಾರಕಾನಾಥ ತೀರ್ಥ ಸ್ವಾಮಿಗಳಿಗೆ ಆಶ್ರಮವಾದ್ದು – ಚಿತ್ರಭಾನು ಸಂ। ವೈಶಾಖ ಬ 7 ಶ್ರೀ ಗೋಕರ್ಣ ಮಠದ ರೆಕಾರ್ಡಿನಿಂದ 'ಬರಕೊಂಡದ್ದು.

ಶ್ರೀ ಪದ್ಮನಾಭ ತೀರ್ಥರ ಪುಣ್ಯತಿಥಿ – ನಂದನ ಸಂ। ರ ಆಶಾಡ ಶು 7 ಶಕ 1814

ಶ್ರೀ ಪೂರ್ಣ ಪ್ರಜ್ಞ ತೀರ್ಥ ಪುಣ್ಯತಿಥಿ – ಪ್ರಮಾಥಿ ಜೇಷ್ಠ ಶು 2 ಶಕ 1801 ಪೂರ್ವಾಶ್ರಮ ಮುಂಡಗೇರಿ ಮಠದ ಅರ್ಚಕ ಭಟ್ರ ಪೈಕಿ

ಶ್ರೀ ಆನಂದ ತೀರ್ಥರ ಪುಣ್ಯತಿಥಿ – ಸರ್ವಧಾರಿ ಸಂ। ರ ಶ್ರಾವಣ ಶು 9 ಶಕ 1750

ಶ್ರೀ ಲಕ್ಷ್ಮೀನಾಥ ತೀರ್ಥ ಪುಣ್ಯತಿಥಿ – ಚಿತ್ರಭಾನು ಸಂ। ಮಾರ್ಗಶಿರ ಶುಕ್ಲ 9 1744

ಶ್ರೀ ರಮಾನಾಥ ತೀರ್ಥ ಪುಣ್ಯತಿಥಿ – ರಕ್ತಾಕ್ಷಿ ಸಂ।ರ ಅಧಿಕ ಚೈತ್ರ ಶು 9 1726

ಶ್ರೀ ಭೂವಿಜಯ ರಾಮಚಂದ್ರ ತೀರ್ಥ – ಸಮಾಧಿ ರುಧಿರೋದ್ಗಾರಿ ಮಾರ್ಗಶಿರ ಶು 9 1725 ಆಶ್ರಮವಾದ 1679 ಈಶ್ವರ

ಶ್ರೀಕಾಂತ ತೀರ್ಥ ಪುಣ್ಯತಿಥಿ – ವಿಜಯಾ ಸಂ।ರ ಶಕ 1695ರಲ್ಲಿದ್ದಾರೆಂದು ಕುಂಭಕೋಣ ಮಠದ ವರದೇಂದ್ರ ತೀರ್ಥರು ಬರೆದ ಸ್ನೇಹಪತ್ರದಿಂದ ತೋರುತ್ತದೆ. ಶಕ 1675 ಶ್ರೀಮುಖ ಉತ್ತರಾ ಚೈತ್ರ ಕೃ 5 ರವಿವಾರ ಶ್ರೀಕಾಂತರಿಗೆ ಆಶ್ರಮವಾದ್ದು.

ಮೂಲ್ಕಿ ಶ್ರೀ ವೆಂಕಟರಮಣ ಸ್ಥಾಪಿತವಾದದ್ದು ಶಾಲಿವಾಹನಶಕ ೧೩೪೬ ಮಾರ್ಗಶಿರಮಾಸ

ಶಾಲಿವಾಹಾಖ್ಯ ಭೂಭೃದ್ವರಕರಶರದಾ ಮಿಂದುಮಾನ ಕ್ರಮೇಣ ।
ಷಟ್‌ಚತ್ವಾರಿಂಶದಬ್ದೇ ತ್ರಿಶತ ಸಹಸ್ರೇಣಾರ್ಚಿತೇ ಮಾರ್ಗಶೀರ್ಷೆ ॥
ವಿದ್ಯಾರತ್ನಾಕರಾಖ್ಯೈಃ ಯತಿಕುಲಮಣಿಭಿಃಸ್ಥಾಪಿತೋ ಭೋಗಮೂರ್ತಿಃ ।
ಪಾಯಾದ್ವೆ ನಾರಸಿಂಹೋ ತ್ರಿಭುವನವಿಜಯಾ ಮೂಲಿಕಾ ಪಟ್ಟಣಸ್ಥ ॥

ಆದ್ರೆ ಸದ್ರಿ ದೇವಸ್ಥಾನದಲ್ಲಿ ನಿತ್ಯದಲ್ಲಿ ದೀವಟಿಗೆ ಸಲಾಂನಲ್ಲಿ "ವಿಜಯೀಂದ್ರ ಕೃತಪ್ರತಿಷ್ಠಾ" ಎಂತ ನರಸಿಂಹ ದೇವರಿಗೆ ಹೇಳುತ್ತಾರೆ. ವಿಜಯೇಂದ್ರರು ಕುಂಭಕೋಣ ಮಠದ ಸ್ವಾಮಿಗಳು. ನಮ್ಮ ಕಾಶೀಮಠದ ಪ್ರಥಮ ಗುರುಗಳಾದ ಯಾದವೇಂದ್ರ ತೀರ್ಥರಿಗೆ ಆಶ್ರಮ ಕೊಟ್ಟವರು. ಅವರು ಶಾಲಿವಾಹನ ಶಕ 1517ನೇ ಮನ್ಮಥ

ಸಂ ಜೇಷ್ಠ ಬ ೧೩ರಲ್ಲಿ ವೃಂದಾವನಸ್ಥರಾಗಿದ್ದಾರೆ. ಆದುದರಿಂದ ನರಸಿಂಹ ದೇವರ ಪ್ರತಿಷ್ಠೆ ಕಾಲವು ಶಾ। ಶ। 1450ರ ನಂತ್ರವಾಗಿರಬೇಕಲ್ಲದೇ ಅದಕ್ಕಿಂತ ಮುಂಚೆ ಆಗಿರಲಿಕ್ಕೆ ಕಾರಣವಿಲ್ಲಾ.

ಗೋವೆ ರಾಜ್ಯವು ಕ್ರಿ. ಶ. 1366ರಿಂದ 1470ರ ವರೆಗೆ ವಿಜಯ ನಗರದ ಅರಸರೊಳಗೆ ಇತ್ತು. ಅನಂತ್ರ ಬಿಜಾಪುರದ ಅದಿಲಶಾಹಿ ಸುಲ್ತಾನ ಸ್ವಾಧೀನವಾಯ್ತು.-

ಶ್ರೀ ಕಾಶೀಮಠದ ಶ್ರೀ ದೇವೇಂದ್ರ ತೀರ್ಥ ಸ್ವಾಮಿಗಳವರ ಶಿಷ್ಯ ಶ್ರೀಮಾಧವೇಂದ್ರ ತೀರ್ಥ ಶ್ರೀಪಾದಂಗಳವರೀಗೆ ಮಂಗ್ಳೂರ ವಡೇರ ಮಠದ ಕೇರಿಯಲ್ಲಿರುವ ತನ್ನ ಸ್ಥಳವನ್ನು ಮಳಲಿ ಬಾಬಿ ಭಟ್ಟರು ಧರ್ಮಸಾಧನ ಮೂಲಕ ಬರಕೊಟ್ಟದ್ದು ಶಕ 1664ನೇ ದುಂದುಭಿ ಸಂ। ರದ ಪುಶ್ಯ ಶು 11 (ಕ್ರಿ. ಶ. 1743). ಶ್ರೀ ಮಠದಲ್ಲಿ ಸಾಧನ ಅಸ್ಲು ಉಂಟು –

ಹರೆಗೊಡೆಲ್ಲಿ ಜೀರ್ಣೋದ್ಧಾರ ಮಾಡಿ ಹೊಸದಾಗಿ ಕಟ್ಟಿಸಿದ ದೇವಸ್ಥಾನದಲ್ಲಿ ಶೀಲಕ್ಷ್ಮೀನರಸಿಂಹ ದೇವರನ್ನು ಪುನಃ ಪ್ರತಿಷ್ಠೆ ಮಾಡಿಸಿದ್ದು ಮನ್ಮಥ ಸಂ। ರದ ವೈಸಾಖ ಶು 7ಯು ಗುರುವಾರ (ತಾ. 28–4–1955) ಮಧ್ಯಾಹ್ನ ಕರ್ಕಾಟಕ ಲಗ್ನ.

ಬಸ್ರೂರಲ್ಲಿ ಜೀರ್ಣೋದ್ಧಾರ ಮಾಡಿ ಸಂಪೂರ್ಣ ಹೊಸದಾಗಿ ಕಟ್ಟಿಸಿದ ಮೂಡಕೇರಿ ಶ್ರೀ ರಾಮಚಂದ್ರ ದೇವಸ್ಥಾನದಲ್ಲಿ ಶ್ರೀ ಕಾಶೀಮಠದ ಶ್ರೀಮತ್ ಸುಧೀಂದ್ರ ತೀರ್ಥ ಶ್ರೀಪಾದಂಗಳವರ ದಿವ್ಯಹಸ್ತದಿಂದ ದೇವರನ್ನು ಪುನಃ ಪ್ರತಿಷ್ಠೆಮಾಡಿಸಿದ್ದು ಮನ್ಮಥ ಸಂ। ರದ ವೈಸಾಖ ಬ 5 ಯು ಗುರುವಾರ (ತಾ. 12–5–1955) ದಿವಾಘಟಿ 13–30 (ಸ್ಟೆಂಡಾರ್ಡ್ ಘಂಟೆ 11–32) ಕರ್ಕಾಟಕ ಲಗ್ನದಲ್ಲಿ.

ಅದೇ ಶ ವೈಸಾಖ ವದ್ಯ ೬ ಯು ಶುಕ್ರವಾರ (13–5–1955) ಮಧ್ಯಾಹ್ನ (ಘಂಟೆ 12–77) ಅಭಿಜಿನ್ಮುಹೂರ್ತದಲ್ಲಿ ಅದೇ ದೇವಸ್ಥಾನದಲ್ಲಿ ಶ್ರೀಸ್ವಾಮಿಗಳ ಸನ್ನಿಧಿಯಲ್ಲಿ ಚಿ. ಭಾಸ್ಕರನ ಮಗ ಗಣೇಶನಿಗೆ ಬ್ರಹ್ಮೋಪದೇಶ ಕೊಡ್ಸಿ ಅದೆ.

ಬಸ್ರೂರ ಶ್ರೀ ರಾಮಚಂದ್ರ ದೇವಸ್ಥಾನಕ್ಕೆ ಶ್ರೀ ಗೋಕರ್ಣಮಠದ ಶ್ರೀ ದ್ವಾರಕನಾಥ ತೀರ್ಥಪಾದಂಗಳವರು ತಾ. 15–3–1956ನೇ ದಿನ ಸಾಯಂಕಾಲ ದಯಮಾಡಿಸಿ ಉಳಕೊಂಡು ತಾ. 17–3–1956ನೇ ದಿನ ಸಾಯಂಕಾಲ ಹೊರಟು ಗಂಗೊಳ್ಳಿಗೆ ದಯಮಾಡಿಸಿದರು.

ಶ್ರೀರಾಮಚಂದ್ರ ದೇವಸ್ಥಾನಕ್ಕೆ ಶ್ರೀ ಚಿತ್ರಾಪುರ ಮಠದ ಆನಂದಾಶ್ರಮ ಸ್ವಾಮಿಗಳವರು ತಾರೀಕು 4-4- 1956ನೇ ಬುಧವಾರ ಸಾಯಂಕಾಲ ದಯಮಾಡಿಸಿ ಉಳಕೊಂಡು ತಾ. 6-4-1956 ಸಾಯಂಕಾಲ ವಾಪ್ಸು ಹೊರಟು ಹೋದರು. ಇವರು ಶ್ರೀರಾಮಚಂದ್ರ ದೇವರಿಗೆ ಪೂಜೆ ಮಾಡಿದರು.

ಶ್ರೀ ಶೃಂಗೇರಿ ಜಗದ್ಗುರು ಪೀಠಸ್ಥರಾದ ಶ್ರೀ ವಿದ್ಯಾಭಿನವತೀರ್ಥ ಭಾರತಿ ಶ್ರೀಪಾದಂಗಳವರು ತಾ 8-5-1956ನೇ ದಿವ್ಸ ಸಾಯಂಕಾಲ ಹಾಲಾಡಿ ಮಾರ್ಗವಾಗಿ ಬಸ್ರೂರಿಗೆ ದಯಮಾಡ್ಸಿ ಪ್ರಥಮತ ಶ್ರೀ ಗೋಕರ್ಣಮಠದಲ್ಲಿ ಶ್ರೀ ದೇವರ ದರ್ಶನ ಮಾಡಿ ಅಲ್ಲಿಂದ ಅವರ ಚಿನ್ನದ ಪಾಲ್ಕಿ ಹತ್ತಿ ಪಡುಕೆರೆ ವೆಂಕಟರಮಣ ದೇವಸ್ಥಾನ ರಾವತಕೇರಿ ಮಾರ್ಗವಾಗಿ ಶ್ರೀ ಮಹಾಲಿಂಗೇಶ್ವರ ದೇವಸ್ಥಾನವ ಎದ್ರು ಬಂದು ಅಲ್ಲಿಂದ ತೆಂಕಬಗ್ಲ ಶ್ರೀ ರಾಮಚಂದ್ರ ದೇವಸ್ಥಾನದ ವರೇಗೆ ಹೋಗಿ ಅಲ್ಲಿಂದ ಶ್ರೀ ಮಹಾಲಿಂಗೇಶ್ವರ ದೇವಸ್ಥಾನದ ಪಶ್ಚಿಮ ಬದಿಮಾರ್ಗವಾಗಿ ಉತ್ತರ ದಿಕ್ಕಿನಲ್ಲಿರುವ ಪೇಟೆ ಮಾರ್ಗವಾಗಿ ಮೂಡಕೆರಿ ಕೆರೆಕಟ್ಟೆಯಲ್ಲಿ ನೇಪಾಳ ಸುಬ್ರಹ್ಮಣ್ಯ ಅಡಿಗರು ಕಟ್ಟಿಸಿದ ಹೊಸಮನೆಯಲ್ಲಿ ಉಳಕೊಂಡರು.

ತಾ. 9-5-1956ನೇ ದಿವ್ಸ ಶ್ರೀ ಮಹಾಲಿಂಗೇಶ್ವರ ದೇವಸ್ಥಾನಕ್ಕೆ ಪಾಲ್ಕಿ ಹತ್ತಿ ಹೋಗಿ ಅಲ್ಲಿ ಸ್ನಾನ ಮಾಡಿ ಶ್ರೀ ದೇವರ ಪೂಜೆ ಮಾಡಿ ಅಲ್ಲಿ ಬಸ್ರುರ ಪಟೇಲ ಶ್ರೀ ತೇಜಪ್ಪಶೆಟ್ರು ಸಪತ್ನಿಕರಾಗಿ ತ್ರಿಶತಿಪಾದಪೂಜೆ ಮಾಡಿದ್ರು.

ತಾ. 10-5-1956ನೇ ದಿನ ಅವರ ಅಸ್ತವ್ಯದಲ್ಲಿ ಸ್ನಾನ, ಆಹ್ನಿಕ ಪೂಜೆ ಮುಗ್ಸಿ ೮ ಎ. ಎಂ. ಗೆ ಪಾದಚಾರಿಯಾಗಿ ನಮ್ಮ ರಾಮಚಂದ್ರ ದೇವಸ್ಥಾನಕ್ಕೆ ದಯಮಾಡಿಸಿ ಅಲ್ಲಿ ಶ್ರೀ ದೇವರಿಗೆ ಸ್ವತಹಾ ಶೋಡಶೋಪಚಾರ ಪೂಜೆ ಮಾಡಿ ಮಂಗಳಾರತಿ ಮಾಡಿ ಹೊರಗೆ ಬಂದು ಹೆಬ್ಬಾಗಿಲ ದಕ್ಷಿಣ ಬದಿ ಚಾವಡಿಯಲ್ಲಿ ಕೂತುಕೊಂಡ ನಂತ್ರ ಆ ದಿನ ನಮಗೆ ವೃದ್ಧಿ ಸೂತಕವಿದ್ದ ದೆಶೆಯಿಂದ ನಸ್ನ ಮೊಮ್ಮಗ ಜಿ. ಪಾಂಗಾಳ ದೇವದಾಸ ನಾಯ್ಕನಿಂದ ತ್ರಿಶತಿ ಪಾದ ಪೂಜೆ ಮಾಡ್ಸಿತು. ಅನಂತ್ರ ಅಲ್ಲಿ ಕೂಡಿದವರೆಲ್ಲರಿಗೆ ತೀರ್ಥ ಪ್ರಸಾದ ವಿತರಣೆ ಮಾಡಿದ್ರು. ಶ್ರೀ ರಾಮಚಂದ್ರ ದೇವರಿಗೆ ಕಾಣಿಕೆ ಮಾಡಿದ್ದಾರೆ. ಅರ್ಚಕ ನಾಗಪ್ಪಾಚಾರ್ಯರಿಗೆ ದಕ್ಷಿಣೆ ಕೊಟ್ಟಿದ್ದಾರೆ.

# 47. ಕೆಳದಿ ಅರಸರ ಆಳ್ವಿಕೆ

1. ಹುಲಿ ಬಸಪ್ಪ ನಾಯ್ಕನ ಮಗ ಚೌಡಪ್ಪ ನಾಯ್ಕನು ಪಾಳೆಗಾರನಾಗಿ ಇಸ್ವಿ 1499–1513ರ ತನಕ ಕಾರಭಾರ ನಡ್ಸಿದಾ. ಅವನ ಮಗ ಭದ್ರಯ್ಯನಿಗೆ ವಿಜಯನಗರದ ಅರಸನ ಸದಾಶಿವ ನಾಯಕನೆಂಬ ಹೆಸರು ಕೊಟ್ಟು ತನ್ನ ಮಾಂಡಳಿಕ ಅರಸನಾಗಿ ಮಾಡಿದ ಶಾಲಿವಾಹನ ಶಕ. ಇಸ್ವಿ

2. ಸದಾಶಿವ ನಾಯಕಾ – 1ನೇಯವನ ಮಗ
   1513–1545 1435–1467

3. ಸಂಕಣ ನಾಯಕ I – 2ನೆಯವರ ಮಗ
   1545–1558 1467–1480

4. ಸಂಕಣ ನಾಯಕ II – 3ನೆಯವನ ತಮ್ಮ
   1558–1570 1480–1492

5. ರಾಮರಾಜ ನಾಯಕ 3ನೆಯವನ ಮಗ
   1570–1582 1492–1504

6. ವೆಂಕಟಪ್ಪ ನಾಯಕ I 5ನೆಯವನ ತಮ್ಮ
   1582–1629 1504–1551

7. ವೀರಭದ್ರ ನಾಯಕಾ 6ನೆಯವನ ಮೊಮ್ಮಗ ಮತ್ತು ಭದ್ರಪ್ಪನಾಯ್ಕನ ಮಗ) 1629–1645 1551–1567

8. ಶಿವಪ್ಪನಾಯಕ – 4ನೆಯವನ ಮೊಮ್ಮಗ
   1645–1660 1567–1582

9. ವೆಂಕಟಪ್ಪನಾಯಕ II 8ನೆಯವನ ತಮ್ಮ
   1660–1661 1582–1583

10. ಭದ್ರಪ್ಪನಾಯಕಾ 8ನೆಯವನ ಮಗ
    1661–1663 1583–1585

11. ಸೋಮಶೇಖರ ನಾಯಕ I 10ನೆಯವನ ತಮ್ಮ
    1663–1671 1585–1593

12. ಚನ್ನಮ್ಮಾಜಿ 11ನೆಯವನ ವಿಧವೆ
    1671–1697 1593–1619

13. ಬಸಪ್ಪ ನಾಯಕ I 12ನೆಯವರ ದತ್ತದ ಮಗ

1697–1714 1619–1636

14. ಸೋಮಶೇಖರ ನಾಯಕಾ II 13ನೆಯವನ ಮಗ

1714–1739 1636–1661

15. ಬಸಪ್ಪನಾಯಕಾ 14ನೆಯವರ ತಮ್ಮ (ವೀರಭದ್ರನಾಯ್ಕನ ಮಗ)
1739–1754 1661–1676

16. ಚನ್ನಬಸಪ್ಪ ನಾಯಕಾ 15ನೆಯವನ ದತ್ತದ ಮಗ
1754–1757 1676–1679

17. ವೀರಮ್ಮಾಜಿ 15ನೆಯವನ ವಿಧವೆ

1757–1763 1679–1685

18. ಸೋಮಶೇಖರ ನಾಯಕಾ III 17ಯವನ ದತ್ತದ ಮಗ, ಅಧಿಕಾರಕ್ಕೆ ಬರಲಿಲ್ಲಾ. ವೀರಮ್ಮಾಜಿಯಿಂದಲೇ ರಾಜ್ಯವನ್ನು ಹೈದರಾಲಿಯು ಕಳಕೊಂಡದ್ದು1763.

ಕ್ರಿಸ್ತಶಕ 1697ರಿಂದ 1714ರ ವರೇಗೆ ಆಳ್ವಿಕೆ ಮಾಡಿದ ಕೆಳದಿ ಬಸಪ್ಪ ನಾಯ್ಕರ ಕಾಲದಲ್ಲಿ (1) ಹೊನ್ನಾವರ ಮಹಾಲೆ (2) ಹೊಸಂಗಡಿ ಶಿದ್ದಾಪುರದ ಗಂಧದ ರಂಗಕಾಮತ್ (3) ಶಿರೂರ ಚಂದ್ರ ಕಾಮತ್ (ಕುಂದಾಪುರ ತಾಲೂಕು) ಮತ್ತು (4) ರಾಮಚಂದ್ರಯ್ಯನವರು (ಹವೀಕ) ಈ 4 ಜನರು ಅವರ ಮಂತ್ರಿಗಳಾಗಿದ್ದರೆಂತ ಭಟ್ಕಳ ಅಪ್ಪಯ್ಯನವರು ರಚಿಸಿದ ಪದ್ಯದಲ್ಲಿ ಹೇಳಿರುವುದಾಗಿ ಶ್ರೀ ಹೆಚ್. ಶಂಕರರಾಯರು (B.A., C.I.E.) ಬರೆದ **"ಚಿತ್ರಾಪುರ ಸಾರಸ್ವತ ಮಿಸಲೆನಿ"** ಎಂಬ ಪುಸ್ತಕದ 45ನೇ ಪುಟದಲ್ಲಿ ಹೇಳಿದ್ದಾರೆ. ಮತ್ತು ಅದೇ ಪುಸ್ತಕದ 47ನೇ ಪೇಜಿನಲ್ಲಿ 1739ನೇ ಇಸ್ವಿ ಸಿದ್ಧಾರ್ಥಿ ಮಾರ್ಗಶಿರ ಶು 10ಲ್ಲು IIನೇ ಬಸಪ್ಪನಾಯಕರ ಮಂತ್ರಿಯಾಗಿದ್ದ "ಮ್ಹಾಳು ಮಲ್ಲೆರ" ಮುಖಾಂತ್ರ ಮನೆ ವಾರ್ತೆ ಅನಂತಯ್ಯನವರು ಶ್ರೀಭವಾನಿ ಶಂಕರ ದೇವರ ಬಗ್ಗೆ ಕಟ್ಟಿಸಿದ ಮಠದ ಬಗ್ಗೆ ಮಿರ್ಜಾನ ಶಿಮೆ ಶಿಗನ ಹಳ್ಳಿ ಮಾಗಣೆ ಉಳವರೆ ಗ್ರಾಮದಲ್ಲಿ ೨೪ ವರಹಾನ್ನ ಭೂಮಿಯನ್ನು ದಾನಶಾಸನವಾಗಿ ಕೊಟ್ಟಿದ್ದಾರೆಂತಲೂ ಆ ಭೂಮಿ ಚಿಕ್ಕರಮನೆಯವರ ಸ್ವಾಧೀನ ಉಂಟೆಂತಲೂ ಸದ್ರಿ II ನೇ ಬಸಪ್ಪನಾಯ್ಕರು ಕ್ರಿ. ಶ. 1739ರಿಂದ 1754ರ ವರೇಗೆ ಆಳಿದವರಾಗಿರುತ್ತಾರೆ ಎಂತಲೂ ಅದೇ ಬೂಕಿನ 47–48ನೇ ಪುಟಗಳಲ್ಲಿ ಹೇಳಿದ್ದಾರೆ.

ಮೇಲ್ಕಾಣುವ ಶಿದ್ದಾಪುರ ರಂಗಕಾಮತರು ಶಿರಾಲಿ ಮಹಾಗಣಪತಿ ಮಹಾಮಾಯಾ ದೇವಸ್ಥಾನವನ್ನು ಜೀರ್ಣೋದ್ಧಾರ ಮಾಡಿಸಿ ಎದುರುಗಡೆ ಅಶ್ವತ್ಥನ ಕಟ್ಟೆ - ಕೆರೆವಗೈರೆ ಮಾಡ್ಸಿದ್ದಾರೆ -

ಆನಂತ್ರ ಸದ್ರಿ ದೇವಸ್ಥಾನವನ್ನು ಮಾರ್ಡಿ ವೆಂಕಪ್ಪನೈಕರು ಜೀರ್ಣೋದ್ಧಾರ ಮಾಡಿಸಿ ಕೆರೆಗದ್ದೆ ಎಂಬ ಆಸ್ತಿಯನ್ನು ಶ್ರೀ ದೇವರ ನೈವೇದ್ಯಕ್ಕೆ ಬಿಟ್ಟಿದ್ದಾರೆ. ಇವರು ತಿರುಪತಿಗೆ ಹೋಗುತ್ತಾ ಶಿಮೊಗ್ಗಾಛತ್ರದಲ್ಲಿ ಆನಗಳ್ಳಿ ಆಸ್ತಿಯನ್ನು ಕುಂದಾಪುರ ಶ್ರೀ ವೆಂಕಟರಮಣ ದೇವಸ್ಥಾನಕ್ಕೆ ನೈವೇದ್ಯದ ಬಗ್ಗೆ ಬಿಟ್ಟು ಸದ್ರಿ ಆಸ್ತಿಯ ಕೋರ್ಟದರ್ಕಾಸ್ತು ಪಟ್ಟೆಯ ಮೇಲೆ ಹೇವಿಳಂಬಿ ಸಂ। ರದ ಶ್ರಾವಣ ಶು ೫ಲ್ಲು (1837ನೇ ಇಸವಿ ಜುಲಾಯಿ ತಿಂಗಳು) ಸ್ವಹಸ್ತ ಬರಹದಿಂದ ಶರಾ ಬರೆದು ದಸ್ಕತು ಮಾಡಿದ ದರ್ಕಾಸ್ತು ಪಟ್ಟೆ ನಮ್ಮಲ್ಲಿ ಉಂಟು. ಅದೇ ಯಾತ್ರೆಯಲ್ಲಿ ಸ್ವರ್ಗಸ್ಥರಾದ್ದೆಂತ ವರ್ತಮಾನ.

# 48. ಕಾಶೀಮಠದ ಗುರುಗಳು

ಶ್ರೀ ಉಡ್ಪಿ ರಾಘವೇಂದ್ರ ಆಚಾರ್ಯರು (ಪಾಂಡುರಂಗ ಆಚಾರ್ಯರ ಮಕ್ಕಳು) ಬರೆದಿಟ್ಟ ಪುಸ್ತಕದಿಂದ ಎತ್ತಿ ಬರಕೊಂಡದ್ದು. ಕಾಶೀಮಠದ ಗುರುಗಳು –

1. ನಾರಾಯಣ ತೀರ್ಥರು – ವೃಂದಾವನ ಭಟ್ಕಳ – ಪುಣ್ಯತಿಥಿ ಚೈತ್ರ ಬ ೩೦

2. ರಘುಚಂದ್ರ

3. ಸಂಯಮೀಂದ್ರ

4. ಶ್ರೀ ವಿದ್ಯಾನಿಧಿ ತೀರ್ಥರು – ಇವರ ಊರು (ವರ್ಕಾಟ) ವಿಪಿನಪುರ ಪೈಗಳು. ಶ್ರೀ ಮುಲ್ಕಿ ನರಸಿಂಹ ದೇವರನ್ನು ಶಾಲಿವಾಹನಶಕ ೧೩೪೬ನೇ ಕ್ರೋಧಿ ಸಂ। ರದ ಮಾರ್ಗಶಿರ ಶು ೧೫. ದಿನ. ಇವರು ರಾಮೇಶ್ವರದಲ್ಲಿ ಮಠವನ್ನು ಸ್ಥಾಪಿಸಿ ರಾಮದೇವರನ್ನು ಪ್ರತಿಷ್ಠಿಸಿದರು. ಇವರ ವೃಂದಾವನ ಕಾಶಿ.

5. ಶ್ರೀ ಯಾದವೇಂದ್ರ ತೀರ್ಥರು – ವೃಂದಾವನ ಕಾಶಿ

6. ಶ್ರೀ ಕೇಶವೇಂದ್ರ ತೀರ್ಥರು – ವೃ – ಬಸರೂರು (ಇವರು ಶಾ. ಶ. ೧೫೩೦ರಲ್ಲಿದ್ದರೆಂತ ತೋರುತ್ತದೆ.)

7. ಶ್ರೀ ಉಪೇಂದ್ರ ತೀರ್ಥರು – ವೃ – ಕಾಶಿ ಇವರು ಶಾ. ಶ. ೧೫೯೯ರಲ್ಲಿ ಇದ್ದರು. ಪುಣ್ಯತಿಥಿ ಫಾಲ್ಗುಣ ವದ್ಯ ೩

8. ಶ್ರೀ ದೇವೇಂದ್ರ ತೀರ್ಥರು – ವೃ – ಬಂಟವಾಳ ಇವರು ಶಾ. ಶ. 1597ರಲ್ಲಿದ್ದರು.

9. ಶ್ರೀ ರಾಘವೇಂದ್ರ ತೀರ್ಥರು – ಕಾಶಿ – ಶಾ. ಶ. ೧೬೦೩ರಲ್ಲಿದ್ದರು. ತ್ರಿಪುಣತೆರೆ ಪೈಗಳು – ಪುಣ್ಯತಿಥಿ ಫಾಲ್ಗುಣ ಶು ೧೪.

10. ಶ್ರೀ ಜ್ಞಾನೀಂದ್ರ ತೀರ್ಥರು – ನಾಶಿಕ – ವೃ

11. ಶ್ರೀ ಮಾಧವೇಂದ್ರ ತೀರ್ಥರು – ವೃ – ಬೊಂಜೈ ಊರು ಆಲಪಳ್ಳಿ ಪೈಗಳು – ಪುಣ್ಯತಿಥಿ ಶ್ರಾವಣ ಶು ೫

12. ಶ್ರೀ ಯಾದವೇಂದ್ರ ತೀರ್ಥರು ವೃ – ಹೇಮಪುರ ಹೊನ್ನಾವರ

13. ಶ್ರೀ ರಾಜೇಂದ್ರತೀರ್ಥರು – ತುರವೂರು ಪುಣ್ಯತಿಥಿ ವೈಶಾಖ ವದ್ಯ 12

14. ಶ್ರೀ ಉಪೇಂದ್ರ ತೀರ್ಥರು ಕಾಶ್ಯಾಂ – ಪುಣ್ಯತಿಥಿ ಫಾಲ್ಗುಣ ವದ್ಯ

